( )

"ನೀನು ಹಾಗೆ ಹೇಳಿದರೆ ಹೇಗಾಗುತ್ತದಮ್ಮ ?'' ಎಂದು ಸಮಾಧಾನದಿಂದಲೇ ಕೇಳಿದರು ವೆಂಕಟೇಶಯ್ಯನವರು.

ಹಾಗೆ ಸಮಾಧಾನದಿಂದ ಕೇಳಿದುದು ಅವರ ಸ್ವಭಾವಕ್ಕೆ ಸರಿಯಾಗಿಯೇ ಇದ್ದಿತು. ಅವರು ವಯಸ್ಸಾದವರು. ಗಡ್ಡ ಮೀಸೆಗಳು ನೆರೆತಿದ್ದವು. ಅಷ್ಟೇ ಅಲ್ಲ. ಲೋಕಾನುಭವವೂ ಬೇಕಾದಷ್ಟಿದ್ದಿತು. ಇನ್ನೊಬ್ಬರಾದರೆ ಸಿಡಿದೆದ್ದು ಮಾತನಾಡುವಂತಹ ಸಂದರ್ಭದಲ್ಲಿಯೂ ಅವರು ಸಮಾಧಾನದಿಂದಲೇ ಮಾತನಾಡುತ್ತಿದ್ದರು.

ಭಾಗ್ಯಳು ತನ್ನ ಮೊಂಡು ಹಟವನ್ನು ಬಿಡದೇ "ಹಾಗಲ್ಲದೇ ಏನ್ರೀ. ಇವೊಂದೂ ನನಗೆ ಸರಿಬೀಳುವುದಿಲ್ಲ" ಎಂದಳು.

ಅವರುಗಳು ಮಾ ನಾಡುತ್ತಿದ್ದಾಗ ಭಾಗ್ಯಳ ತಾಯಿ ವಿಶಾಲಾಕ್ಷಮ್ಮನವರೂ, ತಂದೆ ಗುಂಡೂರಾಯರೂ ಅಲ್ಲಿಯೇ ಇದ್ದರು.

ಮಗಳಾಡುವ ಮಾತಿನ ಧೋರಣೆಯನ್ನು ಕಂಡು ವಿಶಾಲಾಕ್ಷಮ್ಮನವರಿಗೆ ರೇಗಿಹೋಗಿ ಹೇಳಿದರು.

"ಹಾಳಾಗಿ ಹೋಗಲಿ, ಬಿಡಿ ವೆಂಕಟೇಶಯ್ಯನವರೇ. ಮಾತಿಗೆ ಮಾತು ಹೇಳುತ್ತಾಳೆ. ಅವಳಿಗೆ ಮದುವೆಯೂ ಬೇಡ, ಏನೂ ಬೇಡ. ಗೆಣೇಕಂಭದ ಹಾಗೆ ನಿಂತಿರಲಿ. ನೀವೇಕೆ ಕಷ್ಟಪಡುತ್ತೀರಿ ?"

ಅಲ್ಲಿಗೂ ಭಾಗ್ಯ ಸುಮ್ಮನಾಗಲಿಲ್ಲ.

"ನಾನೂ ಅದೇ ಹೇಳಿದ್ದು. ಈ ಹೊಡಬಾಳು ಬಾಳುವುದಕ್ಕಿಂತಲೂ ಮದುವೆಯೇ ಇಲ್ಲದೇ ಇದ್ದುಬಿಡುವುದೂ ಕ್ಷೇಮ''

"ಹಾಗೇ ಮಾಡು, ಹಾಗೇ ಮಾಡು. ನಿನ್ನಂತಹ ರಕ್ಕಸಿಯನ್ನು ಃಡು ಹೋಗಿ ಅದಾವನು ತಾನೇ ಸುಖಪಡುತ್ತಾನೆ ?"

ಲ್ಲರೂ ಮಾತನಾಡಿದ ಮೇಲೆ ತಾವು ತಲೆಹಾಕದಿರಲಾರದೇ ಗುಂಡೂರು'' ತಾಯಿ, ನನ್ನ ಮಾತು ಸ್ವಲ್ಪ ಕೇಳು. ವೆಂಕಟೇಶಯ್ಯನಿಗೆ

ಬೇರೇ ಏನೂ ಕೆಲಸವೇ ಇಲ್ಲವೇ ? ಊರಿನಲ್ಲಿರುವ ಗಂಡು ಹುಡುಗರನ್ನೆಲ್ಲಾ ಹುಡುಕಿ ಕರೆದುಕೊಂಡು ಬಂದು 'ಇವಳನ್ನು ಮಾಡಿಕೊಳ್ಳುತ್ತೀರಾ'' ಎಂದು ಕೇಳುವುದೊಂದೇ ಇವನಿಗೆ ಕೆಲಸವೇ ? ಏನೋ ನನಗೂ ಅವನಿಗೂ ಇರುವ ಸ್ನೇಹಕ್ಕಾಗಿ ನಿನಗೊಂದು ಮದುವೆಯಾಗಲೀ ಎಂದು ಕಷ್ಟಪಡುತ್ತಿದ್ದಾನೆ. ನೀನು ಅಂಥವನನ್ನೇ ದಬಾಯಿಸುವುದು ಚೆನ್ನಾಗಿರುವುದಿಲ್ಲ" ಎಂದರು.

ಅವರುಗಳು ಮಾತನಾಡಿ ಭಾಗ್ಯಳನ್ನು ರೇಗಿಸಿ ಕೆಲಸ ಕೆಡಿಸುತ್ತಾರೆಂದುಕೊಂಡ ವೆಂಕಟೇಶಯ್ಯನವರು "ವಿಶಾಲಾಕ್ಷಮ್ಮ, ಗುಂಡಪ್ಪ, ನೀವುಗಳು ಸುಮ್ಮನಿರಿ. ನಾನೂ ಭಾಗ್ಯಳೂ ಮಾತನಾಡುತ್ತಿದ್ದೇವೆ. ನಾವು ನಾವೇ ಒಂದು ತೀರ್ಮಾನಕ್ಕೆ ಬರುತ್ತೇವೆ" ಎಂದು ಹೇಳಿ ಭಾಗ್ಯಳ ಕಡೆಗೆ ತಿರುಗಿ "ನಿನ್ನ ಇಷ್ಟದಂತೆಯೇ ಆಗಲಿ. ಇನ್ನು ನಾನು ಗಂಡುಗಳನ್ನು ಕರೆದುಕೊಂಡು ಬರುವುದೂ ಬೇಡ. ನೀನು ಈ ರೀತಿ ರಗಳೆ ಮಾಡುವುದೂ ಬೇಡ. ಮೊನ್ನೆ ಕರೆದುಕೊಂಡು ಬಂದಿದ್ದೆನಲ್ಲಾ. ಆ ನರಸಿಂಗರಾಯನನ್ನು ಒಪ್ಪಿ ... ಹುಡುಗ ಸ್ವಲ್ಪ ಕಪ್ಪಾದರೂ ಲಕ್ಷಣವಾಗಿದ್ದಾನೆ. ಎಲ್. ಎಂ. ... ಮಾಡಿದ್ದಾನೆ. ಸರ್ಕಾರೀ ಕೆಲಸ ಸಿಕ್ಕದಿದ್ದರೂ ಪರವಾಯಿಲ್ಲ. ...ಂದರೆ ಹೇಗೋ ನಡೆದು ಹೋಗುತ್ತದೆ'' ಎಂದರು.

...ವೇ ಅವರನ್ನು ಲಕ್ಷಣನೆನ್ನಬೇಕು''

...ಂಡಸಿಗೆ ರೂಪವಿರಬೇಕು–ಎನ್ನುವುದರಲ್ಲಿ ಅರ್ಥವಿಲ್ಲ ಭಾಗ್ಯಮ್ಮ. ... ಚೆನ್ನಾಗಿ ಸಂಪಾದನೆ ಮಾಡುವ ದಾಪತ್ತಿರಬೇಕು''

"ನೀವು ಏನೇ ಹೇಳಿ, ಆತ ನನಗೆ ಒಪ್ಪಿತವಿಲ್ಲ"

ವರನು ತನಗೆ ಒಪ್ಪಿತವಿಲ್ಲವೆಂದು ಭಾಗ್ಯ ಹೇಳಿದ್ದಷ್ಟೇ ಅಲ್ಲ. ಆ ಮಾತು ಹೇಳುವಾಗ ವರನಿಗೆ ಏಕವಚನ ಪ್ರಯೋಗ ಮಾಡಿದ್ದಳು. ಅದನ್ನು ಗಮನಿಸಿದ ಸೂಕ್ಷ್ಮಮತಿಯಾದ ವೆಂಕಟೇಶಯ್ಯನವರು ಇನ್ನು ಆ ವರನ ವಿಷಯ ಪ್ರಯೋಜನವಿಲ್ಲವೆಂದುಕೊಂಡರು.

"ಅದು ಸರಿಯಮ್ಮ. ಇಷ್ಟವಿಲ್ಲದವನನ್ನು ಮದುವೆ ಮಾಡಿಕೋ ಬೇಕೆಂದು ನಾನು ತಾನೇ ಬಲಾತ್ಕಾರ ಮಾಡುತ್ತೇನೆಯೆ ? ಒಂದು ದಿನ ಎರಡು ದಿನಗಳ ಮಾತಾದರೆ ಅದು ಬೇರೇ. ಇದು ಹಾಗಲ್ಲ. ಜನ್ಮಾದ್ಯಂತವೂ ಇರುವಂತಹ ಸಂಬಂಧ. ನಾವುಗಳು ಇಷ್ಟೆಲ್ಲಾ ಮಾಡುತ್ತಿರುವ

ತಾನೇ ಏಕೆ ? ನೀನು ಸುಖವಾಗಿರಬೇಕೆಂದಲ್ಲವೇ ? ಅದೇ ಆಗದೇ ಇದ್ದರೆ ನಾವು ಕಷ್ಟಪಟ್ಟು ಸಾರ್ಥಕವೇನು ? ಮೊನ್ನೆಯ ದಿನ ಬಂದಿದ್ದವನು ಬೇಡವಾದರೆ ಬಿಡು. ವರಗಳಿಗೇನು, ಬೇಕಾದಹಾಗಿವೆ. ನೂರು-ನೂರು ಜನರನ್ನು ಬೇಕಾದರೂ ತಂದು ನಿಲ್ಲಿಸುತ್ತೇನೆ. ಬೇಕಾದವನನ್ನು ಆರಿಸಿಕೊಂಡು ಮದುವೆ ಮಾಡಿಕೋ''

ಗುಂಡಪ್ಪ ನಗುತ್ತಾ "ನೀನಂತೂ ನೂರು ಜನರನ್ನು ತಂದು ನಿಲ್ಲಿಸುವಂತಹ ಘಟ್ಟಿಗನೇ ಹೌದು. ಭಾಗ್ಯಳೂ ಅಷ್ಟೇ. ಒಬ್ಬೊಬ್ಬನಲ್ಲಿಯೂ ಒಂದೊಂದು ಕೊಂಕು ಹೇಳುತ್ತಾಳೆ. ಆದರೆ ಈ ಸ್ವಯಂವರವನ್ನು ಏರ್ಪಡಿಸಲು ನಾನೇನು ರಾಜಾಧಿರಾಜನೇನಯ್ಯ'' ಎಂದರು.

"ಆಯಿತು, ಸ್ವಯಂವರವೇ ಎಂದುಕೋ. ಅದಕ್ಕೆ ನೀನೇನು ಮಾಡಬೇಕಾಗಿದೆ ಎಂದು ಹೀಗೆ ಪತರಗುಟ್ಟುತ್ತೀಯೆ. ಇದ್ದುದರಲ್ಲಿ ಸರಿ ಮಾಡಿ ವಿಶಾಲಾಕ್ಷಮ್ಮ ಒಂದಿಷ್ಟು ಕಾಫೀ ಉಪ್ಪಿಟ್ಟು ಮಾಡಿಕೊಡುತ್ತಾರೆ. ನೀನು ಮನೆಯಲ್ಲಿದ್ದರೂ ಆಯಿತು. ಹೊರಟು ಹೋದರೂ ಆಯಿತು'' ಎಂದು ಹೇಳಿ ವೆಂಕಟೇಶಯ್ಯ ಭಾಗ್ಯಳ ಕಡೆಗೆ ತಿರುಗಿ ಹೇಳಿದರು. ''ಆಗಲೀನಮ್ಮ. ಬೇರೇ ವರನನ್ನು ನೋಡೋಣ"

ಭಾಗ್ಯ ಅದಕ್ಕೆ ಸ್ಪಷ್ಟವಾಗಿ ಎದುರು ಹೇಳದಿದ್ದರೂ ಅವಳ ತರಹ ಪ್ರತಿ ಹೇಳಿದಂತೆಯೇ ಇತ್ತು. ಏನೋ ಗೊಣಗುಟ್ಟುತ್ತಿರುವಂತೆ ಭಾಸವಾಯಿತು.

ವೆಂಕಟೇಶಯ್ಯನವರು ''ಇನ್ನೇನಮ್ಮಾ. ನೀನು ಹೇಳಿದುದಕ್ಕೆಲ್ಲಾ ಒಪ್ಪಿಕೊಂಡರೂ ಸಹ ಇನ್ನೂ ಗೊಣಗುಟ್ಟುತ್ತಿದ್ದೀಯೆ ?" ಎಂದರು.

"ಆದರೂ ಹೀಗೆ— — —"

"ಅಂದರೆ— — —''

''ಯಾವುದೋ ಮನೆಯಲ್ಲಿ ಯಾರೋ ಬಂದು ಕುಳಿತುಕೊಳ್ಳುತ್ತಾರೆ ತಲ್ಲ ಹಾಗೆ ನಾನು ಬಂದು ಕುಳಿತುಕೊಳ್ಳುವುದು-ಕಂಡ ಕಂಡವರು ಬಂದು ಮಾರ್ಕೆಟ್ಟಿನಲ್ಲಿ ತರಕಾರೀ ನೋಡಿದಂತೆ— — —"

ಅವಳು ಮಾತು ಮುಂದುವರಿಸುವಷ್ಟರಲ್ಲಿಯೇ ವಿಶಾಲಾಕ್ಷಮ್ಮನವರು ಇದು "ಏನೇ, ದೊಡ್ಡವರು ಎಂಬುದಿಲ್ಲ ಸಣ್ಣವರು ಎಂಬುದಿಲ್ಲ.

ತೋರಿದಂತೆಲ್ಲಾ ಮಾತನಾಡುತ್ತಿದ್ದೀಯೆ. ನಿನ್ನ ಬಾಯಿಗೆ ತಡೆಯೇ ಇಲ್ಲವಾಗಿದೆ" ಎಂದು ಹೇಳಿ "ಬೇಡ. ಹೆಣ್ಣು ಮಗಳು. ಹೆಚ್ಚಿಸಿಡಬೇಡ-ಎಂದು ಬಡಿದುಕೊಂಡೆ. ಇರುವವಳು ಒಬ್ಬಳೇ ಮಗಳು ಅಂತ ಮುದ್ದುಮಾಡಿ ಮುದ್ದುಮಾಡಿ ಈ ಸ್ಥಿತಿಗೆ ತಂದರು. ಈಗ ನೋಡಿದವರು ಅವರನ್ನು ಅನ್ನುತ್ತಾರೆಯೋ, ನನ್ನನ್ನು ಅನ್ನುತ್ತಾರೆಯೋ ? ತಾಯಿಯಂತೆ ಮಗಳು, ನೂಲಿನಂತೆ ಶಾಲೆ-ಅಂತ. ಈ ಒಳಗಿನ ವಿಷಯಗಳೆಲ್ಲಾ ಯಾರಿಗೆ ಗೊತ್ತಾಗುತ್ತದೆ'' ಎಂದು ತಮಗೆ ತಾವೇ ಮಾತನಾಡಿಕೊಂಡಂತೆ ಹೇಳಿದರೂ ಗಟ್ಟಿಯಾಗಿಯೇ ಹೇಳಿದರು.

ಆಕೆ ಮಾತೇ ಆಡಲಿಲ್ಲವೆನ್ನುವಂತೆ ವೆಂಕಟೇಶಯ್ಯ ಅಂದರು.

"ಭಾಗ್ಯಮ್ಮ. ನೀನು ಹೇಳುವುದು ವಿಚಿತ್ರವಾಗಿದೆ. ಲೋಕದಲ್ಲಿ ಎಲ್ಲಿಯೂ ಇಲ್ಲದುದು ಅದು. ಮದುವೆ ಅಂದರೆ ಗಂಡು ಹೆಣ್ಣುಗಳು ಪರಸ್ಪರ ನೋಡಬೇಡವೇ ? ಒಬ್ಬರನ್ನು ಒಬ್ಬರು ಒಪ್ಪಬೇಡವೇ ? ನೋಡದೇ ಒಪ್ಪುವುದು ಹೇಗೆ ತಾನೇ ಸಾಧ್ಯ ? ನಾವೇನು ನಿನ್ನನ್ನು ಮನೆ ಮನೆಗೆ ಕರೆದುಕೊಂಡು ಹೋಗಿ ಇವಳನ್ನು ಮದುವೆ ಮಾಡಿಕೊಳ್ಳುತ್ತೀರಾ – ಎಂದು ಕೇಳುತ್ತಿದ್ದೇನೆಯೆ ? ವರಗಳೇ ಬಂದು ನೋಡಿಕೊಂಡು ಹೋಗುತ್ತಿವೆ. ಅನೂಚಾನವಾಗಿ ನಡೆದುಕೊಂಡು ಬರುತ್ತಿರುವ ಈ ಪದ್ಧತಿಯಲ್ಲಿ ಅಪಮಾನವೇನೂ ಇಲ್ಲ"

"ಆದರೆ— — —"

"ಇದರಲ್ಲಿ ಇನ್ನೂ ಆದರೇನು ಎಲ್ಲಿಬಂದಿತಮ್ಮ ? ಮಾತಿಗೆ ಹೇಳುತ್ತೇನೆ. ನಾವು ಯಾರನ್ನೋ ನೋಡಿಕೊಂಡು ಬಂದು ಅವನನ್ನು ಮದವೆಯಾಗು-ಎಂದರೆ ಅವನನ್ನು ನೀನು ಮದುವೆ ಮಾಡಿಕೊಳ್ಳುತ್ತೀಯಾ ? ಹೆಣ್ಣು ನೋಡದೇ ಮದುವೆ ಮಾಡಿಕೋ ಎಂದು ಗಂಡನ್ನಾದರೂ ಬಲಾತ್ಕಾರ ಮಾಡುವುದು ಸರಿಯೇ ? ಹೆಣ್ಣು ಗಂಡುಗಳು ಪರಸ್ಪರ ನೋಡದಿದ್ದರಾಗುತ್ತದೆಯೆ ?"

ಭಾಗ್ಯಳಿಗೆ ಇಪ್ಪತ್ತು ವರ್ಷ ವಯಸ್ಸು. ಅದರ ಮೇಲೆ ವಿದ್ಯಾವಂತಹವಳಿಗೆ ಗಂಡನ್ನೇ ನೋಡದೇ ಒಪ್ಪುವುದು ಸರ್ವಥಾ ಸರಿಯೆನಿಸುತ್ತಿರಲಿಲ್ಲ. ಆದರೆ ಗಂಡುಗಳು ಬಂದು ನೋಡುವ ಈ ತರಹದಲ್ಲಿ ಮಾತ್ರ ಅವಳಿಗೆ ಬೇಜಾರಾಗಿದ್ದಿತು.

"ಮದುವೆಯ ಮೊದಲು ಹೆಣ್ಣು ಗಂಡುಗಳು ಪರಸ್ಪರ ನೋಡ ಬೇಕೆಂಬುದನ್ನು ನಾನೂ ಒಪ್ಪಿಕೊಳ್ಳುತ್ತೇನೆ. ಆದರೆ ಈ ರೀತಿ— —"

ಮುಂದೆ ಹೇಳುವುದು ಭಾಗ್ಯಳಿಂದ ಆಗಲಿಲ್ಲ.

ಮೊದಲು ಅವಳು ಹೇಳಿದ್ದೂ ಇಷ್ಟೇ ಮಾತು. ಈಗಲೂ ಹೇಳಿ ದುದು ಇಷ್ಟೇ ಮಾತು. ಆದರೆ ಈಗ ಆ ಮಾತನ್ನು ಹೇಳಿದ ಧ್ವನಿಯಲ್ಲಿ ಹೊಸ ಅರ್ಥವು ತೋರಿತು ವೆಂಕಟೇಶಯ್ಯನವರಿಗೆ.

"ನೀನು ಹೇಳುವುದು ನನಗೆ ಅರ್ಥವಾಗುತ್ತದೆಯಮ್ಮಾ. ಅದು ನ್ಯಾಯವಾಗಿಯೂ— — —''

ಈ ಮುದುಕ ಇದ್ದಕ್ಕಿದ್ದ ಹಾಗೆಯೇ ತಿರುಗಿಕೊಂಡುಬಿಟ್ಟರಲ್ಲಾ-ಎಂದು ವಧುವಿನ ತಾಯಿ ತಂದೆಗಳೂ ಅವರ ಕಡೆಗೆ ನೋಡತೊಡಗಿದರು. ಭಾಗ್ಯಳ ಗಮನವೂ ಅತ್ತ ಕಡೆಗೆ ತಿರುಗಿತು.

''ಅದು ಒಂದು ಕೆಲಸವಾಗುತ್ತದೆಯಮ್ಮಾ. ವಧೂವರರು ನೋಡು ವಂತಹ ಕ್ರಮ ನಡೆಯಬೇಕಾದುದು ಹೀಗೇ ಅನ್ನು. ಗಂಡಿಗಾದರೂ ಅಷ್ಟೇ, ಹೆಣ್ಣಿಗಾದರೂ ಅಷ್ಟೇ. ಮೊದಮೊದಲು ತಮ್ಮನ್ನು ವರಿಸಲು ಯಾರಾದರೂ ಬರುತ್ತಾರೆ ಎಂದರೆ ಬಹಳ ಉತ್ಸಾಹವಿರುತ್ತದೆ, ಅವರೆಷ್ಟು ಬೇಗ ಬಂದಾರು, ನಾವು ಯಾವಾಗ ನೋಡುತ್ತೇವೆ-ಎಂದು ಆಸೆಪಡುತ್ತಿರು ತ್ತಾರೆ. ಆದರೆ ಈ ನೋಡುವ ಕೆಲಸವೇ ಹೆಚ್ಚಾಗಿ ಹೋದರೆ ಯಾರಿಗಾ ದರೂ ಬೇಜಾರಾಗುತ್ತದೆ. ಇವರೇಕೆ ಬಂದು ನಮ್ಮನ್ನು ನೋಡುತ್ತಾರೆ. ಎನ್ನಿಸುತ್ತದೆ. ಗಂಡು ಹುಡುಗರಿಗಿಂತಲೂ ಹೆಣ್ಣು ಹುಡುಗಿಯರ ಮನ ಸ್ಸಿನ ಮೇಲೆ ಇದು ಹೆಚ್ಚು ಪರಿಣಾಮವನ್ನುಂಟುಮಾಡುತ್ತದೆ. ನೀನು ಹೇಳುವುದು ಸರಿಯಮ್ಮಾ. ನಾಯಕಸಾನಿಯರ ಮನೆಗೆ ವಿಟಪುರುಷರು ಹೋಗುತ್ತಾರೆ. ಹುಡುಗಿಯರನ್ನು ಎದುರಿಗೆ ತಂದು ಕೂರಿಸುತ್ತಾರೆ. ಬರುಬರುತ್ತಾ ಹುಡುಗಿಯರ ಮನಸ್ಸಿಗೆ ಹೀಗೇ ಅನ್ನಿಸುತ್ತದೆ. ನಾಳೀ ಹೆಂಡತಿ ಮಕ್ಕಳಿಗೆ ಹೊಟ್ಟೇತುಂಬ ಅನ್ನ ಹಾಕುವ ಯೋಗ್ಯತೆಯಿರುತ್ತದೆ ಯೋ ಇಲ್ಲವೋ, ಈ ಹುಡುಗ ಮುಂಡೇವು ಬಂದು ತೋರಿದಂತೆ ಮಾತನಾ ಡುತ್ತವೆ. ಹುಡುಗಿಯರ ಉಂಗುಷ್ಟವನ್ನು ಹೋಲುವ ಯೋಗ್ಯತೆಯಿಲ್ಲ ದಿದ್ದರೂ ಇವಳು ಹೀಗೆ, ಅವಳು ಹಾಗೆ ಎಂದು ಮಾತನಾಡುತ್ತಾರೆ. ಇದ ನ್ನೆಲ್ಲಾ ನೋಡಿದರೆ ಯಾರಿಗೆ ತಾನೇ ಬೇಜಾರಾಗುವುದಿಲ್ಲ-ಹೇಳು''

ಈ ಮುದುಕನಾದರೂ ತನ್ನ ಮನೋಭಾವವನ್ನು ಅರ್ಥಮಾಡಿಕೊಂಡನಲ್ಲ–ಎಂದು ಭಾಗ್ಯಳಿಗೆ ಸಂತೋಷವಾಯಿತು.

ವಿಶಾಲಾಕ್ಷಮ್ಮನವರಿಗೆ ವೆಂಕಟೇಶಯ್ಯನವರ ಮಾತು ಹಿಡಿಸಲಿಲ್ಲ.

''ಈಗಲೇ ಅವಳು ಸಸೇಮಿರಾ ಅಂತ ಕುಳಿತುಬಿಟ್ಟಿದ್ದಾಳೆ. ಇನ್ನೂ ನೀವು ಅವಳಿಗೆ ರೂಲು ಹಾಕಿಕೊಟ್ಟರೆ ತಲೆಯ ಮೇಲಿನ ಕೊಂಬಾಗಿ ಕುಳಿತುಕೊಂಡುಬಿಡುತ್ತಾಳೆ''

ಗುಂಡಪ್ಪನವರು "ಒಳ್ಳೆಯವನೋ ನೀನು. ನೀನೂ ಅವಳ ಕುಣಿತಕ್ಕೆ ತಕ್ಕಂತೆ ತಾಳ ಹಾಕುತ್ತೀ ! ಗಂಡುಗಳು ಬಂದು ನೋಡದಿದ್ದರೆ ಇವಳಿಗೆ ಮದುವೆಯಾಗುವುದು ಹೇಗಯ್ಯಾ" ಎಂದರು.

ವೆಂಕಟೇಶಯ್ಯನವರು ನಗುತ್ತಾ "ನಾನು ಹಾಗೆಲ್ಲಿ ಹೇಳಿದೆ, ಗುಂಡಪ್ಪ. ವಧೂವರರುಗಳು ಪರಸ್ಪರ ನೋಡದಿದ್ದರೆ ಮದುವೆಗಳಾಗುವುದು ಹೇಗೆ ? ಇನ್ನೂ ನಾಲ್ಕು ಮಂದಿ ವರಗಳನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದೇನೆ. ಅವರಲ್ಲಿ ನಮ್ಮ ಭಾಗ್ಯಮ್ಮ ಯಾರನ್ನಾದರೂ ಒಬ್ಬರನ್ನು ಒಪ್ಪಿಯೇ ಒಪ್ಪುತ್ತಾಳೆ" ಎಂದರು.

''ನಿನ್ನೊಂದಿಗೆ ಎಷ್ಟೋ ಹೇಳಬೇಕೆಂದಿದೆ ಕಣಯ್ಯ. ಆದರೆ ಏನು ಹೇಳುವುದಕ್ಕೂ ನನಗೆ ಬಾಯೇ ಬರುವುದಿಲ್ಲ— — —"

"ಯಾಕೆ, ಏನು ಬೇಕಾದರೂ ಹೇಳು"

"ಅದೇನಪ್ಪ. ನೀನು ಇದುವರೆವಿಗೆ ಎಷ್ಟೋ ಗಂಡುಗಳನ್ನು ಕರೆದುಕೊಂಡು ಬಂದೆ. ಏನೋ ಆಗಿ ಯಾವುದೂ ಸರಿಹೋಗಲಿಲ್ಲ. ಪುನಃ ನಿನ್ನನ್ನು— — —"

"ಹಾಗೆಂದರೆ ಹೇಗಾಗುತ್ತದೆ. ಪ್ರೈಮರೀ ಸ್ಕೂಲಿನ ಪುಸ್ತಕದಲ್ಲಿ ಓದಿಲ್ಲವೇ ? ಮರಳಿಯತ್ನವ ಮಾಡು—ಮರಳಿಯತ್ನವ ಮಾಡು ಎಂದು. ಈ ಕೆಲಸವಾಗುವವರೆವಿಗೂ ಅಷ್ಟೇ''

"ಸರಿಯಪ್ಪ. ನಾಚಿಕೆಯಾದರೂ ಹೇಳಬೇಕು. ಇಲ್ಲದಿದ್ದರೂ ಹೇಳಬೇಕು. ಇನ್ನಾರನ್ನೋ ನೋಡಿದ್ದೇನೆ—ಎಂದೆಯಲ್ಲ. ಅವರನ್ನು ಯಾವಾಗ ಕರೆದುಕೊಂಡು ಬರುತ್ತೀಯಾ ?''

"ನಿನಗೆ ಗೊತ್ತಿರುವಂತೆ ಈ ವಾರವೆಲ್ಲಾ ಇಲ್ಲಿಯೇ ಕಳೆದುಬಿಟ್ಟೆ.

ನಮ್ಮ ಜಯಳ ಮದುವೆ ಹದಿನೈದು ದಿನವಿದೆ. ಇನ್ನೂ ಯಾವ ಏರ್ಪಾಟು ಗಳನ್ನೂ ಮಾಡಿಯೇ ಇಲ್ಲ. ಆದಷ್ಟು ಬೇಗ ಊರಿಗೆ ಹೋಗಬೇಕು—"

ವೆಂಕಟೇಶಯ್ಯನವರ ಮಗಳ ಮದುವೆ ಕ್ಷಿಪ್ರದಲ್ಲಿಯೇ ಇದೆ ಎಂಬುದು ಗೊತ್ತಿದ್ದರೂ ತಮ್ಮ ಮಗಳ ಮದುವೆಯ ಪ್ರಯತ್ನ ಮುಂದುವರಿಯದೇ ನಿಂತುಹೋಗುತ್ತದೆಯಲ್ಲಾ ಎನ್ನಿಸಿತು ಅವರಿಗೆ.

ವಿಶಾಲಾಕ್ಷಮ್ಮನವರು ತಡೆದುಕೊಳ್ಳಲಾರದೇ "ನಮ್ಮ ಭಾಗ್ಯಳ ಮದು ವೆಯೂ ಈ ಜೇಷ್ಠದಲ್ಲಿಯೇ ಆಗುತ್ತದೆ ಎಂದಿದ್ದೆ" ಎಂದು ಮೆಲು ದನಿಯಲ್ಲಿ ಹೇಳಿದರು.

ಖಡಾಖಂಡಿತವಾಗಿ "ಇಲ್ಲಮ್ಮ. ಅದು ಈ ಜೇಷ್ಠಮಾಸದಲ್ಲಿ ಆಗು ವುದಿಲ್ಲ. ಆಗುವುದು ಶ್ರಾವಣದಲ್ಲಿಯೇ. ನಾನು ಅವಳ ಜಾತಕ ನೋಡಿ ದ್ದೇನೆ. ಈ ಒಂದು ತಿಂಗಳು ಕಳೆಯುವವರೆವಿಗೆ ಅವಳಿಗೆ ಗುರುಬಲವಿಲ್ಲ" ಎಂದರು ವೆಂಕಟೇಶಯ್ಯ.

ಅನಂತರ ಎರಡು ನಿಮಿಷಗಳು ಲೋಕಾಭಿರಾಮವಾಗಿ ಮಾತನಾ ಡುತ್ತಾ ಇದ್ದು "ಮರೆತುಬಿಟ್ಟೆನಲ್ಲಪ್ಪ. ರೈಲಿಗೆ ಹೋಗಬೇಕು. ಈಗ ಗಂಟೆ ಎಷ್ಟು ?' ಎಂದರು.

ಗಂಟೆ ಎಷ್ಟೆಂದು ಹೇಳುವುದರ ಕಡೆ ಲಕ್ಷ್ಯವೇ ಮಾಡದೇ ಗುಂಡಪ್ಪ ನವರು "ಏನೋ ? ಈಗ ಮಾಗಡಿಗೆ ಹೊಸದಾಗಿ ರೈಲು ಹಾಕಿದ್ದಾರೆಯೇ?" ಎಂದರು.

"ಮಾಗಡಿಗಲ್ಲಯ್ಯ. ತುಮಕೂರಿಗೆ. ಈಗ ಷಟಲ್‌ಗಾಡಿ ಹೊರ ಡುತ್ತದೆ, ಐದೂವರೆಗೆ. ಅದರಲ್ಲಿ ಹೋಗುತ್ತೇನೆ. ಸ್ವಲ್ಪ ಕೆಲಸವಿದೆ' ಮಾಡಿಕೊಂಡು ಬರುತ್ತೇನೆ''

''ಯಾವಾಗ ಬರುತ್ತೀಯೆ ?"

"ನಾಳೇ ಸಾಯಂಕಾಲವೇ ಬರುತ್ತೇನೆ. ನಾಡಿದ್ದು ಬೆಳಗಾಗಿನ ಬಸ್ಸಿಗೇ ನಮ್ಮೂರಿಗೆ ಹೊರಟು ಹೋಗಬೇಕು"

ವೆಂಕಟೇಶಯ್ಯನವರು ಬೆಂಗಳೂರಿಗೆ ಬಂದರೆ ಗುಂಡೂರಾಯರ ಮನೆ ಯಲ್ಲಿಯೇ ಇಳಿದುಕೊಳ್ಳುತ್ತಿದ್ದರು. ಹಾಗೆಯೇ ಈಗಲೂ ಅಲ್ಲಿಯೇ ತಂಗಿ

ದರು. ಒಳಗಡೆ ಹೋಗಿ ಹಾಕಿಕೊಳ್ಳುವ ಪಂಚೆ ಷರಟುಗಳೂ, ಹೊದ್ದು ಕೊಳ್ಳುವ ಶಾಲುವೂ ಇದ್ದ ಕೈಚೀಲವನ್ನು ತೆಗೆದುಕೊಂಡು ಹೊರಡಲು ಅನುವಾದರು.

ವಿಶಾಲಾಕ್ಷಮ್ಮನವರು "ಸ್ವಲ್ಪ ಕುಳಿತುಕೊಳ್ಳಿ'' ಎಂದು ಹೇಳಿ ಮುಕ್ಕಾಲು ಲೋಟಾದಷ್ಟು ಕಾಫಿಯನ್ನು ತಂದು ಮುಂದಿಟ್ಟರು.

"ಮಧ್ಯಾಹ್ನ ಆಯಿತಲ್ಲಮ್ಮ"

"ಆಯಿತು. ಆದರೆ ಪುನಃ ಆಗಲಿ. ತೆಗೆದುಕೊಳ್ಳಿ. ಎಷ್ಟು ಹೊತ್ತಿಗೆ ಊರು ತಲುಪುತ್ತೀರೋ, ಎಷ್ಟು ಹೊತ್ತಿಗೆ ಊಟವೋ ? ಅಲ್ಲಿಯವರೆವಿಗೆ ಹೊಟ್ಟೆಯಲ್ಲಿ ಏನಾದರೂ ಇರಬೇಕಲ್ಲ"

"ಆಗಲೀನಮ್ಮಾ. ನೀವು ಹೇಳಿದ ಮೇಲೇಕೆ ಬೇಡವೆನ್ನಲಿ"

ವೆಂಕಟೇಶಯ್ಯನವರು ಕಾಫಿಯನ್ನು ಕುಡಿದು ಚೀಲವನ್ನು ತೆಗೆದು ಕೊಂಡು ಹೊರಟರು.

ತಲೆಬಾಗಿಲಿನವರೆವಿಗೆ ಹೋದವರು ಏನೋ ಯೋಚಿಸಿಕೊಂಡು ಪುನಃ ಒಳಗೆ ಬಂದರು.

"ಗುಂಡಪ್ಪ. ಒಂದು ವಿಷಯ ಹೇಳಬೇಕಾಗಿತ್ತು. ಹಾಳು ಮರವು. ಪ್ರಮಾದವಾಗಿ ಹೋಗುತಿತ್ತು''

"ಏನಯ್ಯಾ ಅದು"

"ತುಮಕೂರಿಗೆ ಹೋಗುವ ಪ್ರೋಗ್ರಾಂ ನನಗೆ ಇರಲೇ ಇಲ್ಲ. ನೇರವಾಗಿ ನಾಳೇ ಬೆಳಗಾಗ ಊರಿಗೆ ಹೊರಟು ಹೋಗೋಣವೆಂದಿದ್ದೆ——"

"ಈಗಲೂ ಹಾಗೆಯೇ ಮಾಡಬಹುದಲ್ಲ"

"ಅದಕ್ಕೇ ನಿನ್ನನ್ನು ಏಳು ತಿಂಗಳಿಗೇ ಹುಟ್ಟಿದವನು ಎಂದು ಹೇಳುವುದು. ಪೂರಾ ಹೇಳುವವರೆವಿಗೆ ಸ್ವಲ್ಪ ತಡೆದುಕೋ''

ಗುಂಡೂರಾಯರು ನಗುತ್ತಾ ''ಆಗಲಿ. ನನಗೇನು ? ಸಮಾಧಾನವಾಗಿ ಕೇಳುತ್ತೇನೆ. ಎಷ್ಟು ನಿದಾನವಾಗಿ ಬೇಕೋ ಅಷ್ಟು ನಿಧಾನವಾಗಿ ಹೇಳು. ಆದರೆ ರೈಲಿಗೆ ಹೊತ್ತಾಗದಂತೆ ನೋಡಿಕೋ" ಎಂದರು.

''ಅದೂ ನಿಜಾಪ್ಪ. ಬೇಗ ಹೋಗಬೇಕು. ಈಗಾಗಲೇ ಹೊತ್ತಾಗುತ್ತ ಬಂದಿತು. ಆದರೂ ಇರುವ ವಿಷಯ ಹೇಳಿಯೇ ಹೋಗಬೇಕಲ್ಲ,

ನಾಳೆಯ ದಿನ ಬೆಳಗಾಗ ರಾಜಣ್ಣ ಅಂತ ಒಬ್ಬ ಹುಡುಕಿಕೊಂಡು ಬರುತ್ತಾನೆ, ನಾನು ಬರುವವರೆವಿಗೆ ಅವನನ್ನು ಇಲ್ಲಿಯೇ ಇಟ್ಟುಕೊಂಡಿರಬೇಕು''

"ಆಗಲಿ, ಬಿಡು. ಅದೇನು ದೊಡ್ಡ ವಿಷಯ"

''ಹಾಗಲ್ಲಯ್ಯ ! ಆ ಹುಡುಗ ಬಹಳ ಸಂಕೋಚ ಪ್ರಕೃತಿಯವನು. ಅವನು ಬೇಡ ಬೇಡವೆಂದರೂ ಬಲಾತ್ಕಾರಮಾಡಿ ಅವನ ಊಟ ಉಪಚಾರ ನೋಡಿಕೊಳ್ಳಬೇಕು. ನಾಡಿದ್ದು ಬೆಳಗಾಗ ನಾನು ಹೋಗುತ್ತಾ ಊರಿಗೆ ಕರೆದುಕೊಂಡು ಹೊರಟು ಹೋಗುತ್ತೇನೆ"

"ಎಲ್ಲಾ ನೋಡಿಕೊಳ್ಳುತ್ತೇನಪ್ಪಾ. ನಿನ್ನ ಕಡೆಯವನು ಅಂದರೆ ಅಷ್ಟು ಮಾಡುವುದಿಲ್ಲವೇ ? ನೀನೇನೂ ಯೋಚನೆ ಮಾಡಬೇಡ''

"ಸರಿಯಪ್ಪ ಹೊರಡುತ್ತೇನೆ" ಎಂದು ಹೇಳಿ ''ಏನು ವಿಶಾಲಾಕ್ಷಮ್ಮನವರೇ. ನಮ್ಮ ಹುಡುಗನ ವಿಷಯ— — —" ಎಂದರು.

"ಅವರಿಗೆ ಹೇಳಿದ ಮೇಲೆ ಎಲ್ಲರಿಗೂ ಹೇಳಿದಂತೆಯೇ ಆಯಿತಲ್ಲ''

"ಆದರೂ ನಿಮಗೆ ಹೇಳದಿದ್ದರಾಗುತ್ತದೆಯೇ ? ನೀವು ಮನೆಯೊಳಗಿನ ಯಜಮಾನರು"

''ಸರಿ. ಸರಿ. ನಿಮ್ಮ ತಮಾಷೆಗೇನು ಹೇಳಿ"

ವೆಂಕಟೇಶಯ್ಯನವರು ಹೊರಟರು.

ಅವರೊಂದಿಗೆ ಮಾತನಾಡಿಕೊಂಡು ಹೊರಟ ಗುಂಡೂರಾಯರು ಬಸ್ ಸ್ಟಾಪ್ ನವರೆಗೆ ಹೋಗಿ ಬಂದರು.

## ೨

ಗುಂಡೂರಾಯರಿಗೆ ಕೆಲಸಪಲಸವೇನೂ ಇರಲಿಲ್ಲ, ರಿಟೈರ್ ಆಗಿತ್ತು. ಆದರೂ ಆತ ಯಾವಾಗಲೂ ಮನೆಯಲ್ಲಿಯೇ ಕುಳಿತುಕೊಳ್ಳುವ ಸ್ವಭಾವದವರಲ್ಲ. ಗಂಡಸು ಅನ್ನುವವನು ಕೆಲಸ ಕಾರ್ಯಕ್ಕೆ ಹೋಗಬೇಕು, ಅದಿಲ್ಲದಿದ್ದರೆ ಬೆಳಗಾಗ ಸಾಯಂಕಾಲ ಹೊರಗೆ ಹೋಗಿ ತಿರುಗಾಡಿಕೊಂಡಾದರೂ

ಬರಬೇಕೆಂಬುದು ಅವರ ಸಿದ್ಧಾಂತ. ಅಷ್ಟೇ ಅಲ್ಲ. ಬರುವಾಗ ಏನೂ ಇಲ್ಲದಿದ್ದರೆ ಒಂದು ಕಲ್ಲನ್ನಾದರೂ ಕೈಯ್ಯಲ್ಲಿ ಹಿಡಿದುಕೊಂಡು ಬರಬೇಕೆಂದೂ ಇತ್ತು. ಹಾಗೆ ಹೋದಾಗಲೆಲ್ಲಾ ಒಂದೊಂದು ಕಲ್ಲು ತಂದು ಹಾಕಿದರೆ ಗುಡ್ಡೆಯಾದಾಗ ಅದು ಯಾವುದಾದರೂ ಕೆಲಸಕ್ಕೆ ಬರುತ್ತದೆಯಲ್ಲಾ.

ಪ್ರಾತಃಕರ್ಮಗಳೆಲ್ಲವೂ ತೀರಿದನಂತರ ಕೋಟು ಪೇಟಾಗಳನ್ನು ಧರಿಸಿ ಕೈಯ್ಯಲ್ಲಿ ವಾಕಿಂಗ್‌ಸ್ಟಿಕ್ ಹಿಡಿದು ಎಲ್ಲಿಯಾದರೂ ಸುತ್ತಾಡಿಕೊಂಡು ಬರುವುದು ಅವರ ದಿನದ ಪದ್ಧತಿ.

ಆದರೆ ಈ ದಿನ ಅವರು ಹೊರಗೆಲ್ಲಿಯೂ ಹೋಗುವಂತೆ ಇರಲಿಲ್ಲ.

ವೆಂಕಟೇಶಯ್ಯನವರು ಅವರ ಬಾಲ್ಯ ಸ್ನೇಹಿತರು. ಅಷ್ಟೇ ಅಲ್ಲ. ಆ ಬಾಲ್ಯಸ್ನೇಹ ಮುದುಕರಾದ ಮೇಲೆಯೂ ಮುಂದುವರಿದುಕೊಂಡು ಬಂದಿದ್ದಿತು. ಮನುಷ್ಯ ಹಾಸ್ಯಪ್ರವೃತ್ತಿಯವರಾದರೂ ಬಹಳ ಸಾತ್ವಿಕರು. ಕಷ್ಟಸುಖಕ್ಕೆ ಆಗುವಂತಹವರು. ಇದುವರೆವಿಗೆ ಅವರು ಒಂದೇ ಒಂದು ಪ್ರತ್ಯುಪಕಾರವನ್ನು ಸಹ ಕೇಳಿದವರಲ್ಲ. ಅಂತಹವರು "ನನ್ನ ಕಡೆಯ ಮನುಷ್ಯನೊಬ್ಬನು ಬರುತ್ತಾನೆ. ಅವನನ್ನು ಸ್ವಲ್ಪ ನೋಡಿಕೊಳ್ಳಿ" ಎಂದು ಹೇಳಿ ಹೋಗಿದ್ದಾರೆ. ತಾವಿಲ್ಲದಿದ್ದರೂ ತಮ್ಮ ಹೆಂಡತಿಯಿರುತ್ತಾಳೆ. ಮನೆಯಲ್ಲಿ ಎಷ್ಟು ಮಂದಿ ಹೆಂಗಸರಿದ್ದರೂ ಗಂಡಸು ಇದ್ದ ಹಾಗೆ ಎಲ್ಲಿ ಆಗುತ್ತದೆ. ಅದಕ್ಕೋಸ್ಕರವೇ ನಲವತ್ತು ವರ್ಷದ ಹೆಂಗಸೂ ನಾಲ್ಕು ವರ್ಷದ ಗಂಡಸೂ ಒಂದೆಂದು ಹೇಳುವುದು. ಅದೂ ಅಲ್ಲದೇ ಬರುವವನು ಬಹಳ ಸಂಕೋಚ ಪ್ರವೃತ್ತಿಯವನೆಂದು ವೆಂಕಟೇಶಯ್ಯನವರು ಹೇಳಿದ್ದಾರೆ. ಯಾರೋ ಹೊರಗಿನ ಗಂಡಸು ಬಂದರೆ ಮನೆಯ ಹೆಂಗಸರಿಗೂ ಸಂಕೋಚ. ಹಾಗಿರುವಾಗ ಅವನು ಬರುವ ವೇಳೆಗೆ ತಾವಿಲ್ಲದಿದ್ದರೆ ಹೇಗೆ ?

ಅದರಿಂದ ಗುಂಡೂರಾಯರು ಆ ದಿನ ಎಲ್ಲಿಯೂ ಹೊರಗೆ ಹೋಗದೇ ಮನೆಯಲ್ಲಿಯೇ ಇದ್ದರು.

ಹಜಾರದಲ್ಲಿ ಕುಳಿತಿದ್ದ ಗುಂಡೂರಾಯರಿಗೆ ಬೆಳಗಾಗ ಹತ್ತು ಗಂಟೆಯ ಸಮಯದಲ್ಲಿ ಯಾರೋ ಹೊರಗಡೆ ನಿಂತು "ವೆಂಕಟೇಶಯ್ಯನವರು ಇದ್ದಾರೆಯೇ" ಎಂದು ಕೂಗಿದ ಶಬ್ದ ಕೇಳಿ ಬಂದಿತು.

ಅವರು ದಢಬಢನೆ ಹೊರಗೆ ಬಂದರು.

ಜಗುಲಿಯ ಮೇಲೆ ಒಬ್ಬ ಯುವಕ ನಿಂತುಕೊಂಡಿದ್ದ.

ಸಾಧಾರಣವಾಗಿ ಉದ್ದವೆಂದೇ ಹೇಳಬಹುದಾದ ದೃಢಕಾಯವಾದ ಶರೀರ. ತೇಜೋಮಯವಾದ ಮುಖ. ಅದರಲ್ಲಿ ಮಂದಹಾಸವು ಮನೆ ಮಾಡಿಕೊಂಡಿದೆ.

ಗುಂಡೂರಾಯರು ವಿನಯದಿಂದ "ನೀವು ರಾಜಣ್ಣನವರೇನು?" ಎಂದರು.

"ಹೌದು. ವೆಂಕಟೇಶಯ್ಯನವರು ಮನೆಯಲ್ಲಿಲ್ಲವೇನು?"

"ಹೊರಗೆ ನಿಂತುಕೊಂಡಿದ್ದೀರಲ್ಲಾ ಒಳಗೆ, ಬನ್ನಿ. ಮಾತನಾಡೋಣ'

ತಾನು ಕೇಳಿದ ಪ್ರಶ್ನೆಗೆ ವೆಂಕಟೇಶಯ್ಯ ಇದ್ದಾರೆ ಅಥವಾ ಇಲ್ಲ ಎಂದು ಯಾವುದಾದರೊಂದು ಜವಾಬು ಕೊಡಬೇಕು. ಅದು ಬಿಟ್ಟು 'ಒಳಗೆಬನ್ನಿ, ಮಾತನಾಡೋಣ' ಎನ್ನುತ್ತಿದ್ದಾನೆ. ಒಳಗೆ ಹೋಗಿ ಮಾತನಾಡುವುದಾದರೂ ಏನಿದೆ?

ಆದರೆ ಹಾಗೆ ಮನಸ್ಸಿಗೆ ಬಂದದ್ದನ್ನೆಲ್ಲಾ ಕೇಳುವುದನ್ನು ಮನುಷ್ಯರು ಸೌಜನ್ಯವಲ್ಲ ಎನ್ನುತ್ತಾರೆ.

ಅದರಿಂದ ಗುಂಡೂರಾಯರು ಹೇಳಿದಂತೆ ಒಳಗೆ ಹೋದ.

ಅದು ಸಾಧಾರಣವಾದುದೊಂದು ಹಜಾರ. ಗೋಡೆಗಳ ಮೇಲೆಲ್ಲಾ ಪಠಗಳನ್ನು ಹಾಕಿದ್ದಾರೆ. ಒಳಗೆ ಹೋಗುವುದಕ್ಕೂ ಪಕ್ಕದ ಕೋಣೆಗೆ ಹೋಗುವುದಕ್ಕೂ ಇದ್ದ ಬಾಗಿಲುಗಳಿಗೆ ತೋರಣಗಳಂತೆ ಗಾಜಿನ ಮಣಿಗಳ ಪರದೆಗಳನ್ನು ಇಳಿಬಿಟ್ಟಿದೆ. ಎದರಿಗೊಂದು ಬಣ್ಣದ ಚಾಪೆ ಹಾಕಿದೆ. ಪಕ್ಕದಲ್ಲಿ ಸಣ್ಣ ಮೇಜು. ಕಸೂತಿ ಮಾಡಿದ ಬಟ್ಟೆಯನ್ನು ಹಾಸಿ, ಅದರ ಮೇಲೆ ರೇಡಿಯೋ ಇಟ್ಟಿದೆ. ಅದರ ಮಗ್ಗುಲಲ್ಲಿ ಆ ದಿನದ ಕನ್ನಡ ವೃತ್ತಪತ್ರಿಕೆಯ ಮೇಲೆ ಒಂದೆರಡು ಕಾದಂಬರಿಗಳು ಕುಳಿತಿವೆ.

ಗುಂಡೂರಾಯರು ಮೇಜದ ಪಕ್ಕದಲ್ಲಿದ್ದ ಕುರ್ಚಿಯನ್ನು ಎಳೆಯುವುದರ ಮೂಲಕ ಅವನ್ನು ನಿರ್ದೇಶಿಸಿ "ಕುಳಿತುಕೊಳ್ಳಿ" ಎಂದರು

ರಾಜಣ್ಣ ಕೈಯಲ್ಲಿದ್ದ ಹ್ಯಾಂಡ್ ಬ್ಯಾಗನ್ನು ಕೆಳಗಿಟ್ಟು ಕುಳಿತುಕೊಂಡ.

ಪುನಃ ಅತ್ಯಂತ ಗೌರವವನ್ನು ಸೂಚಿಸುವ ಧೋರಣೆಯಿಂದ ಕುರ್ಚಿಯ ಮೇಲೆ ಕುಳಿತುಕೊಳ್ಳಬೇಕೆಂದು ಗುಂಡೂರಾಯರು ಒತ್ತಾಯ ಮಾಡಿದರು.

ಆದರೆ ರಾಜಣ್ಣನು ಅಲ್ಲಿಂದ ಮೇಲೇಳಲಿಲ್ಲ. ತಾನು ಮೊದಲು ಕೇಳಿದ ಪ್ರಶ್ನೆಯನ್ನೇ ಪುನಃ ಹಾಕಿದ.

ವೆಂಕಟೇಶಯ್ಯನವರು— — —"

"ಬರುತ್ತಾರೆ. ಕುಳಿತುಕೊಳ್ಳಿ. ಅವರೆಲ್ಲಿಯೋ ಹೋಗಿದ್ದಾರೆ. ನೀವು ಬರುತ್ತೀರೆಂದೂ, ಬಂದರೆ ತಾವು ಬರುವವರೆವಿಗೆ ಇಲ್ಲಿಯೇ ಇರಬೇಕೆಂದೂ ಹೇಳಿ ಹೋಗಿದ್ದಾರೆ"

ಒಳಗೆ ಬಂದದ್ದಾಯಿತು. ಕುಳಿತುಕೊಂಡದ್ದಾಯಿತು. ವೆಂಕಟೇಶಯ್ಯನವರು ಬರುವುದಾಗಿ ಹೇಳುತ್ತಿದ್ದಾರೆ. ಇನ್ನು ಎದ್ದು ಹೋಗುವುದು ಚೆನ್ನಾಗಿರುವುದಿಲ್ಲ. ಅಲ್ಲಿಯೇ ಕುಳಿತುಕೊಂಡ.

ಹೊರಗಡೆ ಗುಂಡೂರಾಯರು ಅವನನ್ನು ನಿರೀಕ್ಷಿಸುತ್ತಿದ್ದಂತೆಯೇ ವಿಶಾಲಾಕ್ಷಮ್ಮನವರೂ ಕಾಯುತ್ತಿದ್ದರು. ಗಂಡನು ಯಾರೊಂದಿಗೆ ಮಾತನಾಡುತ್ತಿರುವ ಸೂಕ್ಷ್ಮ ಅವರ ಕಿವಿಗೂ ಬಿದ್ದಿತು.

ಹೊರಗೆ ಬಂದು ನಿಂತುಕೊಂಡು "ಇವರೇ ರಾಜಣ್ಣನವರೋ ?" ಎಂದು ವಿಚಾರಿಸಿದರು.

ಆಕೆ ಕೇಳಿದ ಪ್ರಶ್ನೆಯ ಅಂತರಾರ್ಥವು ಗುಂಡೂರಾಯರಿಗೆ ಗೊತ್ತಾಗದಿರಲಿಲ್ಲ. ವೆಂಕಟೇಶಯ್ಯನವರ ಈ ಆತ್ಮೀಯನಿಗಾಗಿ ಅವರು ಕಾಫೀ ಉಪ್ಪಿಟ್ಟುಗಳನ್ನು ಬೆಳಗಾಗಲೇ ಮಾಡಿಟ್ಟುಕೊಂಡಿದ್ದರು.

"ಹುಂ. ಇವರೇ" ಎಂದು ಹೆಂಡತಿಗೆ ಹೇಳಿ ರಾಜಣ್ಣನ ಕಡೆಗೆ ತಿರುಗಿ ಗುಂಡೂರಾಯರು "ಏಳಿ, ಕೈ ಕಾಲು ತೊಳೆದುಕೊಳ್ಳಿ" ಎಂದರು.

ಇವರು ತನ್ನನ್ನು ಊಟಕ್ಕೆಬ್ಬಿಸುತ್ತಾರೆಯೇನೋ ಅನ್ನಿಸಿತು ರಾಜಣ್ಣನಿಗೆ. ಇಷ್ಟು ಬೇಗ ಅವನಿಗೆ ಊಟ ಬೇಕಾಗಿರಲಿಲ್ಲ. ಆದರೆ ಆ ಮಾತು ಹೇಳುವುದು ಹೇಗೆ ? "ವೆಂಕಟೇಶಯ್ಯನವರು ಬರಲಿ" ಎಂದು ಹೇಳೋಣವೆಂದುಕೊಂಡ.

ಅಷ್ಟರಲ್ಲಿ ವಿಶಾಲಾಕ್ಷಮ್ಮನವರು "ಕಾಫೀ ತೆಗೆದುಕೊಳ್ಳುವುದಕ್ಕೆ ಕೈ ಕಾಲು ಯಾಕೆ ತೊಳೆದುಕೊಳ್ಳಬೇಕು ?" ಎಂದರು.

ಪರವಾಯಿಲ್ಲ. ಇಷ್ಟಕ್ಕೇ ಮುಗಿಯಿತಲ್ಲ ಎಂದು ರಾಜಣ್ಣನಿಗೆ ತೃಪ್ತಿಯಾಯಿತು.

ಗುಂಡೂರಾಯರು "ನಿಜ. ಅದರೂ ಈಗತಾನೇ ಊರಿಗೆ ಬಂದಂತಿದೆ. ಕೈ ಕಾಲು ತೊಳೆದುಕೊಳ್ಳಬೇಕೆಂದಿದೆಯೋನೋ ಎಂದು ಹೇಳಿದೆ" ಎಂದರು.

ಪರಿಚಯವಿಲ್ಲದವನ ಇಷ್ಟಾನಿಷ್ಟಗಳ ವಿಷಯ ತಾವು ಗಂಡಹೆಂಡಿರು ಚರ್ಚೆ ಮಾಡುತ್ತಿರುವುದು ಸೋಜಿಗವಾಗಿ ತೋರಿ ಅವರಿಗೆ ನಗು ಬಂದಿತು.

"ನೋಡಿ. ಇದೇ ಮನುಷ್ಯನ ಸ್ವಭಾವ. ಯಾವುದೋ ವಿಷಯ ಸಿಕ್ಕಿದರೆ ಸುಮ್ಮನೆ ಮಾತನಾಡುವುದಕ್ಕೆ ಮೊದಲು ಮಾಡುವುದು. ಕೈ ಕಾಲು ತೊಳೆದುಕೊಳ್ಳುವುದಾದರೆ ತೊಳೆದುಕೊಳ್ಳಬಹುದು. ಇಲ್ಲದಿದ್ದರೆ ಹಾಗೆ ತೆಗೆದುಕೊಳ್ಳಬಹುದು. ನಿಮ್ಮ ಇಷ್ಟ"

ತಿಂಡಿಯ ಅವಶ್ಯಕತೆಯಿಲ್ಲದಿದ್ದರೂ ಆ ಸಮಯದಲ್ಲಿ ಅರ್ಧ ಲೋಟಾ ಕಾಫೀ ಕೊಟ್ಟಿದ್ದರೆ ಬೇಡ ಎನ್ನುವ ಸ್ಥಿತಿಯಲ್ಲಿರಲಿಲ್ಲ ರಾಜಣ್ಣ. ಕಾಫೀ ತಿಂಡಿ ತೆಗೆದುಕೊಳ್ಳುವ ಮೊದಲು ಕೈಕಾಲು ಮುಖಗಳನ್ನು ತೊಳೆದುಕೊಳ್ಳಲೇಬೇಕೆಂಬ ನಿಯಮವನ್ನೂ ಅವನಿಟ್ಟುಕೊಂಡಿರಲಿಲ್ಲ. ಆದರೂ ಕೊಡುತೇನೆ ಎಂದು ಹೇಳಿದ ತಕ್ಷಣ "ಹುಂ ಸಿದ್ದ" ಎಂದು ಹೇಳಲು ಅವನಿಗೆ ಸಂಕೋಚ.

"ಕೈ ಕಾಲು ತೊಳೆದುಕೊಳ್ಳುತ್ತೇನೆ"

ಅವನು ಮಾತು ಹೇಳುವ ವೇಳೆಗೆ ವಿಶಾಲಾಕ್ಷಮ್ಮನವರು ಒಳಗೆ ಹೊರಟುಹೋಗಿದ್ದರು. ಒಳಗೆ ಕರೆದುಕೊಂಡಲು ಹೋಗಲು ಸಿದ್ಧವಾಗಿ ನಿಂತುಕೊಂಡರು ಗುಂಡೂರಾಯರು.

ರಾಜಣ್ಣ ಕೋಟು ಬಿಚ್ಚಿಹ್ಯಾಂಡ್ ಬ್ಯಾಗನ ಮೇಲೆ ಇಡುತ್ತಿದ್ದ ಹಾಗೆಯೇ ಗುಂಡೂರಾಯರು ಅದನ್ನು ತೆಗೆದು ಅಲ್ಲಿಯೇ ಇದ್ದ ಪಠದ ಮಳೆಗೆ ಸಿಕ್ಕಿದರು.

ಅನಂತರ ಅವನನ್ನು ಬಚ್ಚಲು ಮನೆಗೆ ಕರೆದುಕೊಂಡು ಹೋಗಿ ಪಾತ್ರೆಯಲ್ಲಿ ನೀರು ತೆಗೆದು ಕೈಗೆ ಕೊಟ್ಟರು. ಮುಖ ಕೈ ಕಾಲು ತೊಳೆದುಕೊಳುವುದರೊಳಗಾಗಿ ಚೌಕವನ್ನು ಹಿಡಿದು ಸಿದ್ಧವಾಗಿ ನಿಂತಿದ್ದರು.

ರಾಜಣ್ಣ ನಡುಮನೆಗೆ ಬರುತಿದ್ದ ಹಾಗೆಯೇ ತುಂಡು ಚಾಪೆಗಳೆರಡನ್ನು ಹಾಕಿತ್ತು. ಗುಂಡೂರಾಯರ ನಿರ್ದೇಶದಂತೆ ಒಂದರ ಮೇಲೆ ಕುಳ್ಳಿತುಕೊಂಡ. ಚೆನ್ನಾಗಿ ತೊಳೆದು ಬೆಳಗುತ್ತಿದ್ದ ತಟ್ಟೆಯಲ್ಲಿ ವಿಶಾಲಾಕ್ಷಮ್ಮ

ಉಪ್ಪಿಟ್ಟು ತಂದಿಟ್ಟರು. ಅದು ಉದುರುದರಾಗಿಯೂ, ಮೃದುವಾಗಿಯೂ ಇದ್ದು ರುಚಿಯಾಗಿತ್ತು.

ಅವನು ಉಪ್ಪಿಟ್ಟು ತಿನ್ನುತ್ತಿದ್ದಂತೆಯೇ ಗುಂಡೂರಾಯರು ಮಾತು ಆರಂಭಿಸಿದರು.

"ಅವರು ಸ್ವಲ್ಪ ಕಾಫೀತಿಂಡಿ ತೆಗೆದುಕೊಳ್ಳುವುದಕ್ಕೆ ಅವಕಾಶ ಕೊಡಿ. ಅನಂತರ ವೆಂಕಟೇಶಯ್ಯನವರು ಬರುವವರೆವಿಗೆ ಅವಕಾಶವಿದೆಯಲ್ಲ ಮಾತ ನಾಡುವುದಕ್ಕೆ"

ಗುಂಡೂರಾಯರು ಹೆಂಡತಿಯ ಮಾತನ್ನು ಕೇಳಿದರೂ ಕೇಳಿಸಿಕೊಳ್ಳ ದಂತೆ ಮಾತು ಮುಂದುವರಿಸಿದರು. ಚಾಚೂ ವ್ಯತ್ಯಾಸವಾಗದಂತೆ ನೋಡಿ ಕೊಳ್ಳಬೇಕೆಂದು ವೆಂಕಟೇಶಯ್ಯನವರು ಹೇಳಿದ್ದ ಈ ಯುವಕನ ವಿಷಯ ತಿಳಿ ದುಕೊಳ್ಳುವುದರಲ್ಲಿ ಅವರು ಬಹಳ ಆಸಕ್ತರಾಗಿದ್ದರು.

ರಾಜಣ್ಣನು ಚನ್ನಪಟ್ಟಣದವನೆಂದೂ, ಅಲ್ಲಿನ ಲಾಯರು ರಂಗಣ್ಣ ನವರ ಮಗನೆಂದೂ, ವೆಂಕಟೇಶಯ್ಯನವರು ತನ್ನ ಪರಿಚಯದವರೆಂದೂ ಅದ್ದ ಕ್ಕಾಗಿ ಅವರನ್ನು ಹುಡುಕಿಕೊಂಡು ಬಂದೆನೆಂದೂ ಹೇಳಿದ.

ಹಿಂದಿನ ದಿನ ಸಂಜೆಯವರೆವಿಗೆ ವೆಂಕಟೇಶಯ್ಯ ಈ ರಾಜಣ್ಣನ ವಿಷಯವನ್ನು ಹೇಳಲಿಲ್ಲ. ಇವನು ಅವರಿಗೆಲ್ಲಿ ಪರಿಚಯ ಈ ಹುಡುಗನನ್ನು ಅವರೇಕೆ ಇಷ್ಟು ದೊಡ್ಡದು ಮಾಡಿದ್ದಾರೆ–ಎಂಬ ಕುತೂಹಲವು ಗುಂಡೂ ರಾಯರಲ್ಲಿ ಇಣಕಿ ನೋಡುತ್ತಿದ್ದಿತು.

ಆದರೆ ಸ್ಪಷ್ಟವಾಗಿ "ನಿನಗೂ ವೆಂಕಟೇಶಯ್ಯನವರಿಗೂ ಹೇಗೆ ಪರಿಚಯ? ಅವರೇಕೆ ನಿನ್ನ ವಿಷಯದಲ್ಲಿ ಇಷ್ಟೊಂದು ಆಸಕ್ತಿಯನ್ನು ವಹಿಸುತ್ತಾರೆ ಎಂಬುದಾಗಿ ಕೇಳಲು ಸಂಕೋಚ. ನೇರವಾಗಿ ಪ್ರಶ್ನೆ ಕೇಳದೇ ತಮಗೆ ಬೇಕಾದ ಉತ್ತರವನ್ನು ಪಡೆಯಲಾಗುವುದೋ ಎಂದು ಎಷ್ಟೋ ಪ್ರಯತ್ನ ಮಾಡಿದರು.

ಕೇಳಿದ್ದಕ್ಕೆ ಎಷ್ಟೋ ಅಷ್ಟು ಉತ್ತರ ಹೇಳುತ್ತಿದ್ದನೇ ವಿನಾ ರಾಜಣ್ಣ ಹೆಚ್ಚಾಗಿ ಮಾತು ಬೆಳಸಲಿಲ್ಲ.

ವಿಶಾಲಾಕ್ಷಮ್ಮ ರಾಜಣ್ಣನಿಗೆ ಒಂದು ಲೋಟಾ ಕಾಫಿಯನ್ನೂ ತಮ್ಮ ಯಜಮಾನರಿಗೆ ಅರೆ ಲೋಟಾ ಕಾಫಿಯನ್ನು ತಂದಿಟ್ಟರು. ಅದನ್ನು ಕುಡಿದು ಅವರಿಬ್ಬರೂ ಹೊರಗಡೆ ಬಂದರು.

ಹೊರಗಡೆ ಚಾಪೆಯ ಮೇಲೆ ಬಂದು ಕುಳಿತುಕೊಂಡ ನಂತರ ಇನ್ನು ತಡೆಯಲಾರದೇ ಗುಂಡೂರಾಯರು ನೇರವಾದ ಪ್ರಶ್ನೆಯನ್ನೇ ಹಾಕಿದರು.

"ರಾಜಣ್ಣನವರೇ ! ನಿಮಗೆ ವೆಂಕಟೇಶಯ್ಯನವರ ಪರಿಚಯ ಹೇಗೆ ?"

ಅವನಿಗೆ ಕಕ್ಕಾಬಿಕ್ಕಿಯಾದಂತಾಗಿ ಕಣ್ಣುಬಿಟ್ಟುಕೊಂಡು ನೋಡಿದ.

"ನೀವು ಯಾವ ಮಾತನ್ನು ಹೇಳುವುದಕ್ಕೂ ಸಂಕೋಚಪಡಬೇಕಾಗಿಲ್ಲ. ನನಗೂ ವೆಂಕಟೇಶಯ್ಯನವರಿಗೂ ಬಾಲ್ಯಸ್ನೇಹ. ನಿಮ್ಮದೂ ಅವರದೂ ಹೊಸ ಪರಿಚಯವೆಂದು ಕಾಣುತ್ತದೆ. ಇಲ್ಲದೇ ಇದ್ದಿದ್ದರೆ ಅವರು ನಿಮ್ಮ ವಿಷಯವನ್ನು ನನ್ನೊಂದಿಗೆ ಹೇಳದೇ ಇರುತ್ತಿರಲಿಲ್ಲ. ನಿನ್ನೆಯ ದಿನ ಅವಸರವಾಗಿ ಹೋಗುತ್ತಾ ನೀವು ಬರುತ್ತೀರೆಂಬ ವಿಷಯವನ್ನು ಹೇಳಿ ಹೊರಟುಹೋದರು."

ತನ್ನನ್ನು ಕೇಳಿದ ಪ್ರಶ್ನೆಯನ್ನೇ ಮರೆತು "ನಿನ್ನೆಯ ಸಾಯಂಕಾಲ ಹೇಳಿ ಹೊರಟು ಹೋದರು ಎಂದರೆ ಎಲ್ಲಿಗೆ ಹೊರಟುಹೋದರು ? ಅವರು ಊರಿನಲ್ಲಿಲ್ಲವೇನು ?" ಎಂದು ಕೇಳಿದ.

"ಇಲ್ಲಿಯೇ ತುಮಕೂರಿಗೆ ಹೋಗಿದ್ದಾರೆ. ಮಧ್ಯಾಹ್ನ ಬಂದು ಬಿಡುತ್ತಾರೆ"

ವೆಂಕಟೇಶಯ್ಯವರು ಮಾಡಿದ ಕೆಲಸ ರಾಜಣ್ಣನಿಗೆ ಅಷ್ಟು ಸಮರ್ಪಕವಾಗಿ ಕಂಡುಬರಲಿಲ್ಲವೆಂದು ಕಾಣುತ್ತದೆ.

"ಊರಿಗೆ ಹೋಗುವುದಾಗಿ ಅವರು ನಮ್ಮೊಂದಿಗೆ ಹೇಳಿಯೇ ಇರಲಿಲ್ಲ"

"ಇಲ್ಲ. ಅವರಿಗೂ ಗೊತ್ತಿರಲಿಲ್ಲ., ಅರ್ಜೆಂಟಾಗಿ ಹೋಗಬೇಕಾಯಿತು"

"ಹಾಗಾದರೆ ಯಾವಾಗ ಬರುತ್ತಾರೆ ?"

ಆ ವಿಷಯಕ್ಕಾಗಲೇ ಉತ್ತರ ಬಂದಿದ್ದರೂ ಅವನು ಪುನಃ ಕೇಳಿದ.

"ಮಧ್ಯಾಹ್ನ ಬರುವುದಾಗಿ ಹೇಳಿದ್ದಾರೆ. ಎಷ್ಟು ನಿಧಾನವಾದರೂ ಸಾಯಂಕಾಲದೊಳಗಾಗಿ ಬಂದುಬಿಡುತ್ತಾರೆ. ರಾತ್ರಿ ಇಲ್ಲಿಯೇ ಊಟ ಮಾಡಿ ಮಲಗಿದ್ದು ನಾಳೇ ಬೆಳಗಾಗಿನ ಬಸ್ಸಿಗೆ ಮಾಗಡಿಗೆ ಹೋಗುವುದಾಗಿ ಹೇಳಿದ್ದಾರೆ"

ಏನೋ ಹೆಚ್ಚು ಕಡಿಮೆಯಾದಂತೆ ರಾಜಣ್ಣ "ನನಗೆ ಅವರು ಈ ವಿಷಯ ಹೇಳಿದ್ದರೆ ನಾಳೇ ಬೆಳಗಾಗಲೇ ಬಂದುಬಿಡುತ್ತಿದ್ದೆ" ಎಂದ.

"ಅವರಿಗೇ ಆ ವಿಷಯ ಗೊತ್ತಿರಲಿಲ್ಲವೆಂದು ಹೇಳಿದೆನಲ್ಲಾ. ಯಾಕೆ. ಅವರಿಲ್ಲದಿರುವುದು ನಿಮಗೆ ಸಂಕೋಚವಾಗುತ್ತದೆಯೇನು ?"

ಅವನದಕ್ಕೆ ಜವಾಬು ಹೇಳಲಿಲ್ಲ.

"ನೀವೇನು ಸಂಕೋಚಪಟ್ಟುಕೊಳ್ಳಬೇಡಿ, ರಾಜಣ್ಣ. ನಾನಿದ್ದರೆ ವೆಂಕಟೇಶಯ್ಯ ಇದ್ದ ಹಾಗೆಯೇ. ನಮ್ಮಿಬ್ಬರದೂ ಏಕದೇಹ ನ್ಯಾಯ"

"ಅಂತಹದೇನೂ ಇಲ್ಲ. ನನ್ನಿಂದ ನಿಮಗೆ ವೃಥಾ ತೊಂದರೆಯಲ್ಲಾ-ಎಂದು"

"ತೊಂದರೆ! ತೊಂದರೆಯೇನು ಬಂದಿತು, ಗೃಹಸ್ಥ ಅಂತ ಇದ್ದ ಮೇಲೆ ಮನೆಗೆ ಯಾರಾದರೂ ಬಂದರೆ ತೊಂದರೆಎಂದರೆ ಏನರ್ಥ? ಅಂದ ಹಾಗೆ. ಏನೋ ಮಾತನಾಡುತ್ತಿದ್ದೆವು. ಆ ವಿಷಯವೇ ಮರೆತುಹೋಯಿತು"

ಅವರು ಎತ್ತಿದ್ದ ಮಾತು ರಾಜಣ್ಣನಿಗೆ ಚೆನ್ನಾಗಿ ಜ್ಞಾಪಕವಿತ್ತು. ಆದರೆ ನೀವು ಎತ್ತಿದ್ದ ಮಾತು ಇಂತಹುದೇ ಎಂದು ಅವನಾಗಿ ಹೇಳಲಿಲ್ಲ.

ಗುಂಡೂರಾಯರೇ ಅದನ್ನು ನೆನೆಸಿಕೊಂಡು "ವಯಸ್ಸಾಗುತ್ತಿದ್ದ ಹಾಗೆ ಜ್ಞಾಪಕಶಕ್ತಿಯೇ ಕಡಿಮೆಯಾಗಿ ಹೋಗುತ್ತಿದೆ. ಆ-ಹೌದು-ನಿಮಗೂ ವೆಂಕಟೇಶಯ್ಯನವರಿಗೂ ಹೇಗೆ ಪರಿಚಯ ಎಂದು ಕೇಳಿದ್ದೆ. ಅಷ್ಟರಲ್ಲಿ ಬೇರೇ ಯಾವುದೋ ಮಾತು ಬಂದಿತು" ಎಂದರು,

ತನ್ನ ಮತ್ತು ವೆಂಕಟೇಶಯ್ಯನವರ ಪರಿಚಯವು ಹೇಗಾಯಿತು ಎಂಬದನ್ನು ಹೇಳಲು ರಾಜಣ್ಣ ಸಂಕೋಚಿಸಿದ.

"ಅದೇನು ಗುಟ್ಟೇನು? ಗುಟ್ಟಿನ ವಿಷಯವಾದರೆ— —"

"ಅಯ್ಯೋ! ಗುಟ್ಟೇನು? ವೆಂಕಟೇಶಯ್ಯನವರ ಮಗಳು ಜಯಮ್ಮನಿಗೆ ಮದುವೆ ಗೊತ್ತಾಗಿರುವುದು ನಿಮಗೆ ಗೊತ್ತಿರಬಹುದು— —"

"ಗೊತ್ತಿಲ್ಲದೇ ಉಂಟೆ? ಇನ್ನು ಹದಿನೈದು ದಿನಗಳಿಗೆ ಮದುವೆ. ವೆಂಕಟೇಶಯ್ಯನೇ ಆ ವಿಷಯವನ್ನು ಹೇಳಿದ್ದಾನೆ"

"ಗೊತ್ತಾಗಿರುವ ವರ ರಾಮಕೃಷ್ಣಯ್ಯನೆಂದು. ತಾವು ಅವನನ್ನು ನೋಡಿದ್ದೀರಾ?"

"ಇಲ್ಲ. ನೋಡಿಲ್ಲ— —"

ಮುಂಪೆ ರಾಜಣ್ಣ ಮಾತನಾಡುವುದರಲ್ಲಿ ತಾವು ಅವನನ್ನು ಯಾಕೆ

ಇನ್ನೂ ನೋಡಿಲ್ಲವೆಂಬುದಕ್ಕೆ ಗುಂಡೂರಾಯರು ವಿವರಣೆ ಕೊಟ್ಟರು.

"ಆ: ಹುಡುಗ ತರೀಕೆರೆಯವನಂತೆ. ಮಾಗಡಿಗೆ ಹೋಗಿ ಹುಡುಗಿಯನ್ನು ನೋಡಿದವನು ಆ ಕೂಡಲೇ ಏನೂ ಹೇಳಲಿಲ್ಲ. ಊರಿಗೆ ಹೋಗಿ ತಿಳಿಸುವುದಾಗಿ ಹೇಳಿದನಂತೆ— —"

''ಅವನು ಆ ಮಾತು ಹೇಳಲಿಲ್ಲ. ನಾನು ವೆಂಕಟೇಶಯ್ಯನವರಿಗೆ ಹೇಳಿದೆ"

''ಓಹೋ! ನೀವೂ ವರನ ಜೊತೆಯಲ್ಲಿ ಹೆಣ್ಣು ನೋಡಲು ಹೋಗಿದ್ದಿರೇನು?"

ನಗುತ್ತಾ ರಾಜಣ್ಣ 'ಹುಂ' ಎಂದ.

"ಸರಿ. ಸರಿ, ನೀವು ಜಯಳಿಗೆ ಗೊತ್ತಾಗಿರುವ ವರನ ಸ್ನೇಹಿತರು. ಹಾಗೆ ನಿಮಗೂ ವೆಂಕಟೇಶಯ್ಯನವರಿಗೂ ಪರಿಚಯ. ಈಗ ಅರ್ಥವಾಯಿತು'' ಎಂದು ತಾವೂ ನಗಲು ಆರಂಭ ಮಾಡಿದರು ಗುಂಡೂರಾಯರು.

ಅವರೇಕೆ ಇದ್ದಕ್ಕೆ ಇದ್ದಂತೆಯೇ ನಗುತ್ತಾರೆಂಬುದು ರಾಜಣ್ಣನಿಗೆ ಅರ್ಥವಾಗಲಿಲ್ಲ. ಅಷ್ಟು ಹೊತ್ತು ಮಾತನಾಡಿದ್ದುದರಿಂದಾಗಿದ್ದ ಬಳಿಕೆಯಿಂದ ಆದೇಕೆ ನಗುತ್ತಿದ್ದಾರೆಂಬುದನ್ನು ವಿಚಾರಿಸಿದ.

"ಅಷ್ಟಿಲ್ಲದೇ ನಾವು ನಮ್ಮ ವೆಂಕಟೇಶಯ್ಯನನ್ನು ಬುದ್ಧಿವಂತನೆಂದು ಅನ್ನುತ್ತೇವೆಯೇ? ಗಿಳಿಯನನ್ನು ಹಿಡಿದರೆ ಅಳಿಯ ಕೈಗೆ ಸಿಕ್ಕಿದಂತೆಯೇ ತಾನೇ. ಆದರಿಂದ ಆವನು ನಿಮ್ಮನ್ನು ಚೆನ್ನಾಗಿ ಹಿಡಿದುಬಿಟ್ಟಿದ್ದಾನೆ"

"ರಾಮಕೃಷ್ಣ ಹುಡುಗಿಯನ್ನು ನೋಡಿ ಒಪ್ಪಿಕೊಂಡಿದ್ದಾ—

''ಸ್ವಲ್ಪ ತಡೆಯಿರಿ. ನಿಮ್ಮ ಸ್ನೇಹಿತರು ಜಯಳನ್ನು ಒಪ್ಪಿಕೊಂಡ ವಿಷಯವನ್ನೇನೋ ಹೇಳುತ್ತಿದ್ದೆ"

ಆದೇನೆಂದು ಜ್ಞಾಪಿಸಲು ರಾಜಣ್ಣನಿಗೂ ಸ್ವಲ್ಪ ಶ್ರಮವೇ ಆಯಿತು. ಆ ಮಾತಿನ ಸೂತ್ರ ಅವನಿಗೂ ತಪ್ಪಿಹೋಗಿತ್ತು. ಅನಂತರ ಕಷ್ಟಪಟ್ಟು ವಿಷಯವೇನೆಂದು ಜ್ಞಾಪಿಸಿದ.

''ನಾನು ಮೊದಲೇ ಹೇಳಿದಂತೆ ಹಾಳುಮರವು. ಇಲ್ಲಿ ಏನೋ ಕೆಲಸ ಮಾಡುತ್ತಾ ಅಥವಾ ಏನೋ ಮಾತನಾಡುತ್ತಾ ನಿಂತಿರುತ್ತೇನೆ ಅನ್ನಿ. ಅಲ್ಲಿ ಅವಳು ಯಾವುದಕ್ಕಾದರೂ ಕರೆಯುತ್ತಾಳೆ. ಅಷ್ಟರಲ್ಲಿ ಇಲ್ಲಿನದು

ಮರೆತುಹೋಗುತ್ತದೆ. ಈ ಮರವು ವಯಸ್ಸಿನ ದೋಷವಲ್ಲ. ಈಗ ನನಗೇನು ಅಷ್ಟೊಂದು ವಯಸ್ಸಾಗಿರುವುದು? ಇನ್ನೂ ಅರವತ್ತು ವರ್ಷ. ಎಪ್ಪತ್ತೈದು ಎಂಬತ್ತು, ವರ್ಷದವರನ್ನು ನೋಡಿದ್ದೇನೆ. ನಮ್ಮ ಸೋದರ ಮಾವನ ಮಗನಿಗೆ ಎಂಬತ್ತುಮೂರು ವರ್ಷವೀಗ. ಅವನಿಗೆ ಎಷ್ಟು ಜ್ಞಾಪಕ ಶಕ್ತಿ ಎನ್ನುತ್ತೀರಿ— — —''

ಈ ಮುದುಕ ಮಾತನಾಡುತ್ತಿದ್ದ ವಿಷಯವು ಪುನಃ ತನಗೂ ಮರೆತುಹೋದೀತೆಂಬ ಭಾವನೆಯಿಂದ ರಾಜಣ್ಣ "ರಾಮಕೃಷ್ಣಯ್ಯನನ್ನು ನೀವು ಯಾಕೆ ನೋಡುವುದಕ್ಕಾಗಲಿಲ್ಲ ಎಂಬ ವಿಷಯ ಹೇಳುತ್ತಿದ್ದಿರಿ'' ಎಂದ.

"ಹುಂ. ಅದನ್ನೇ ನಾನು ಹೇಳುತ್ತಿದುದು. ಈ ಮರುವಿನ ಮಾತು ಹೇಳುತ್ತಾ ಈಗತಾನೇ ನೀವು ಜ್ಞಾಪಿಸಿದ ವಿಷಯವನ್ನು ಸಹ ಮರೆತುಬಿಟ್ಟಿದ್ದೆ ವಿಷಯ ಏನೂ ಎಂದರೆ ಜಯಳನ್ನು ನೋಡಿದವನು ಊರಿಗೆ ಹೋಗಿ ತಿಳಿಸುವುದಾಗಿ ಹೇಳಿದನಲ್ಲಾ-ಅಲ್ಲಾ ಊರಿಗೆ ಹೋದನಂತರ ತಿಳಿಸುವುದಾಗಿ ನೀವು ವೆಂಕಟೇಶಯ್ಯನಿಗೆ ಹೇಳಿದರಲ್ಲ--ಅಂತೂ ರಾಮಕೃಷ್ಣಯ್ಯನವರು ಊರಿಗೆ ಹೋದ ವಾರದೊಳಗೆಲ್ಲಾ ಕಾಗದವು ಬಂದಿತು ಅವರು ಜಯಳನ್ನು ಮದುವೆಯಾಗಲು ಒಪ್ಪಿರುವುದಾಗಿ. ಎಷ್ಟೋ ಜನ ಜಯಳನ್ನು ನೋಡಿಕೊಂಡು ಹೋದರು. ಹಾಗೆಯೇ ನೋಡಿಕೊಂಡು ಹೋದ ರಾಮಕೃಷ್ಣಯ್ಯನವರಲ್ಲಿ ಆಗ ಆಸಕ್ತಿಯಿರಲಿಲ್ಲ. ಅವರು ಜಯಳನ್ನು ಮದುವೆಯಾಗಲು ಒಪ್ಪಿದ್ದಾರೆಂದೂ ಮದುವೆಯು ಗೊತ್ತಾಯಿತೆಂದು ತಿಳಿದ ಮೇಲೆ ಆಸಕ್ತಿಯುಂಟಾಯಿತು. ಆದರೆ ಅನಂತರ ನಿಮ್ಮ ಸ್ನೇಹಿತರು ಇತ್ತಕಡೆ ಬರಲೇ ಇಲ್ಲ''

''ಇನ್ನೇನು ಮದುವೆಗೇ ಬರುತ್ತಾನೆಯಲ್ಲಾ. ನೋಡುವಿರಂತೆ''

''ನೋಡದೇ ಇರುತ್ತೇನೆಯೇ? ನೋಡಿಯೇ ನೋಡುತ್ತೇನೆ. ಆ ಮಾತನ್ನೆಲ್ಲಾ ನಾನು ಹೇಳಿದುದು. ಆಗಲೇ ರಾಮಕೃಷ್ಣಯ್ಯನವರನ್ನು ನೋಡಿದ್ದಿದ್ದರೆ ನಮ್ಮ ಪರಿಚಯವೂ ಇರುತಿತ್ತು"

''ನನ್ನ ಪರಿಚಯವಿಲ್ಲದಿದ್ದರೆ ಏನಂತೆ? ನಾನೇನು ಗಾಂಧಿಯೇ, ನೆಹರೂವೇ?"

''ಗಾಂಧೀ ನೆಹರೂಗಳು ನಮ್ಮ ಮನೆಗೆ ಬರುವುದಕ್ಕಾಗುವುದೇ,

ರಾಜಣ್ಣ. ನಮ್ಮ ಮನೆಗೆ ಬರುವವರೇ ನಮಗೆ ಗಾಂಧೀ ನೆಹರುಗಳು''

ಜಯಳ ಗಂಡನಾಗುವ ರಾಮಕೃಷ್ಣಯ್ಯ ಯಾರ ಮಗ. ಏನು ಓದಿದ್ದಾನೆ ಮುಂತಾದ ವಿಷಯಗಳನ್ನು ಕೇಳಬೇಕೆಂದು ಗುಂಡೂರಾಯರಿಗೆ ಅನ್ನಿಸಿತು. ಆದರೆ ಅಷ್ಟರಲ್ಲಿ ಆ ವಿಷಯವನ್ನೆಲ್ಲಾ ವೆಂಕಟೇಶಯ್ಯನವರು ಹೇಳಿದ್ದುದು ನೆನಪಿಗೆ ಬಂದು ಸುಮ್ಮನಾದರು.

ಮಾತು ಮುಗಿಸಿ ಗುಂಡೂರಾಯರು ''ಸ್ವಲ್ಪ ಕುಳಿತುಕೊಳ್ಳಿ. ಬಂದುಬಿಟ್ಟೆ'' ಎಂದು ಹೇಳಿ ಅವನ ಮುಂದೆ ಆ ದಿನದ ವೃತ್ತಪತ್ರಿಕೆಯನ್ನು ಹಾಕಿ ಒಳಗೆ ಹೋದರು.

ರಾಜಣ್ಣ ಆ ದಿನದ ಪತ್ರಿಕೆಯನ್ನು ಓದಿರಲಿಲ್ಲ. ಅದು ಮುಂದೆಯೇ ಇತ್ತು. ಕಣ್ಣು ಅದರ ಮೇಲೆ ಅತ್ತಕಡೆಯಿಂದ ಇತ್ತ ಕಡೆಗೆ ಹಾಯುತಿತ್ತು. ಆದರೆ ಅವನ ಮನಸ್ಸು ಅಲ್ಲಿ ನಿಲ್ಲದೇ ಎಲ್ಲೆಲ್ಲಿಯೋ ಹರಿದಾಡುತಿತ್ತು.

ಮೊದಲು ಅದು ವೆಂಕಟೇಶಯ್ಯನವರ ಕಡೆಗೆ ಹರಿಯಿತು. ಈಚೆಗೆ ಒಂದು ತಿಂಗಳಿಂದಲೂ ಅವನಿಗೆ ವೆಂಕಟೇಶಯ್ಯನವರ ಪರಿಚಯ. ಆದರೂ ಅದು ವರ್ಷಾಂತರಗಳ ಬಾಂಧವ್ಯದಂತೆ ಬೆಳೆದುಕೊಂಡು ಬಂದಿತ್ತು. ಯಾರಿಗಾದರೂ ಆಗಲೀ, ವೆಂಕಟೇಶಯ್ಯನವರ ವಿಷಯದಲ್ಲಿ ಆತ್ಮೀಯತೆಯುಂಟಾಗ ಬೇಕಾದರೆ ಅದಕ್ಕೇನೂ ಬಹಳ ಕಾಲವು ಬೇಕಾಗುತ್ತಿರಲಿಲ್ಲ. ಅವರು ವಿಶ್ವಾಸದಿಂದ 'ಏನಪ್ಪಾ' ಎಂದು ಸಂಭೋಧಿಸುತ್ತಿದ್ದ ಒಂದು ಮಾತೇ ಸಾಕಾಗಿತ್ತು. ಅದನ್ನು ಕೇಳಿದ ಕೂಡಲೇ ಯಾವ ಜನ್ಮದ ಬಂಧುವೋ ಎಂದೆನಿಸುತಿತ್ತು.

ಮದವೆ ಹದಿನೈದು ದಿನವಿದೆ ಎನ್ನುವಾಗಲೇ ರಾಜಣ್ಣ ವ್ಯಾಗಡಿಗೆ ಹೋಗುವುದೆಂದು ಗೊತ್ತಾಗಿತ್ತು. ಬರುವ ಹೊತ್ತಿಗೆ ಸಿದ್ಧವಾಗಿರುವುದಾಗಿಯೂ ನೇರವಾಗಿ ಬಸ್ಸಿಗೆ ಹೊರಟುಹೋಗುವುದೆಂದೂ ಹೇಳಿದ್ದರು. ಅಂತಹದರಲ್ಲಿ ಅವರಿಗೆ ಕೆಲಸವೇನು ಬಿದ್ದಿತು. ಯಾಕೆ ಹೋದರು?

ಅನಂತರ ಈ ಮನೆಯ ದಂಪತಿಗಳ ವಿಷಯ ಮನಸ್ಸಿಗೆ ಬಂದಿತು. ಇವರುಗಳು ಎಷ್ಟು ಸರಳವಾದವರು ಎಷ್ಟು ವಿಶ್ವಾಸದಿಂದ ಮಾತನಾಡುತ್ತಾರೆ. ಇವರಲ್ಲಿ ದೋಷವೆಂದರೆ ಒಂದೇಒಂದು ದೋಷವನ್ನು ಹೇಳಬಹುದು. ಈ ಗೃಹಸ್ಥನಿಗೆ ವಿಪರೀತ ಮಾತನಾಡುವ ಚಪಲ.

ಆ ವೃದ್ಧ ದಂಪತಿಗಳನ್ನು ಕುರಿತು ಆಲೋಚಿಸುತ್ತಿದ್ದ ರಾಜಣ್ಣನಿಗೆ ಅನ್ನಿಸಿತು. ತಾನೂ ಇವರ ಹಾಗೆಯೇ ಬದುಕಬೇಕೆಂದು.

ಇವರುಗಳೇನು ಆಗರ್ಭ ಶ್ರೀಮಂತರಲ್ಲ. ಸಿರಿವಂತಿಕೆಯ ಸೂಚನೆಗಳೇ ಇಲ್ಲ. ಸಾಧಾರಣ ಮಧ್ಯಮ ದರ್ಜೆಯ ಜನಗಳಂತೆ ಇದ್ದಾರೆ. ಮಗನೋ, ಮಕ್ಕಳೋ ಇರಬೇಕು. ಅವರುಗಳು ಏನೋ ಸಂಪಾದಿಸಿ ತರಬಹುದು. ಈ ಮುದುಕನಿಗೆ ಅಷ್ಟೋ ಇಷ್ಟೋ ಪೆನ್ಷನ್ ಬರಬಹುದು, ಏನೋ ಇದ್ದುದರಲ್ಲಿ ತೃಪ್ತಿಯಾಗಿ ಆನಂದದಿಂದ ಕಾಲ ಹಾಕುತ್ತಿದ್ದಾರೆ. ಹೀಗೆ ತೃಪ್ತಿಯಿಂದ ಬದುಕುವ ಜೀವನವು ಮುಖ್ಯವೇ ಹೊರತು ಸಿರಿವಂತಿಕೆಯಿಂದ ಏನಾಗುತ್ತದೆ ?

ರಾಜಣ್ಣನ ಮನಸ್ಸು ಅತ್ತ ಇತ್ತ ಚಲಿಸುತ್ತಾ ಅವನ ಕಣ್ಣುಗಳು ನೆಪ ಮಾತ್ರಕ್ಕೆ ಪತ್ರಿಕೆಯ ಮೇಲೆ ಹಾಯುತ್ತಿದ್ದ ಹಾಗೆಯೇ ಹಜಾರದಲ್ಲಿ ತೂಗು ಹಾಕಿದ್ದ ದೊಡ್ಡ ಗಡಿಯಾರ ಗಂಟೆ ಹೊಡೆದು ಹನ್ನೆರಡಾಯಿತೆಂಬುದನ್ನು ಸೂಚಿಸಿತು.

೩

ವಿಶಾಲಾಕ್ಷಮ್ಮನವರು ಅಂದು ಮಾಮೂಲು ಅಡಿಗೆಯನ್ನೇ ಮಾಡಿದ್ದರು. ಹೊಸಬನೊಬ್ಬನು ಬಂದಿದ್ದಾನೆಯಲ್ಲಾ ಎಂದು ಸ್ವಲ್ಪ ಚಟ್ನಿ ಅರೆದು, ನಾಲ್ಕು ಸಂಡಿಗೆ ಹುರಿದಿದ್ದರು.

ಆದರೆ ಬಡಿಸಿದಾಗ ಉಪ್ಪಿನ ಕಾಯಿ, ಚಟ್ನೀ, ಪಲ್ಯ, ಬಜ್ಜೀ, ಸಂಡಿಗೆ, ಅನ್ನಗಳಿಂದ ಎಲೆಯು ತುಂಬಿಹೋಯಿತು. ಸಮೃದ್ಧಿಯಾಗಿ ಅಡಿಗೆ ಮಾಡಿದ್ದಂತೆ ಭಾಸವಾಗುತಿತ್ತು.

ಎರಡೆಲೆಯನ್ನು ಒಂದು ಕಡೆ ಹಾಕಿತ್ತು. ಮತ್ತೊಂದು ಎಲೆಯನ್ನು ಬೇರೇ ಪಂಕ್ತಿಯಲ್ಲಿ ಹಾಕಿತ್ತು.

ಹೋಗಿ ಕುಳಿತುಕೊಳ್ಳುತ್ತಿದ್ದಾಗಲೇ ಆ ಮತ್ತೊಂದು ಎಲೆಯು ಯಾರಿಗೆಂದು ರಾಜಣ್ಣ ಯೋಚಿಸಿದ.

ವಿಶಾಲಾಕ್ಷಮ್ಮ ತುಪ್ಪ ಬಡಿಸಿ, ಸಾರಿನ ಪಾತ್ರೆಯನ್ನೂ ಸೌಟನ್ನೂ ತೆಗೆದುಕೊಂಡು ಬಂದ ಕೂಡಲೇ ಭಾಗ್ಯ ಬಂದು ಅಲ್ಲಿ ಕುಳಿತುಕೊಂಡಳು.

ಗಳನ್ನು ಅ...

ಪಾರ್ಶ್ವದಲ್ಲಿ ಊಹಿಸಿದ.

ಅವಳ ಕಡೆಯಿಂದ ರಾಜಣ್ಣ

ಆಗಲಿಲ್ಲ.

ಭಾಗ್ಯಳದು ಗುಂಡು ಮುಖ. ವಿಶಾಲವಾ

ಭಾಗವನ್ನು ಮುಚ್ಚುವಂತಹ ಮೆಟ್ಟಿಲು ಮೆಟ್ಟಿಲಾಗಿ

ಮುಂಗುರುಳು. ಅದರ ಕೆಳಗೆ ಈ ಕಡೆಯಿಂದ ಆ ಕಡೆಯ

ನೀಳವಾದ ಹುಬ್ಬು. ಪ್ರಕಾಶಮಾನವಾದ ಬೊಗಸೆ ಕಣ್ಣುಗಳ..

ಗಲ್ಲ. ತಾಂಬೂಲಚರ್ವಣ ಮಾಡಿದಂತೆ ಕಾಣುವ ಕೆಂದುಟಿಗಳ

ಲ್ಲಿಕ್ಕೂ ಹೊಂದಿಕೊಂಡಿರುವಂತಿರುವ ಮಾಟವಾದ ಮೂಗು,

ಮೊದಲ ಎಲೆಯಲ್ಲಿ ರಾಜಣ್ಣನನ್ನು ಕೂರಿಸಿದ್ಧರು. ಎರಡನೆ ಎಲೆಯಲ್ಲಿ ಗುಂಡೂರಾಯರು ಕುಳಿತುಕೊಂಡಿದ್ದರು. ವಿಶಾಲಾಕ್ಷಮ್ಮ ಸಾರು ಬಡಿಸಲು ಮೊದಲನೆಯ ಎಲೆಯ ಮುಂದೆ ನಿಂತುಕೊಂಡಿದ್ದರು.

ರಾಜಣ್ಣನ ಗಮನ ಅತ್ತಕಡೆಯಿರಲಿಲ್ಲ. ಈ ಹುಡುಗಿ ಎಷ್ಟು ಲಕ್ಷಣ ವಾಗಿದ್ದಾಳೆ ಎಂದು ನೋಡುತಿದ್ದ

ಸಾರಿನಪಾತ್ರೆ ಸೌಟುಗಳನ್ನು ಹಿಡಿದುಕೊಂಡಿದ್ದ ವಿಶಾಲಾಕ್ಷಮ್ಮ "ಸಾರು ಬಡಿಸಲೇ ?" ಎಂದು ಮೃದುವಾಗಿ ಕೇಳಿದರು.

ರಾಜಣ್ಣ ಬೆಚ್ಚಿಬಿದ್ದು ದೃಷ್ಟಿಯನ್ನು ಭಾಗ್ಯಳ ಕಡೆಯಿಂದ ಎಳೆದು ಕೊಂಡು ''ಹುಂ'' ಎಂದ.

ಆಕೆ ಅವನಿಗೆ ಸಾರು ಹಾಕಿ, ಮಿಕ್ಕವರಿಗೂ ಬಡಿಸಿದರು.

ಸಾರು ಪನ್ನೀರಿನಂತೆ ತಿಳಿಯಾಗಿತ್ತು. ಬಹಳ ರುಚಿಯಾಗಿತ್ತು.

ಅದರ ಕಡೆ ರಾಜಣ್ಣನ ಗಮನವಿರಲಿಲ್ಲ. ಅವನ ದೃಷ್ಟಿ ಭಾಗ್ಯಳ ಕಡೆಗಿತ್ತು. ಅಷ್ಟೇ ಅಲ್ಲ. ಅವನ ಮನಸ್ಸು ಅವಳ ರೂಪಾಚ್ಛಾದನೆಯ ಲ್ಲಿಯೇ ನಿಲ್ಲಲಿಲ್ಲ. ಇವಳಿಗೆ ಮದುವೆಯಾಗಿದೆಯೇ ಎಂದು ಸಹ ಆಲೋಚನೆ ಮೂಡಿತು.

ಹುಡುಗಿ ಚೆನ್ನಾಗಿ ಬೆಳೆದಿದ್ದಾಳೆ. ಇಪ್ಪತ್ತೆರಡು ಇಪ್ಪತ್ತು ಮೂರು

ಗಿರುವು

ಣ್ಣುಗಳು ಪ್ರಯತ್ನ ಪಟ್ಟವು.
ರಳನ್ನು ದೃಷ್ಟಿಸಿ ನೋಡಿದ. ಎ ರ
ಎತ್ತಾವುದೂ ಕಂಡುಬರಲಿಲ್ಲ. ಭ್ರಾಂತಿ
ತ್ತಿದೆಯೇನೋ ಎಂದು ಕದ್ದು ಕದ್ದು ನೋಡಿದ.
ಇಲ್ಲ, ಹುಡುಗಿಗೆ ಮದುವೆಯಾಗಿಲ್ಲವೆಂದೇ ನಿರ್ಧರ

ಪ್ಪ ವಯಸ್ಸಾದರೂ ಹುಡುಗಿಗೇಕೆ ಮದುವೆ ಮಾಡದೇ ಮನೆಯ
ಂಡಿದ್ದಾರೆ ಎಂಬ ಆಲೋಚನೆಯೂ ಸಹ ಅವನ ಮನಸ್ಸಿನಲ್ಲಿ ಸುಳಿ
ೀ ಇರಲಿಲ್ಲ.

ನಿಜ. ಆ ಆಲೋಚನೆಯು ಅವನ ಮನಸ್ಸಿಗೆ ಬಂದಿದ್ದಿತು. ಆದರೆ ಚಪಲ ಅವಳನ್ನು ಪುನಃಪುನಃ ನೋಡುವುದರಲ್ಲಿತ್ತು. ಮುಖವನ್ನು ನೋಡಿ ಚೆನ್ನಾಗಿದೆ ಎಂದುಕೊಂಡ ಕಣ್ಣುಗಳು ಮತ್ತೂ ಕೆಳಗಿಳಿದುವು. ಅವಳ ಕೈ ಕಾಲುಗಳನ್ನು ನೋಡಿದವು, ಊಟ ಮಾಡುವಾಗ ಚಲಿಸುವ ಬೆರಳುಗಳನ್ನೂ ಆಡುವ ತೋಳನ್ನೂ ನೋಡಿದವು. ಕೋಮಲವಾಗಿ ಅವಳ ಕೈ ಬೆರಳುಗಳೆಷ್ಟು ಸೊಗಸಾಗಿವೆ. ಕಲಸಿದ ಅನ್ನವನ್ನು ಬಾಯಲ್ಲಿಟ್ಟುಕೊಳ್ಳುತ್ತಿದ್ದರೂ ಅವು ಕಲಾವತಿಯ ಕೈ ಬೆರಳುಗಳಂತೆಯೇ ಇವೆ. ತೋಳುಗಳು ಎಂಥಾ ತುಂಬು ತೋಳುಗಳವು. ಕೆಂಪು ಮಿಶ್ರವಾದ ಆ ಬಿಳಿಯ ತೋಳುಗಳಿಗೆ ಅಂಚು ಬಂದಿರುವ ಆ ರವಿಕೆ ಎಷ್ಟು ಚೆನ್ನಾಗಿ ಒಪ್ಪುತ್ತಿವೆ. ಅವಳು ಪೂರ್ಣವಾಗಿ ಸೆರಗು ಹೊದ್ದಿದ್ದಳು. ಆದರೆ ತನ್ನ ಉನ್ನತವಾದ ಗುಂಡು ಕುಚಗಳನ್ನವಳು ಮುಚ್ಚಿಟ್ಟುಕೊಂಡಿರುವುದು ಸಾಧ್ಯವಾಗಿರಲಿಲ್ಲ,

ರಾಜಣ್ಣ ಬಿಳಿಯ ಹುಡುಗಿಯರನ್ನು ನೋಡಿದ್ದ. ಅಲ್ಲಿ, ಇವಳ ಮೈ ಬಣ್ಣ ಬಿಳಿಯಲ್ಲ. ಸೌಂದರ್ಯವತಿಯರಾದ ಹೆಂಗಸರ ಮೈಬಣ್ಣ ಬಿಳಿಯ ದಂತದ ಮೇಲೆ ಚಿನ್ನವನ್ನು ಕಾಸಿ ಹುಯ್ದಂತೆ ಕಾಣುವ ನಿಂಬೇ ಹಣ್ಣಿನ ಬಣ್ಣವಾಗಿರುತ್ತದೆ ಎಂದು ಕಾದಂಬರಿಗಳಲ್ಲಿ ಓದಿದ್ದ. ಇದು ಆ ಬಣ್ಣವಲ್ಲ. ಬಿಳುಪು ನಸುಗೆಂಪುಗಳು ಪ್ರಿಯವಾದ ರೀತಿಯಲ್ಲಿ ಬೆರತ ಬಣ್ಣವದು. ಆ

ಬಣ್ಣವು ಚೆನ್ನೇ ಅಲ್ಲವೇ ಎಂಬ ತರ್ಕ ಮಾಡುವುದು ಪ್ರಯೋಜನವಿಲ್ಲ. ರೂಪರಾಶಿಗೆ ಮೆರಗು ಕೊಟ್ಟಂತೆ ಆ ಬಣ್ಣವು ಪ್ರಕಾಶಿಸುತ್ತಿದೆ.

ಸಾರೂ ಅನ್ನವನ್ನು ತಿಂದನಂತರ ಅನ್ನವನ್ನು ಹಾಕಿ ವಿಶಾಲಾಕ್ಷಮ್ಮನವರು ಮತ್ತಷ್ಟು ಚಟ್ನಿಯನ್ನು ಹಾಕಿದರು. ಎರಡನೆಯ ಸಲ ಕಲೆಸಿ ಅಭ್ಯಾಸವಿಲ್ಲದಿದ್ದರೂ ರಾಜಣ್ಣ ಚಟ್ನಿಯಲ್ಲಿ ಕಲೆಸಿದ.

ಆಕೆ ತುಪ್ಪವನ್ನು ಬಡಿಸಿ ನಗುತ್ತಾ "ನಿಮಗೆ ಬಹಳ ಸಂಕೋಚ. ಸರಿಯಾಗಿ ಊಟ ಮಾಡುವುದಿಲ್ಲ" ಎಂದರು.

ರಾಜಣ್ಣ ಸೌಜನ್ಯದಿಂದ "ಇಲ್ಲ. ನನಗೇನೂ ಸಂಕೋಚವಿಲ್ಲ. ನಾನು ಊಟ ಮಾಡುವುದೇ ಇಷ್ಟು'' ಎಂದು ಹೇಳಿದ.

ಗುಂಡೂರಾಯರು ಮಹತ್ತರವಾದ ಸತ್ಯವನ್ನು ಹೇಳುವಂತೆ ಹೇಳಿದರು.

''ನಮ್ಮ ಮನೆಯಲ್ಲಿಯೇನೋ ಆಯಿತು. ನಾಳೆಯ ದಿನ ನೀವು ಮಾಗಡಿಗೆ ಹೋಗವಿರಲ್ಲಾ. ನೀವೇ ಸರಿಯಾಗಿ ಹಾಕಿಸಿಕೊಂಡು ಊಟ ಮಾಡಿದರೆ ಸರಿ, ಇಲ್ಲದೇ ಇದ್ದರೆ ವೆಂಕಟೇಶಯ್ಯನವರು ಸುಮ್ಮನೆ ಬಿಡುವುದಿಲ್ಲ. ತಮಗೆಷ್ಟು ಬೇಕೋ ಅಷ್ಟನ್ನೂ ಎಲೆಗೆ ಹಾಕಿಸಿ, ನೀವು ತಿಂದು ಮುಗಿಸುವವರೆವಿಗೆ ಪಕ್ಕದಲ್ಲಿ ಕುಳಿತುಬಿಡುತ್ತಾರೆ. ಅವರೊಂದಿಗೆ ಕುಳಿತು ನೀವು ಊಟ ಮಾಡಿಲ್ಲವೆಂದು ಕಾಣುತ್ತದೆ''!

''ಹಾಗೆ ಮಾಡಿದರೆ ನಾನು ಅಲ್ಲಿಂದ ಓಡಿ ಬಂದುಬಿಡಬೇಕಾಗುತ್ತದೆ''

ಆ ಮಾತಿಗೆ ಗಂಡಹೆಂಡರಿಬ್ಬರೂ ನಕ್ಕರು. ಭಾಗ್ಯಳ ಮುಖದಲ್ಲಿಯೂ ನಗುವು ಸುಳಿಯಿತು.

ಮಾಗಡಿಗೆ ಹೋಗಿ ವೆಂಕಟೇಶಯ್ಯನವರ ಮನೆಯಲ್ಲಿ ಊಟ ಮಾಡಿದಾಗ ತಮಗಾದ ಕೆಲವು ಅನುಭವಗಳನ್ನು ಅವರು ಹೇಳತೊಡಗಿದರು.

ಮಜ್ಜಿಗೆ ಬಡಿಸುವವರೆವಿಗೆ ವಿಶಾಲಾಕ್ಷಮ್ಮ ಹಾಗೋಹೀಗೋ ತಡೆದುಕೊಂಡರು. ಅನಂತರ ಇನ್ನು ತಡೆಯುವುದಕ್ಕಾಗದೇ ಅಂದರು.

"ನೀವು ಮಾತನಾಡಿಸುತ್ತಾ ಆಡಿಸುತ್ತಾ ಮಾತಿನಲ್ಲಿಯೇ ಅವರಿಗೆ ಹೊಟ್ಟೆ ತುಂಬಿಸುತ್ತಿದ್ದೀರಲ್ಲಾ. ಊಟ ಮಾಡಲಿ, ಸ್ವಲ್ಪ ಅವಕಾಶಕೊಡಿ"

"ಮಾತನಾಡುತ್ತಿದ್ದರೆ ಊಟ ಮಾಡುವುದಕ್ಕೆ ತೊಂದರೆ ಏನು ಬಂದಿತು? ಈಗ ನಾನು ಮಾತೂ ಆಡುತ್ತಾ ಊಟ ಮಾಡುತ್ತಿಲ್ಲವೇ?''

"ನಿಮ್ಮ ಹಾಗೆಯೇ ಅವರಿಗೂ ಅಭ್ಯಾಸವಿರಬೇಕಲ್ಲ"

"ಅದೇನು ಪರವಾಯಿಲ್ಲ. ಇಷ್ಟಕ್ಕೂ ಈಗ ಊಟವೇ ಆಗಿಹೋಯಿತಲ್ಲ''

ಅವನು ಹೇಳಿದಂತೆ ಆ ವೇಳೆಗೆ ಊಟ ಮುಗಿಯುತ್ತಾ ಬಂದಿತ್ತು.

ಪುನಃ ಗಂಡಸರಿಬ್ಬರೂ ಒಂದು ಹಜಾರದ ಚಾಪೆಯ ಮೇಲೆ ಕುಳಿತುಕೊಂಡರು. ಅಷ್ಟು ಹೊತ್ತಿಗಾಗಲೇ ಬೆಳ್ಳಿಯ ತಟ್ಟೆಯಲ್ಲಿ ಚಿಗುರೆಲೆ ಬಣ್ಣ ಕಟ್ಟಿದ ಅಡಿಕೆ, ಸುಣ್ಣಗಳು ಸಿದ್ಧವಾಗಿದ್ದವು.

ತಾವು ತೆಗೆದುಕೊಳ್ಳುವ ಮೊದಲು ಗುಂಡೂರಾಯರು "ತಾಂಬೂಲ ಹಾಕಿಕೊಳ್ಳಿ" ಎಂದರು.

"ಇಲ್ಲ, ನನಗೆ ಅಭ್ಯಾಸವಿಲ್ಲ" ಎಂದು ಹೇಳಿ ರಾಜಣ್ಣ ಎರಡು ಅಡಿಕೆ ತೆಗೆದು ಬಾಯಲ್ಲಿ ಹಾಕಿಕೊಂಡ.

ಗುಂಡೂರಾಯರು ಪಟ್ಟಂಗವಾಗಿ ಎಲೆ ಅಡಿಕೆ ಹಾಕಿಕೊಂಡರು.

''ನಾನು ಯಾವಾಗಲೂ ಸ್ವಲ್ಪ ಮಾತನಾಡುವುದು ಹೆಚ್ಚು. ನೀವು ಇಲ್ಲಿಯೇ ಇದ್ದರೆ ನಮ್ಮ ಯಜಮಾನತಿ ಹೇಳಿದಂತೆ ಮಾತನಾಡಿ ಆಡಿ ನಿಮಗೆ ಬೇಜಾರು ಮಾಡಿಬಿಡುತ್ತೇನೆ ಎಂದು ಕಾಣುತ್ತದೆ. ಬನ್ನಿ, ಆ ಕೋಣೆಯಲ್ಲಿ ಜಾಗ ಮಾಡಿಕೊಡುತ್ತೇನೆ. ವಿಶ್ರಾಂತಿ ತೆಗೆದುಕೊಳ್ಳುವಿರಂತೆ''

ರಾಜಣ್ಣ ಮಾಮೂಲಿಗಿಂತಲೂ ಸ್ವಲ್ಪ ಹೆಚ್ಚಾಗಿಯೇ ಊಟ ಮಾಡಿದ್ದ. ಅದರಿಂದ ಅವನಿಗೆ ವಿಶ್ರಾಂತಿಯೂ ಬೇಕಾಗಿತ್ತು. ಗುರುತು ಪರಿಚಯ ಸಹ ಇಲ್ಲದವರ ಮನೆಯಲ್ಲಿ ಮಲಗುತ್ತೇನೆ ಎನ್ನುವುದು ಹೇಗೆ? ಇಲ್ಲಿ ಹಜಾರದಲ್ಲಿ ಕುಳಿತುಕೊಂಡಿದ್ದರೆ ಮನೆಯವರು ಓಡಿಯಾಡುತ್ತಿರುತ್ತಾರೆ- ಯಾರಾದರೂ ಹೊರಗಿನವರು ಬರಬಹುದು. ಕುಳಿತುಕೊಳ್ಳುವಾಗ ಕಾಲು ಚಾಚಿಕೊಂಡು ಕುಳಿತುಕೊಳ್ಳುವುದಕ್ಕೂ ಇಲ್ಲ. ಯಾವುದೋ ಕೋಣೆ ಎನ್ನುತ್ತಾರೆಯಲ್ಲಾ ಅಲ್ಲಾದರೆ ಧಾರಾಳವಾಗಿ ಕುಳಿತುಕೊಳ್ಳಬಹುದೆನ್ನಿಸಿತು. ಗುಂಡೂರಾಯರು ಹೇಳಿದ್ದಕ್ಕೆ ಅವನು ತಯಾರಾಗಿಯೇ ಇದ್ದ. ಹಾಗಿದ್ದರೂ ಅವರು ಏಳು ಎಂದ ತಕ್ಷಣ ಎದ್ದು ನಿಂತುಬಿಡುವುದು ಅವನಿಗೆ ಅಷ್ಟು ಸಮಂಜಸವಾಗಿ ತೋರಲಿಲ್ಲ. ಕುಳಿತೇ ಇದ್ದ.

ಅವನು ನಾನು ಇನ್ನೆಲ್ಲಿಯೂ ಬರುವುದಿಲ್ಲ. ಇಲ್ಲಿಯೇ ಕುಳಿತಿರುತ್ತೇನೆ ಎಂದು ಹೇಳಿದ್ದರೂ ಗುಂಡೂರಾಯರು ಅವನೊಂದಿಗೆ ಕುಳಿತು ಮಾತನಾಡು ತ್ತಿರಲಿಲ್ಲ. ಅದು ಅವರಿಗೆ ಇಷ್ಟವಿಲ್ಲವೆಂದಲ್ಲ. ಊಟವಾದ ಮೇಲೆ ತಲೆ ಕೆಳಗೆ ಹಾಕಿ ಮಲಗುವುದೇ ರೂಢಿಯಾಗಿದ್ದ ಅವರಿಂದ ಕುಳಿತುಕೊಳ್ಳುವುದು ಸರ್ವಥಾ ಸಾಧ್ಯವಿರಲಿಲ್ಲ.

"ಬನ್ನಿ" ಎಂದು ರಾಜಣ್ಣನನ್ನು ಕರೆದವರು ಎದ್ದು ನಿಂತುಕೊಂಡು ಬಿಟ್ಟರು. ವಿಧಿಯಿಲ್ಲದೇ ರಾಜಣ್ಣನೂ ಎದ್ದು ಅವರನ್ನು ಅನುಸರಿಸಿದ.

ಅವರು ರಾಜಣ್ಣನನ್ನು ಕರೆದುಕೊಂಡು ಹೋದ ಕೋಣೆಗೆ ಹಜಾರ ದಿಂದಲೂ ಒಂದು ಬಾಗಿಲಿತ್ತು. ಅದು ಬೀದಿಯ ಕೋಣೆ. ಅಲ್ಲಿಯೂ ಒಂದು ಚಾಪೆಯನ್ನು ಹಾಸಿತ್ತು. ಮೂಲೆಯಲ್ಲಿ ಮೇಜು ಕುರ್ಚಿಗಳೂ, ಮೇಜದ ಮೇಲೆ ಪುಸ್ತಕಗಳೂ, ಟೇಬಲ್ ಲ್ಯಾಂಪೂ ಇದ್ದವು.

ಕೋಣೆಯನ್ನು ತೋರಿಸಿದ ಗುಂಡೂರಾಯರು ಯಾವ ಮಾತೂ ಆಡದೆ ಒಳಗೆ ಹೊರಟುಹೋದರು. ಅವರೇಕೆ ಹಾಗೆ ಹೋದರೆಂಬುದು ಅರ್ಥವಾಗದೇ ಕುಳಿತಿದ್ದಂತೆಯೇ ಒಂದು ದಿಂಬು ತಂದಿಟ್ಟು "ಮಲಗಿಕೊಳ್ಳಿ. ಕಾಫೀ ಆಗುತ್ತಲೂ ಎಬ್ಬಿಸುತ್ತೇನೆ'' ಎಂದು ಹೇಳಿದರು.

ಹೋಗುತ್ತಾ ಅವರು ಬಾಗಿಲು ಸೇರಿಸಿಕೊಂಡು ಹೋದರು.

ಆ ಕೋಣೆಯಲ್ಲಿ ಹಾಸಿದ್ದುದು ಕಡಕೊಳದ ಬಣ್ಣದ ಚಾಪೆ. ಅದಿನ್ನೂ ಹೊಸಹೊಸದಾಗಿಯೇ ಕಾಣುತಿತ್ತು. ಅದರ ಕೊನೆಯಲ್ಲಿ ಮೃದುವಾದ ದಿಂಬು. ಅದನ್ನು ಅಗಸನ ಮಡಿಮಾಡಿದ ಚೀಲದಲ್ಲಿ ಇಡಲಾಗಿದೆ. ಮೇಲೆ ಕೆಂಪು ಅಕ್ಷರಗಳಲ್ಲಿ "ಗುಡ್‌ನೈಟ್'' ಎಂದು ಕಸೂತಿ ಹಾಕಿದ್ದಾರೆ. ಹೊಟ್ಟೆ ಯೂ ಸ್ವಲ್ಪ ಭಾರವಾಗಿದೆ. ಅದಷ್ಟನ್ನೂ ನೋಡಿದರೆ ಯಾರಿಗಾದರೂ ಕಾಲು ಚಾಚಿ ಬಿದ್ದುಕೊಳ್ಳಬೇಕು ಎಂದು ತೋರುವುದು ಸಹಜ,

ಅವನಿಗೂ ಹಾಗೆ ತೋರಿತು. ಮಲಗಿಕೊಂಡ.

ರಾಜಣ್ಣನಿಗೆ ಮಧ್ಯಾಹ್ನ ಮಲಗಿ ನಿದ್ದೆಮಾಡುವುದು ಅಭ್ಯಾಸವಿರಲಿಲ್ಲ. ಆದರೂ ಒಳ್ಳೆಯ ನಿದ್ದೆ ಬಂದಿತು. ಅದು ಕೇವಲ ಒಂದು ಗಂಟೆಯ ಹೊತ್ತು ಮಾತ್ರ. ಅನಂತರ ಏನೋ ಇದ್ದಕ್ಕಿದ್ದ ಹಾಗೆಯೇ ಎಚ್ಚರವಾಯಿತು. ಅಲ್ಲಿಗೂ ನಿದ್ದೆಯ ಜೊಂಪು ಹೋಗಿರಲಿಲ್ಲ. ಪುನಃ ಸ್ವಲ್ಪ ಪ್ರಯತ್ನಪಟ

ದ್ದರೆ ನಿದ್ದೆ ಬಂದುಬಿಡುತಿತ್ತು. ಯಾರಾದರೂ ಬರಬಹುದು. ಗುಂಡೂ ರಾಯರೇ ಬರಬಹುದು. ಕಾಲು ಚಾಚಿ ಮಲಗಿರುವುದು ಚೆನ್ನಾಗಿಲ್ಲವೆಂದು ತೋರಿತು. ಕೂಡಲೇ ಎದ್ದು ಕುಳಿತುಕೊಂಡ.

ಎರಡು ನಿಮಿಷಗಳಲ್ಲಿ ಜೊಂಪು ಹೋಗಿ ಪೂರ್ಣವಾಗಿ ಎಚ್ಚರವಾ ಯಿತು.

ಗುಂಡೂರಾಯರು ಬರುತ್ತಾರೆಯೋ ಎಂದು ಸ್ವಲ್ಪ ಹೊತ್ತು ನಿರೀಕ್ಷಿಸಿ ನೋಡಿದ. ಅವರ ಸುಳಿವೇ ಇಲ್ಲ.

ಸುಮ್ಮನೆ ಕುಳಿತುಕೊಂಡೇನು ಮಾಡುವುದೆಂದು ಎದ್ದು ಮೇಜದ ಬಳಿಗೆ ಹೋದ. ಅದರ ಮೇಲೆ ಕೆಲವು ಕಾಲೇಜು ಪುಸ್ತಕಗಳು ಬಿದ್ದಿದ್ದವು. ಮೂರು ನಾಲ್ಕು ಕನ್ನಡ ಕಾದಂಬರಿಗಳು ಬಿದ್ದಿದ್ದವು. ಮಾರನೆಯ ದಿನ ಬೆಳಗಾಗ ಮಾಗಡಿಯ ಬಸ್ಸಿಗೆ ಹೋಗುವವರೆವಿಗೆ ಕಾಲಕಳೆಯಬೇಕಲ್ಲ. ಅಷ್ಟಿಲ್ಲದಿದ್ದರೆ ವೆಂಕಟೇಶಯ್ಯನವರು ಬರುವವರೆವಿಗೆ-ಇಲ್ಲ. ಅಷ್ಟು ಬಿಡು ವಿಲ್ಲ-ಗುಂಡೂರಾಯರು ಕಾಫಿಗೆ ಕರೆದು ಮಾತು ಮೊದಲು ಮಾಡುವವರೆವಿಗೆ ಯಾದರೂ ಕಾಲ ಕಳೆಯಬೇಕಲ್ಲ. ಅವುಗಳಲ್ಲಿ ಯಾವುದಾದರೊಂದು ಕಾದಂಬರಿಯನ್ನು ಆರಿಸಿಕೊಂಡು ಓದೋಣವೆಂದುಕೊಂಡವನು ಆ ಕಾದಂ ಬರಿಗಳಷ್ಟನ್ನೂ ಕೈಗೆತ್ತಿಕೊಂಡು ಬಂದ.

ನಾಲ್ಕು ಹೆಜ್ಜೆಗಳೇ ಆಗಿರಬಹುದು. ಅಲ್ಲಿಂದ ಚಾಪೆಯ ಬಳಿಗೆ ಹೋಗಿ ಕುಳಿತುಕೊಳ್ಳಬೇಕು. ಅಷ್ಟರಲ್ಲಿ ಕುತೂಹಲವುಂಟಾಯಿತು. ಈ ಮನೆ ಯಲ್ಲಿ ಕಾಲೇಜಿಗೆ ಹೋಗುವವರಾರು ? ಅವನು ಮೊದಲೇ ಒಂದೆರಡು ಪತ್ಯ ಪುಸ್ತಕಗಳನ್ನು ತಿರುವಿಹಾಕಿದ್ದ. ಆದರೆ ಅದರಲ್ಲಿ ಯಾರ ಹೆಸರು ಬರೆದಿದೆ ಎಂಬುದನ್ನು ಗಮನವಿಟ್ಟು ನೋಡಿರಲಿಲ್ಲ. ಈಗ ಆಸಕ್ತಿಯುಂಟಾದ ಮೇಲೆ ತೆಗೆದು ನೋಡಿದ. ಭಾಗ್ಯ-ಎಂದು ಬರೆದಿತ್ತು.

ಓಹೋ ! ಮಧ್ಯಾಹ್ನ ತನ್ನೊಡನೆ ಊಟಕ್ಕೆ ಕುಳಿತುಕೊಂಡಿದ್ದ ಹುಡುಗಿಯ ಹೆಸರು ಭಾಗ್ಯ. ಅವಳು ಭಾಗ್ಯಳೇ. ಅವಳನ್ನು ಕೈ ಹಿಡಿ ಯುವವನು ಭಾಗ್ಯವಂತನೇ.

ರಾಜಣ್ಣನ ಆಸಕ್ತಿಯು ಅಲ್ಲಿಗೇ ನಿಲ್ಲಲಿಲ್ಲ. ಮೇಜದ ಡ್ರಾಯರುಗ ಳಲ್ಲಿ ಏನಿವೆಯೋ ನೋಡಬೇಕೆನ್ನಿಸಿತು. ಅದಕ್ಕೆ ತಕ್ಕ ಕಾರಣವೂ ಇದ್ದಿತು.

ಅವನಿಗೆ ಅಕ್ಕತಂಗಿಯರು ಯಾರೂ ಇರಲಿಲ್ಲ. ಆ ವಯಸ್ಸಿನ ಹುಡುಗಿಯರು ತಮ್ಮ ಡ್ರಾಯರುಗಳಲ್ಲಿ ಏನು ಮುಚ್ಚಿಟ್ಟುಕೊಂಡಿರುತ್ತಾರೆಯೋ ಗೊತ್ತಿರಲಿಲ್ಲ. ಅದನ್ನು ನೋಡಬೇಕೆಂದು ಕುತೂಹಲವುಂಟಾಯಿತು.

ಮೇಜದ ಬಳಿ ನಿಂತಿದ್ದವನು ಯಾರಾದರೂ ಬಂದರೇನೋ ಎಂದು ಹಿಂದೆ ತಿರುಗಿ ನೋಡಿದ. ಯಾರೂ ಕಂಡುಬರಲಿಲ್ಲ. ಬಾಗಿಲಿನ ಒಳಗೆ ಹೋಗಿ ಹಜಾರದಲ್ಲಿ ತಂಗಿ ನೋಡಿದ. ಅಲ್ಲಿಯೂ ಯಾರ ಸುಳಿವೂ ಕಂಡು ಬರಲಿಲ್ಲ.

ಪುನಃ ಬಂದವನು ಡ್ರಾಯರ್ ಎಳೆದು ನೋಡಿದ.

ಮೊದಲು ಕಣ್ಣಿಗೆ ಬಿದ್ದುದೊಂದು ದಯಾಲ್‌ಬಾಗಿನ ಚರ್ಮದ ವ್ಯಾನಿಟೀಬ್ಯಾಗ್. ಅದನ್ನು ತೆಗೆದು ನೋಡಿದ. ಅದರಲ್ಲಿ ಒಂದೆರಡು ರೂಪಾಯಿನ ನೋಟುಗಳೂ, ಒಂದಿಷ್ಟು ಚಿಲ್ಲರೆಯೂ ಇದ್ದುವು. ಹೇರ್‌ಪಿನ್ನುಗಳೂ. ಬಾಚಣಿಗೆಯೂ, ಅಂದವಾದ ಪುಟ್ಟ ಕನ್ನಡಿಯೂ ಕೆಳಗೆ ಬಿದ್ದಿದ್ದವು. ಪೌಡರ್ ಡಬ್ಬಿಯಿದ್ದಿತು. ಪುಸ್ತಕದಂತೆ ಚಚ್ಚೌಕವಾದ ಡಬ್ಬಿಯೊಂದಿದ್ದಿತು. ಅದನ್ನು ತೆಗೆದು ನೋಡಿದ. ಅದರಲ್ಲಿ ಅನೇಕಾನೇಕ ಕವರು, ಕಾರ್ಡುಗಳು.

ಅದನ್ನು ನೋಡಿದ ಕೂಡಲೇ ರಾಜಣ್ಣನ ಎದೆಯು ದಢಕ್ಕೆಂದಿತು. ಅವೇನಾದರೂ ಪ್ರೇಮ ಪತ್ರಗಳೋ ?

ಒಂದೊಂದಾಗಿ ನಾಲ್ಕಾರು ಪತ್ರಗಳನ್ನು ತೆಗೆದು ನೋಡಿದ. ಛೀ ! ಅವು ಪ್ರೇಮ ಪತ್ರಗಳಲ್ಲ. ಯಾರು ಯಾರೋ ಗೆಳತಿಯರು ಭಾಗ್ಯಳಿಗೆ ಬರೆದಿದ್ದ ಪತ್ರಗಳು. ತಾನು ನೋಡಿದುವಂತೂ ಪ್ರೇಮ ಪತ್ರಗಳಲ್ಲ. ಮಿಕ್ಕವುಗಳು? ಪುಸ್ತಕದ ಹಾಳೆಗಳನ್ನು ಈಕ್ಷಿಸಲು ಒಂದೇ ಬಾರಿ ತಿರುವಿದಂತೆ ಅವುಗಳನ್ನು ನೋಡಿದ. ಕವರುಗಳ ಮೇಲೆ ಬರೆದ ವಿಳಾಸಗಳೂ, ಕಾರ್ಡುಗಳ ಮೇಲೆ ಬರೆದ ಅಕ್ಷರಗಳೂ, ಹೆಣ್ಣು ಕೈಗಳಿಂದ ಬರೆಯಲ್ಪಟ್ಟವೇ ಎಂದು ಗುರುತು ಸಿಗುವಂತಿದ್ದುವು.

ಗಾಬರಿಯಿಂದ ಪುನಃ ಹಿಂದಿರುಗಿ ನೋಡಿದ. ಇನ್ನೂ ಯಾರೂ ಬಂದ ಸುಳಿವು ಇರಲಿಲ್ಲ. ಆದರಿಂದ ಅವುಗಳನ್ನು ಯಥಾಸ್ಥಿತಿಯಲ್ಲಿಟ್ಟು ಮೇಜದ ಡ್ರಾಯರು ಮುಚ್ಚಿಬಿಟ್ಟು ಚಾಪೆಯ ಮೇಲೆ ಬಂದು ಕುಳಿತುಕೊಂಡ.

ಆಗ ಅನ್ನಿಸಿತು. ಒಂದು ವೇಳೆ ಯಾರೋ ಭಾಗ್ಯಳಿಗೆ ಪ್ರೇಮ ಪತ್ರಗಳನ್ನೇ ಬರೆದಿದ್ದಾರೆಂದುಕೊಳ್ಳೋಣ. ಅದರಿಂದ ನಷ್ಟವೇನು ? ತಾನೇಕೆ ಅದನ್ನು ಅಷ್ಟು ಪ್ರಾಮುಖ್ಯವಾಗಿ ತೆಗೆದುಕೊಳ್ಳಬೇಕಾಗಿತ್ತು ? ತನ್ನ ಎದೆಯೇಕೆ ಅದಕ್ಕಾಗಿ ಢವಕ್ಕೆನ್ನಬೇಕು ?

ತನಗೂ ಭಾಗ್ಯಳಿಗೂ ಯಾವ ವಿಧವಾದ ಸಂಬಂಧವೂ ಇಲ್ಲ. ಆದರೂ ತನ್ನ ಎದೆಯು ಢವಕ್ಕೆಂದುದುಂಟು. ಅದೇಕೆ ಹಾಗಾಯಿತೆಂದು ಯೋಚಿಸಿದ. ಅರ್ಥವಾಗಲಿಲ್ಲ.

ಪುನಃ ಆ ವಿಷಯ ಮನಸ್ಸಿಗೆ ಬಂದಿತು. ತನಗೇಕೆ ಸಂಬಂಧವಿಲ್ಲದ ವಿಚಾರ ಎಂದು ಆ ಭಾವನೆಯನ್ನು ಮನಸ್ಸಿನಿಂದ ತಳ್ಳಿಹಾಕಿ ಪುಸ್ತಕವನ್ನು ಕೈಗೆತ್ತಿಕೊಂಡ.

ಅವನು ಅಕಸ್ಮಾತ್ ಎತ್ತಿಕೊಂಡರೂ ಕೈಗೆತ್ತಿಕೊಂಡ ಪುಸ್ತಕ ಸ್ವಾರಸ್ಯವಾಗಿತ್ತು. ಯಾವನೋ ಕತೆಗಾರ ಚೆನ್ನಾಗಿಯೇ ಬರೆದಿದ್ದ.

ಒಂದು ಸುಖವಾದ ಸಂಸಾರ. ಹೊಸದಾಗಿ ಮದುವೆಯಾದ ದಂಪತಿಗಳು ಆನಂದದಿಂದ ಜೀವನವನ್ನು ಸಾಗಿಸುತ್ತಿದ್ದಾರೆ. ಆ ಸಮಯದಲ್ಲಿ ಹೆಂಡತಿಗೆ ಒಂದು ಕಾಗದ ಬಂದಿತು. ಅಕಸ್ಮಾತ್ ಅದು ಗಂಡನ ಕೈಗೆ ಸಿಕ್ಕಿತು. ಯಾವನೋ ತನ್ನ ಕಷ್ಟಗಳನ್ನೆಲ್ಲಾ ಬರೆದುಕೊಂಡು ಅವಳ ಜೀವನ ಸುಖವಾಗಿ ಸಾಗಲೆಂದು ಹಾರೈಸಿದ್ದ. ಆ ಕಾಗದ ಬರೆದವನೂ ಆ ಹೆಣ್ಣೂ ಪ್ರೇಮಿಗಳಾಗಿದ್ದರೆಂಬ ಛಾಯೆ ಆ ಪತ್ರದಲ್ಲಿ ಕಂಡುಬರುತಿತ್ತು. ಹಾಲಿನಂತಹ ಸಂಸಾರದಲ್ಲಿ ಹುಳಿ ಹಿಂಡಿದಂತಾಯಿತು. ಅದರಿಂದ ಪ್ರಾಪ್ತವಾದಂತಹ ವಿವಿಧ ಘಟನೆಗಳನ್ನು ಕಾದಂಬರಿಕಾರ ಚಿತ್ರಿಸಿದ್ದ. ಅಷ್ಟೇ ಅಲ್ಲ. ಮೊದಲಿನಿಂದ ಕಡೆಯವರೆವಿಗೆ ಪ್ರತಿ ಮಾತಿನಲ್ಲಿಯೂ ಆ ಕಾದಂಬರಿಕಾರ ಎಂದೋ ನಡೆದು ಹೋಗಿದ್ದಂತಹ ಆ ಘಟನೆಯನ್ನು ಗಂಡನಾಗಲೀ ಹೆಂಡತಿಯಾಗಲೀ ಮನಸ್ಸಿನಲ್ಲಿ ಹಚ್ಚಿಕೊಳ್ಳದೇ ಮೊದಲಿನಂತೆಯೇ ಹಾಯಾಗಿರಬೇಕಾಗಿತ್ತೆಂಬ ತನ್ನ ಅಭಿಪ್ರಾಯವನ್ನು ತುಂಬಿದ್ದ.

ಆ ಕಾದಂಬರಿಕಾರನು ನೀತಿಗೆಟ್ಟವನೆಂದು ಸಮಾಜವು ಭಾವಿಸುತಿತ್ತು. ಅವನ ಪುಸ್ತಕಗಳನ್ನು ಮನೆಗಳಲ್ಲಿ ಓದುವುದೂ ಸಹ ಸರಿಯಲ್ಲವೆಂದು ಮಾತನಾಡಿಕೊಳ್ಳಲಾಗುತಿತ್ತು. ಆ ವಿಷಯ ರಾಜಣ್ಣನಿಗೂ ಗೊತ್ತಿತ್ತು.

ಈ ಕಾದಂಬರಿಯ ಕೆಲ ಭಾಗಗಳನ್ನು ಓದಿದ ಮೇಲೆ ಜನ ಭಾವಿಸುವುದು ಸರಿಯೆಂದು ರಾಜಣ್ಣನಿಗೂ ತೋರಲಾರಂಭವಾಯಿತು. ಅಲ್ಲವೇ ಮತ್ತೆ ? ಹೆಂಗಸರು ವಿವಾಹಾತ್ ಪೂರ್ವ, ಪ್ರಣಯಸಂಬಂಧಗಳನ್ನು ಹೊಂದಿರಬಹುದೆಂಬ ಅಭಿಪ್ರಾಯವನ್ನು ಕಾದಂಬರಿಕಾರನು ಸೂಚಿಸಿದ್ದಾನೆಯಲ್ಲ. ಹಾಗೆ ಹೇಳಬಹುದೇ ? ಅಂತಹವನು ಬರೆದ ಪುಸ್ತಕಗಳನ್ನು ಜನರು ಓದಬಹುವೇ ?

ಅದನ್ನೇನು ಓದುವುದು ಎಂದು ಕೆಳಗೆ ತೆಗೆದುಹಾಕಿದ.

ಪತ್ರಸಂಬಂಧವಾದ ಕಾದಂಬರಿಯ ಸ್ವಲ್ಪ ಭಾಗವನ್ನು ಓದಿದ ರಾಜಣ್ಣನಿಗೆ ಈಗ ತಾನೇ ಸ್ವಲ್ಪ ಹೊತ್ತಿನ ಮೊದಲು ತನಗಾದ ಅನುಭವ ನೆನಪಾಯಿತು. ಭಾಗ್ಯಳಿಗೆ ಬಂದಿದ್ದ ಆ ಪತ್ರಗಳಲ್ಲಿ ಯಾವುದಾದರೂ ಪ್ರೇಮ ಪತ್ರವೋ ಎಂದು ತನ್ನ ಮನಸ್ಸೇಕೆ ಗಾಬರಿಗೊಂಡಿತು ?

ಆ ಕಾದಂಬರಿಯಲ್ಲಿ ಗಂಡನ ಮನಸ್ಸು ಪ್ರಕ್ಷುಬ್ಧವಾದುದು ನ್ಯಾಯ. ಯಾಕೆಂದರೆ ಅವನು ಅವಳ ಗಂಡ ! ಆದರೆ ತಾನು ? ಸ್ವಾಭಾವಿಕವಾಗಿ ಗೆಳತಿಯರಿಂದ ಅವಳಿಗೆ ಬಂದ ಪತ್ರಗಳನ್ನು ನೋಡಿ, ಅವುಗಳು ಪ್ರೇಮ ಪತ್ರಗಳೇನೋ ಎಂದು ಸಂದೇಹಿಸಬೇಕೇಕೆ ? ಏನೋ ಸಂದೇಹವು ಬಂದಿತು ಎಂದುಕೊಂಡರೂ ಅದಕ್ಕಾಗಿ ತನ್ನ ಎದೆಯು ಢವಕ್ಕೆನ್ನಬೇಕೇಕೆ ?

ತನಗೆ ಹಾಗಾಗಲು ಕಾರಣ !

ತನಗೇ ಗೋಚರವಾಗದೇ ತನ್ನ ಮನಸ್ಸು ಭಾಗ್ಯಳನ್ನು ಪ್ರೇಮಿಸಲು ಆರಂಭಿಸಿದೆಯೇನು ?

ಇರಬಹುದು. ಇಲ್ಲದಿದ್ದರೆ ತನ್ನ ಮನಸ್ಸೇಕೆ ಹಾಗೆ ಯೋಚಿಸುತಿತ್ತು?

ಇದುವರೆವಿಗೂ ಆಲೋಚನೆಮಾಡಿದ ಮನಸ್ಸು ಇನ್ನೂ ಸ್ವಲ್ಪ ಮುಂದೆ ಹೋಯಿತು. ಭಾಗ್ಯಳನ್ನು ನೋಡಿ ತನ್ನ ಮನಸ್ಸು ಆಕರ್ಷಿತವಾಗಿದೆ – ಎಂಬುದಂತೂ ನಿಸ್ಸಂದೇಹ. ಆ ಆಕರ್ಷಣೆಯಿಂದ ತಾನು ಅವಳನ್ನು ಪ್ರೀತಿಸಲಾರಂಭಿಸಿದರೆ–ಅವಳೂ ತನ್ನ ಪ್ರೇಮದ ಕರೆಗೆ ಕಿವಿಗೊಟ್ಟರೆ–ಅದು ಪ್ರಣಯದಲ್ಲಿ ಪರ್ಯವಸಾನವಾದರೆ ?

ಆ ಹಗಲು ಕನಸುಗಳೆಲ್ಲಾ ಮನಸ್ಸಿಗೆ ಪ್ರಿಯವಾಗಿ ತೋರಲಾರಂಭವಾದುವು. ಅದೇ ಸಮಯದಲ್ಲಿ ಒಂದು ಕಹಿ ನೆನಪೂ ಮನಸ್ಸಿಗೆ ಬಂದಿತು.

ಆ ಕಾದಂಬರಿಕಾರನ ಕತೆಯಲ್ಲಿ ಬರುವ ವಿವಾಹಾತ್ ಪೂರ್ವ ಪ್ರಣಯ ಪ್ರಸಂಗಕ್ಕೂ ಇದಕ್ಕೂ ಏನು ವ್ಯತ್ಯಾಸ ?

ಛೀ ! ತಾನು ಎಲ್ಲಿಯಾದರೂ ಹಾಗೆ ಮಾಡುವವನೇ ? ಒಂದು ವೇಳೆ ಅಂತಹ ಪ್ರಸಂಗವೇನಾದರೂ ಘಟಿಸಿದರೆ ಅವಳನ್ನು ಮದುವೆಯಾಗುತ್ತಾನೆ. ಕಾದಂಬರಿಯಲ್ಲಿ ಬರುವ ಆ ಭ್ರಷ್ಟನಂತೆ ಹೇಡಿಯಾಗಿ ಪ್ರೀತಿಸುವ ಹೆಣ್ಣನ್ನು ಕೈಬಿಡುವುದಿಲ್ಲ.

ಆ ಸಮಯದಲ್ಲಿ ಮತ್ತೊಂದು ಆಲೋಚನೆಯು ಬಂದಿತು. ಅಂತಹ ಸಂದರ್ಭವು ಬಂದಿದ್ದರೆ ತಾನು ಆ ಭ್ರಷ್ಟಪಾತ್ರದಂತೆ ಹಿಂದೆ ಹೋಗುತ್ತಿರಲಿಲ್ಲ. ಅದು ಖಂಡಿತ. ಆದರೆ ಪರಿಸ್ಥಿತಿಗಳು ಬೇರೆಯ ಅಡ್ಡಿ ಆತಂಕಗಳನ್ನು ತಂದೊಡ್ಡಿಟ್ಟಿದ್ದರೆ ? ತನ್ನ ತಾಯಿತಂದೆಗಳು ಅಂತಹ ವಿವಾಹಕ್ಕೆ ಒಪ್ಪದಿದ್ದರೆ ? ಹುಡುಗಿಯ ತಾಯಿ ತಂದೆಗಳು ಮಗಳನ್ನು ಕೊಡಲು ಸರ್ವಥಾ ಒಪ್ಪದೇ ಇದ್ದಿದ್ದರೆ ? ಆಗ ತಾನು ಏನು ಮಾಡುವುದಕ್ಕಾಗುತಿತ್ತು ?

ರಾಜಣ್ಣನಿಂದ ಆ ಸಮಸ್ಯೆಯನ್ನು ಬಿಡಿಸಲಾಗಲಿಲ್ಲ, ಆದರೂ ಆ ಭ್ರಷ್ಟನು ಮಾಡಿದಂತೆ ಮಾಡುವುದು ಸರ್ವಥಾ ಯೋಗ್ಯವಲ್ಲವೆಂದು ಮನಸ್ಸು ಪುನಃಪುನಃ ಹೇಳುತಿತ್ತು.

ಒಂದು ಕಡೆ ಯಾರೇ ಆಗಲೀ ಹಾಗೆ ಮಾಡಬಾರದೆಂಬ ಭಾವನೆ, ಮತ್ತೊಂದು ಕಡೆ ಅಂತಹ ಪರಿಸ್ಥಿತಿಗಳು ಒದಗಿ ಬಂದರೇನು ಮಾಡುವುದೆಂಬ ಸಂಧಿಗ್ಧತೆ.

ಇವುಗಳಲ್ಲಿ ಸಿಕ್ಕಿಕೊಂಡು ಅವನು ತೊಳಲುತ್ತಾ ಇದ್ದಾಗ ಹೊರಗಿನಿಂದ ಗುಂಡೂರಾಯರು ಕೂಗಿದರು.

"ರಾಜಣ್ಣನವರೇ ? ಎದ್ದಿದ್ದೀರೇನು ? ಕಾಫಿಯು ಸಿದ್ಧವಾಗಿದೆ"

೪

ವೆಂಕಟೇಶಯ್ಯನವರು ತಾವು ಹೇಳಿದಂತೆ ತುಮಕೂರಿನಿಂದ ಸಂಜೆಯ ರೈಲಿಗೇ ಬಂದರು.

ಬಂದವರು ಕೈ ಕಾಲು ತೊಳೆದುಕೊಂಡು ವಿಶಾಲಾಕ್ಷಮ್ಮನವರು ಕೊಟ್ಟ ಕಾಫಿಯನ್ನು ಕುಡಿಯುತ್ತಾ "ಏನಪ್ಪಾ. ನಮ್ಮ ರಾಜಣ್ಣನನ್ನು ಸರಿಯಾಗಿ ನೋಡಿಕೊಂಡೆಯಾ ?" ಎಂದು ವಿಚಾರಿಸಿದರು.

ಗುಂಡೂರಾಯರು ನಗುತ್ತಾ "ನಿನ್ನ ಅಳಿಯನ ಗಿಳಿಯನಾದ ಮೇಲೆ ಸರಿಯಾಗಿ ನೋಡಿಕೊಳ್ಳಬೇಡವೇ ? ಮನೆಯ ಅಳಿಯನಿಗೆ ಮಾಡಬೇಕಾದ ಉಪಚಾರವನ್ನು ಮಾಡಿದ್ದೇನಯ್ಯ. ಬೇಕಾದರೆ ಅವರನ್ನೇ ಕೇಳಿಕೋ" ಎಂದರು.

"ಹಾಗಾದರೆ ರಾಜಣ್ಣನವರ ಪುಟ್ಟು ಪೂರ್ವೋತ್ತರಗಳೆಲ್ಲವನ್ನೂ ವಿಚಾರಿಸಿಬಿಟ್ಟಿದ್ದೀಯೆ ?"

"ಇಲ್ಲಪ್ಪಾ. ಅವರೇನೂ ಹೇಳಲಿಲ್ಲ. ಮಾತಿಗೆ ಮಾತು ಬಂದು ಇಷ್ಟು ಸಣ್ಣ ವಯಸ್ಸಿನವರಾದ ನಿಮಗೆ ಅಷ್ಟು ವಯಸ್ಸಾದವರ ಸ್ನೇಹ ಹೇಗಾಯಿತೆಂದು ವಿಚಾರಿಸಿದೆ. ಅದಕ್ಕವರು ಸೂಕ್ಷ್ಮವಾಗಿ ನಿನ್ನ ಭಾವೀ ಅಳಿಯನ ಸ್ನೇಹಿತ ಎಂದು ಹೇಳಿದರು ಅಷ್ಟೇ''

ವೆಂಕಟೇಶಯ್ಯನವರು ಕಾಫೀ ಲೋಟವನ್ನು ಕೆಳಗಿಟ್ಟು ರಾಜಣ್ಣನನ್ನು ಉದ್ದೇಶಿಸಿ ''ಈ ದಿನ ಬೆಳಗಾಗ ನೀನು ಬಂದ ಕೂಡಲೇ ಊರಿಗೆ ಹೊರಟು ಹೋಗೋಣವೆಂದು ಹೇಳಿದೆನಷ್ಟೇ. ಅಷ್ಟರಲ್ಲಿ ಜರೂರು ಕೆಲಸ ಬಿದ್ದಿತು. ಅದಕ್ಕಾಗಿ ತುಮಕೂರಿಗೆ ಹೊರಟು ಹೋದೆ. ಈ ದಿನ ರಾತ್ರಿ ಇಲ್ಲಿದ್ದು ನಾಳೇ ಬೆಳಗಾಗ ಹೊರಟು ಹೋಗೋಣ. ಏನು ಹೇಳುತ್ತೀಯೆ ?''

"ಆಗಬಹುದು. ಹಾಗೇ ಮಾಡೋಣ. ನೀವು ಹೀಗೆ ತುಮಕೂರಿಗೆ ಹೋಗಬೇಕಾಗುತ್ತದೆ ಎಂದು ಹೇಳಿದ್ದರೆ ನಾಳೆಯ ದಿನ ಬೆಳಗಾಲೇ ಬರುತ್ತಿದ್ದೆ. ಅಥವಾ ನೇರವಾಗಿ ಮಾಗಡಿಗೇ ಬಂದುಬಿಡುತ್ತಿದ್ದೆ''

"ಈಗ ನಿನಗೇನಾದರೂ ತೊಂದರೆಯಾಯಿತೇನು ?''

"ತೊಂದರೆ ಏನಾದರೂ ಆಗಿದ್ದರೆ ನಿಮ್ಮ ಸ್ನೇಹಿತರಿಗೆ ಆಗಿರಬೇಕು. ನನಗೆಂತಹ ತೊಂದರೆ ?''

"ಅದೆಲ್ಲಾ ಏನೂ ಇಲ್ಲ. ತೊಂದರೆ ಎಂದರೇನು ? ಸ್ನೇಹಿತ ಎಂದ ಮೇಲೆ ಇಷ್ಟು ಮಾಡದಿದ್ದರೆ ಹೇಗೆ ?''

ಸುಮಾರು ಹತ್ತು ನಿಮಿಷಗಳ ಕಾಲ ಎಲ್ಲರೂ ಮಾತನಾಡುತ್ತಾ ಕುಳಿತುಕೊಂಡಿದ್ದರು.

ಅನಂತರ ರಾಜಣ್ಣ "ವೆಂಕಟೇಶಯ್ಯನವರೇ ! ನಾನು ಹಾಗೇ ಹೋಗಿ ಸುತ್ತಾಡಿಕೊಂಡು ಬರಲೇ ?" ಎಂದು ಕೇಳಿದ.

"ಧಾರಾಳವಾಗಿ ಹೋಗಿಬಾಪ್ಪ. ಬೇಗ ಬಂದುಬಿಡು. ಏಳೂವರೆಯಾಗುವುದಕ್ಕಿಲ್ಲ–ಗುಂಡಾ ಎಲೆ ಹಾಕಲು ಅವಸರಪಡಿಸುತ್ತಿರುತ್ತಾನೆ''

''ಏನಯ್ಯಾ, ನೀನು ಹೀಗೆ ಮಾನ ತೆಗೆಯುತ್ತೀ. ಬೇಗ ಊಟ ಮುಗಿಸಿಬಿಡೋಣ–ಎಂದು ಹೇಳುವುದುಂಟು. ನನಗೇನಂತೆ, ಹತ್ತುಗಂಟೆಯ ಮೇಲೆ ಬೇಕಾದರೂ ಊಟಮಾಡು''

ಮುದುಕರುಗಳು ಪರಸ್ಪರ ಮಾತನಾಡುತ್ತಿದ್ದ ಹಾಗೆಯೇ ರಾಜಣ್ಣ ಹೊರಗೆ ಹೋದ.

ವೆಂಕಟೇಶಯ್ಯನವರು "ಬೆಳಗಾಗ ಬಂದ ರಾಜಣ್ಣ ಎಲ್ಲಿಗಾದರೂ ಹೋಗಿದ್ದನೇನಯ್ಯಾ" ಎಂದರು.

''ಇಲ್ಲಪ್ಪ. ಎಲ್ಲಿಗೂ ಹೋದಹಾಗೆ ಕಂಡುಬರಲಿಲ್ಲ"

"ಅದಕ್ಕೇ ಮತ್ತೆ ಈಗ ಹೋದದ್ದು ?"

ಅರ್ಥವಾಗದೇ ಇರುವವರ ಹಾಗೆ ಗುಂಡೂರಾಯರು ನೋಡಿದರು.

"ಈ ಕಾಲದ ಹುಡುಗರು ನನ್ನ ಹಾಗೆ ನಿನ್ನ ಹಾಗೆ ಇರುತ್ತಾರೆಯೆ ? ಸಿಗರೇಟೋ ಪಗರೇಟೋ ಸೇದಿಕೊಳ್ಳಬೇಡವೇ ? ಅದಕ್ಕೇ ಸುತ್ತಾಡಿಕೊಂಡು ಬರುತ್ತೇನೆಂದು ಹೇಳಿ ಹೋದದ್ದು"

ಗುಂಡೂರಾಯರು ಏನೋ ತೋಚಿಕೊಂಡು "ಈ ಹುಡುಗ ಯಾರಯ್ಯಾ ?" ಎಂದರು.

''ಇಲ್ಲಿಯೇ ಚನ್ನಪಟ್ಟಣದಲ್ಲಿ ಪಟ್ಟಾಭಿರಾಮಯ್ಯ ಅಂತ ಒಬ್ಬರು ಲಾಯರಿದ್ದಾರೆ. ಇವನು ಅವರ ಮಗ"

"ಏನು ಓದುತ್ತಿದ್ದಾನೆ ?"

"ಬಿ. ಎ. ಆಗಿ ಎರಡು ವರ್ಷವಾಗುತ್ತಾ ಬಂದಿತು. ಅವರಪ್ಪನಂತೆಯೇ ಲಾಯರೀ ಪರೀಕ್ಷೆಗೆ ಓದುತ್ತಿದ್ದಾನೆ"

"ನಿನಗೆ ಹೇಗೆ ಪರಿಚಯ ?''

"ಇದೇನೋ, ಬೆಕ್ಕಿಗೆ ಜ್ವರ ಬಂದಹಾಗೆ ಮಾತನಾಡುತ್ತಿದ್ದೀ. ಅವನನ್ನೇ ಕೇಳಿ ಎಲ್ಲವನ್ನೂ ತೀದುಕೊಂಡಿದ್ದೀಯೆ. ಆದರೂ ನನ್ನನ್ನು ಬೇರೇ ಕೇಳುತ್ತಿದ್ದೀ"

"ಕೇಳಿದೆ ಎಂದರೆ ಏನೋ ಕೇಳಿದೆ. ನಿನ್ನನ್ನು ಕೇಳಿದ ಹಾಗೆ ಅವನನ್ನು ಕೇಳುವುದಕ್ಕೆ ಆಗುತ್ತದೆಯೆ ?"

"ಅವನನ್ನು ಕೇಳುವುದಕ್ಕೂ ನನ್ನನ್ನು ಕೇಳುವುದಕ್ಕೂ ವ್ಯತ್ಯಾಸವೇನು ಬಂದಿತಯ್ಯಾ. ಎಲ್ಲಾ ಒಂದೇ. ಅವನು ಬೇರೇ, ನಾನು ಬೇರೇ ಹೇಳುವುದಕ್ಕಾಗುತ್ತದೆಯೆ ?"

"ಹಾಗಲ್ಲ. ನಿಮಗೂ ವೆಂಕಟೇಶಯ್ಯನವರಿಗೂ ಹೇಗೆ ಪರಿಚಯ ಎಂದು ಕೇಳಿದೆ. ಆದೇ ನಿನ್ನ ಮಗಳನ್ನು ನೋಡುವುದಕ್ಕೆ ಬಂದ ವರನೊಂದಿಗೆ ಬಂದಿದ್ದುದಾಗಿಯೂ ಅದರಿಂದ ಪರಿಚಯವೆಂದೂ ಹೇಳಿದರು"

"ಅವನು ಹೇಳಿದಷ್ಟೇ. ಹಾಗೇ ನನಗೆ ರಾಜಣ್ಣನ ಪರಿಚಯವಾದದ್ದು"

ಗುಂಡೂರಾಯರು ನಗುತ್ತಾ "ಮಕ್ಕಳಿಗೆ ತಿಂಡೀ ಮರೆಸುವಾಗ ಮಾತನಾಡುವಂತೆ ಮಾಡುತ್ತೀಯಲ್ಲ. ಹುಡುಗಿಯನ್ನು ನೋಡಲು ಬಂದ ವರನೊಂದಿಗೆ ಬಂದರೆ ಇಷ್ಟೊಂದು ಸ್ನೇಹವಾಗುತ್ತದೆಯೇ ?" ಎಂದರು.

"ನಮ್ಮ ಜಯಾಗೆ ನೋಡಿರುವ ರಾಮಕೃಷ್ಣಯ್ಯನೂ ಇವನೂ ಬಹಳ ಸ್ನೇಹಿತರು. ಈ ರಾಜಣ್ಣ ಇದೇ ಊರಿನಲ್ಲಿ ರೂಂ ಮಾಡಿಕೊಂಡು ಹೋಟಲಿನಲ್ಲಿ ಊಟಮಾಡುತ್ತಾ ಓದುತ್ತಿದ್ದಾನೆ. ಈ ವರಗಳಿದ್ದಾರೆಯಲ್ಲಾ ಅವರು ವರಾಹಗಳಿದ್ದಂತೆಯೇ. ಇವರ ಸಹವಾಸ ಬಹಳ ಕಷ್ಟ. ಹುಡುಕಿಕೊಂಡು ಹೋದುದು ಎರಡು ಬಾರಿ ಕಡಿಮೆಯಾದರೆ ತಾತ್ಸಾರ ಮಾಡಿದರು ಎನ್ನುತ್ತಾರೆ. ಎರಡು ಬಾರಿ ಹೆಚ್ಚಾಗಿ ಹೋದರೆ ಬೇಜಾರು ಮಾಡಿಕೊಳ್ಳುತ್ತಾರೆ. ಅದರಿಂದ ಆ ರಾಮಕೃಷ್ಣಯ್ಯನನ್ನು ಗೊತ್ತುಮಾಡುವ ಸಂದರ್ಭದಲ್ಲಿಯೂ, ಆ ಮೇಲೆಯೂ ಈ ರಾಜಣ್ಣನನ್ನು ಹೋಗಿ ನೋಡುತ್ತಿದ್ದೆ. ಹುಡುಗ ಬಹಳ ಒಳ್ಳೆಯವನು. ಅದರಿಂದ ಹೆಚ್ಚು ಪರಿಚಯದಾಗಲು ಕಾರಣವಾಯಿತು"

"ಪಟ್ಟಾಭಿರಾಮಯ್ಯನವರು ಅನುಕೂಲಸ್ಥರೇನಯ್ಯಾ ?"

ಗುಂಡೂರಾಯರು ಪ್ರಶ್ನೆ ಹಾಕಿದ ತಕ್ಷಣವೇ ವೆಂಕಟೇಶಯ್ಯನವರು

ಅವರ ಕಡೆಗೆ ನೋಡಿದರು. ಅಷ್ಟೇ ಅಲ್ಲ. ಅವರ ಪ್ರಶ್ನೆಗೆ ಎಷ್ಟು ಅರ್ಥ ವನ್ನು ಮಾಡಲು ಸಾಧ್ಯವೋ ಅಷ್ಟನ್ನೂ ಮಾಡಿದರು. ಆದರೆ ತಮ್ಮ ಮನಸ್ಸಿಗೆ ಬಂದ ಯಾವ ಭಾವವನ್ನೂ ತೋರಿಸಿಕೊಳ್ಳಲಿಲ್ಲ. ಸಾಧಾರಣ ವಾದ ಪ್ರಶ್ನೆಗೆ ಕೊಡುವ ಸಾಮಾನ್ಯ ಉತ್ತರದಂತೆ ಹೇಳಿದರು.

"ತಕ್ಕಮಟ್ಟಿಗೆ ಅನುಕೂಲ ಸ್ಥಿತೀ ಎಂದು ಹೇಳಬಹುದು. ಅವರಿಗೆ ಇಬ್ಬರೇ ಮಕ್ಕಳು. ಒಬ್ಬ ಗಂಡು ಮಗ, ಒಬ್ಬ ಹೆಣ್ಣು ಮಗಳು. ಹೆಣ್ಣು ಮಗಳಿಗೆ ಮದುವೆ ಮಾಡಿಬಿಟ್ಟಿದ್ದಾರೆ. ಚನ್ನಪಟ್ಟಣದಲ್ಲಿ ಒಳ್ಳೆಯ ಮನೆ ಯಿದೆ. ನಾಲ್ಕಾರು ಎಕರೆ ಗದ್ದೆಯಿರಬಹುದು. ಕಣ್ವಾನದಿಯ ಪಕ್ಕದಲ್ಲಿ ಸೊಗಸಾದ ತೋಟವಿದೆ. ಲಾಯರೀ ಕೆಲಸವೂ ಚೆನ್ನಾಗಿ ನಡೆಯುತ್ತಿರುವು ದರಿಂದ ಕೈಯ್ಯಲ್ಲಿ ಸ್ವಲ್ಪ ಕಾಸಿದ್ದರೂ ಇರಬಹುದು"

ಉತ್ತರಪಡೆದ ಗುಂಡೂರಾಯರು ಮುಂದಿನ ಮಾತು ಆಡಬಹುದೆಂದು ವೆಂಕಟೇಶಯ್ಯ ನಿರೀಕ್ಷಿಸಿದರು. ನಿಮಿಷವಾದರೂ ಆತ ಏನೂ ಮಾತನಾ ಡದೇ ಇರುವುದನ್ನು ನೋಡಿ ನಗುತ್ತಾ ಕೇಳಿದರು.

"ಅದೇನಯ್ಯಾ ಹಾಗೆ ಕೇಳುತ್ತೀಯೆ ?"

"ಏನೂ ಇಲ್ಲ. ಸುಮ್ಮನೆ ವಿಚಾರಿಸಿದೆ''

ಗುಂಡೂರಾಯರು ಬಹಳ ಆಸಕ್ತಿಯಿಂದ ರಾಜಣ್ಣನ ವಿಷಯ ವಿಚಾರಿ ಸುತಿದ್ದುದು ಕಿವಿಗೆ ಬಿದ್ದು ಏನು ಮಾತನಾಡುತ್ತಿದ್ದಾರೆಯೋ ಎಂದು ವಿಶಾಲಾಕ್ಷಮ್ಮನವರು ಹೊಸಲಿನಲ್ಲಿ ಬಂದು ನಿಂತುಕೊಂಡಿದ್ದರು.

ಆಕೆ "ನಮ್ಮ ಭಾಗ್ಯಳಿಗಾಗಿ ವಿಚಾರಿಸಬಹುದೇನೋ ಅಂತ——" ಎಂದು ತಮ್ಮ ಯಜಮಾನರು ತುಂಡುಮಾಡಿದ ಮಾತನ್ನು ಬೆಳೆಸಿದರು.

"ಅದೇನೂ ಆಗುವಂತಿಲ್ಲವಮ್ಮಾ"

"ಯಾಕೆ, ಅವರ ಸಮೀಪ ಬಂಧುಗಳಲ್ಲಿಯೇ ಯಾರನ್ನಾದರೂ ಮಾ ಡಿಕೊಳ್ಳಬೇಕೆಂದಿದ್ದಾರೆಯೇನೋ ?''

''ಉಹುಂ, ಅದು ಹಾಗಲ್ಲ. ಮೊದಲು ನಾನು ಜಯಳನ್ನು ರಾಜಣ್ಣನಿಗೇ ಕೊಟ್ಟು ಮದುವೆ ಮಾಡಬೇಕೆಂದುಕೊಂಡಿದ್ದೆ. ಅವನು ಲಾಯರೀ ಪರೀಕ್ಷೆ ಪ್ಯಾಸುಮಾಡಿ ಆಫೀಸು ಆರಂಭಿಸುವವರೆಗೆ ಮದುವೆ ಮಾಡಿಕೊಳ್ಳುವುದಿಲ್ಲವೆಂದ. ನಾನೂ ಎಷ್ಟೋ ಹೇಳಿದೆ, ಅವರಿಂದ

ಹೇಳಿಸಿ ನೋಡಿದೆ. ಏನು ಮಾಡಿದರೂ ಒಪ್ಪಲಿಲ್ಲ. ಇನ್ನೆರಡು ವರ್ಷ ಮದುವೆ ಎಂಬ ಮಾತೂ ಸಹ ಎತ್ತಕೂಡದೆಂದು ಖಡಾಖಡಿಯಾಗಿ ಹೇಳಿಬಿಟ್ಟ. ಅದಾದ ಮೇಲೆಯೇ ನಾನು ರಾಮಕೃಷ್ಣಯ್ಯನನ್ನು ನೋಡಿದ್ದು. ಒಂದು ವಿಧವಾಗಿ ನೋಡಿದರೆ ಜಯಳಿಗೆ ವರನನ್ನು ಗೊತ್ತು ಮಾಡಿ ಕೊಟ್ಟದ್ದು ರಾಜಣ್ಣನೇ ಎಂದು ಹೇಳಬಹುದು"

ಯಾವ ವಿಷಯದಿಂದ ಆಕರ್ಷಿಸಲ್ಪಟ್ಟು, ವಿಶಾಲಾಕ್ಷಮ್ಮ ಹೊರಗೆ ಬಂದರೋ ಅದಾಗುವುದಿಲ್ಲವೆಂದು ತಿಳಿದೊಡನೆಯೇ ಅವರು ಹಿಂದಕ್ಕೆ ಹೊರಟುಹೋದರು.

ಗುಂಡೂರಾಯರು"ರಾಜಣ್ಣ ಮದುವೆಯಾಗುವುದಿಲ್ಲವೆಂದು ಹೇಳಿದ್ದು ನಿನಗೆ ಒಳ್ಳೆಯದೇ ಆಯಿತೆನ್ನು" ಎಂದರು.

"ಅದು ಹೇಗಯ್ಯ ?"

"ರಾಜಣ್ಣ ಬೇಡವೆಂದಿದ್ದರೆ ನಿನಗೆ ರಾಮಕೃಷ್ಣಯ್ಯ ಸಿಕ್ಕುತ್ತಿದ್ದನೇ? ಎಷ್ಟಾದರೂ ಈ ಕಾಲದಲ್ಲಿ ಲಾಯರು ಅಳಿಯನಿಗಿಂತಲೂ ಇಂಜನಿಯರು ಅಳಿಯ ಉತ್ತಮವಲ್ಲವೇ ?"

"ಅಯ್ಯೋ ಬಿಡಪ್ಪ. ಸ್ವಲ್ಪ ಹಸುರಾಗಿ ಕಾಣುವ ಕಡೆ ಹಸುವನ್ನು ಕಟ್ಟಿಹಾಕಬೇಕು ಎನ್ನುವಂತೆ ನಾವು ಮಾಡುವುದು. ಆದರೆ ಎಲ್ಲಾ ಅವರವರ ಅದೃಷ್ಟ. ಒಂದು ಒಂದೂವರೆ ವರ್ಷಗಳಿಂದಲೂ ಈ ಪರಾಹಗಳನ್ನು ಹುಡುಕುವ ಕೆಲಸ ಮಾಡುತ್ತಿದ್ದೇನೆಯಲ್ಲ. ಇಂಜಿನಿಯರಿಂಗ್ ಪಾಸು ಮಾಡಿದ್ದರೂ ಕೆಲಸವಿಲ್ಲದೇ ಒದ್ದಾಡುತ್ತಿರುವವರನ್ನು ಎಷ್ಟೋ ಜನರನ್ನು ನೋಡಿದ್ದೇನೆ"

ಮತ್ತಷ್ಟು ಹೊತ್ತು ಇಬ್ಬರೂ ಸುಮ್ಮನೆ ಕುಳಿತುಕೊಂಡಿದ್ದರು.

ವೆಂಕಟೇಶಯ್ಯ "ನೀನು ಎಲ್ಲಿಯಾದರೂ ತಿರಾಡಿಕೊಂಡು ಬರುವುದಾದರೆ ಬಾಪ್ಪ. ನನ್ನಿಂದ ನಿನ್ನ 'ವಾಕಿಂಗ್‌ಗೆ ಯಾಕೆ ತೊಂದರೆಯಾಗಬೇಕು ?" ಎಂದರು.

ಗುಂಡೂರಾಯರಿಗೆ ಸಹ ಆ ದಿನ ಹೊರಗೆ ಹೋಗುವುದು ಇಷ್ಟವಿರಲಿಲ್ಲ. ಆದರೂ ಸುಮ್ಮನೆ ಕೇಳಿದರು.

"ನಾನು ಹೋದರೆ ನೀನು ಏನು ಮಾಡುತ್ತೀಯೆ ?"

"ರೈಲ್ವೇ ಸ್ಟೇಷನ್ನಿನಿಂದ ನೇರವಾಗಿ ಇಲ್ಲಿಗೆ ಬಸ್ ಸಿಕ್ಕಲಿಲ್ಲ. ಆದ ರಿಂದ ಮಾರ್ಕೆಟ್ಟಿನಲ್ಲಿಳಿದು ಅಲ್ಲಿಂದ ಬೇರೇ ಬಸ್ ಹತ್ತಿಕೊಂಡು ಬಂದೆ. ಆಗ ಮಾರ್ಕೆಟ್ಟಿನ ಬಳಿ ಕಿಡಿ ಪೇಪರ್ ಮಾರುತಿತ್ತು. ಈಗ ಜತ್ತಿಯವರ ಮಂತ್ರಿ ಮಂಡಲವು ಉರುಳಿಹೋಗುತ್ತದೆಂದು ಬರೆದಿದ್ದಾನೆ ಶೇಷಪ್ಪ. ಅದೇನು ವಿಚಯವೋ ನೋಡುತ್ತೇನೆ" ಎಂದು ಜೇಬಿನಲ್ಲಿ ಮಡಚಿಟ್ಟುಕೊಂಡಿದ್ದ ಪೇಪರ್ ತೆಗೆದರು ವೆಂಕಟೇಶಯ್ಯನವರು.

ಇಬ್ಬರು ವೃದ್ಧರೂ ಕುಳಿತು ಕಿಡಿ ಪತ್ರಿಕೆಯನ್ನು ಓದಿದರು. ಸ್ವಲ್ಪ ಹೊತ್ತು ಮೈಸೂರು ರಾಜಕೀಯದ ವಿಷಯವಾಗಿ ಮಾತನಾಡುತ್ತಿದ್ದರು.

ಆದರೆ ಗುಂಡೂರಾಯರ ಮನಸ್ಸೆಲ್ಲವೂ ಮದುವೆಯ ವಿಷಯದಲ್ಲಿಯೇ ಆಸಕ್ತವಾಗಿತ್ತು.

ಕತ್ತಲಾಗುತ್ತ ಬಂದಿತ್ತು. ಎದ್ದು ಸ್ವಿಚ್ ಹಾಕಿ ಕುಳಿತುಕೊಳ್ಳುತ್ತಾ "ನಿನ್ನ ಮಗಳ ಮದುವೆ ಇನ್ನೂ ಹದಿನೈದು ದಿನಗಳಿವೆ ಅಲ್ಲವೇನಯ್ಯಾ" ಎಂದರು.

"ಹುಂ. ಕರಾರುವಾಕ ಹೇಳಬೇಕೆಂದರೆ ಹದಿನಾಲ್ಕು ದಿನಗಳು ಮಾತ್ರ ಇವೆ"

"ಅದು ಸರಿ. ಹಾಗಿರುವಾಗ ಈ ರಾಜಣ್ಣ ಈಗಲೇ ನಿಮ್ಮೂರಿಗೆ ಬರುವ ವಿಶೇಷವೇನು? ಅವನೂ ನಿನ್ನ ಮಗಳ ಮದುವೆ ಏರ್ಪಾಟುಗಳಿಗೆ ಓಡಿ ಯಾಡಬೇಕೇನಯ್ಯ?"

"ಇಲ್ಲಪ್ಪ. ನನ್ನ ಮಗಳ ಮದುವೆಗೆ ಅವನು ಓಡಿಯಾಡುವುದೆಂದ ರೇನು? ಅವನು ನಮ್ಮೂರನ್ನು ನಿದಾನವಾಗಿ ನೋಡಬೇಕಾಗಿದೆಯಂತೆ"

"ನಿಮ್ಮೂರೇನು ಬೊಂಬಾಯೇ, ಕಲ್ಕತ್ತಾನೇ? ಅಲ್ಲಿ ನೋಡುವು ದಕ್ಕೆ ಏನಿದೆ?"

"ಚರಿತ್ರ ಪ್ರಸಿದ್ಧವಾದ ಸಾವನ ದುರ್ಗವಿಲ್ಲವೇ?"

"ಇದೆ. ಯಾರಿಲ್ಲವೆಂದರು? ಆ ಮಣ್ಣಿನ ಕೋಟೆಯೇನು ದೊಡ್ಡದು ಹೇಳು. ಅಷ್ಟಕ್ಕೂ ಅಲ್ಲಿ ನೋಡಬೇಕಾದುದು ಏನಿದೆ? ಮಧ್ಯಾಹ್ನ ಹೊರಟರೆ ಸಾಯಂಕಾಲದೊಳಗಾಗಿ ಎಲ್ಲವನ್ನೂ ನೋಡಿಕೊಂಡು ಬಂದುಬಿಡಬಹುದು"

"ನಿನಗೆ ನನಗೇ ಕಾಣುವುದು ಅಷ್ಟೇ. ಮಾಗಡಿಯಲ್ಲಿ ಶಿವಶಂಕರ

ಶಾಸ್ತ್ರಿಗಳನ್ನು ಬಲ್ಲೆಯಷ್ಟೆ. ಅವರ ಮಗ ಸೋಮಶೇಖರ ಸಾವನದುರ್ಗದ ವಿಷಯವನ್ನು ಬಹಳವಾಗಿ ಹೇಳುತ್ತಾನೆ. ಅಲ್ಲಿ ನೋಡಬೇಕಾದ್ದಿರುವುದು ಒಂದು ಗಂಟೆಯಲ್ಲಿ ಆಗುವುದಲ್ಲ. ಒಂದು ವರ್ಷವಾದರೂ ಮುಗಿಯುವುದಿಲ್ಲವೆನ್ನುತ್ತಾನೆ. ಆ ಸಂಬಂಧವಾಗಿ ಆಲೋಚನೆ ಮಾಡಬೇಕಾಗಿರುವ ವಿಷಯ ವರ್ಷಾಂತರಗಳಾದರೂ ಮುಗಿಯುವುದಿಲ್ಲ ಎನ್ನುತ್ತಾನೆ.''

ಗುಂಡೂರಾಯರು ಬಹಳ ಆಸಕ್ತಿಯಿಂದ ತಮ್ಮ ಸ್ನೇಹಿತರ ಕಡೆ ನೋಡಿದರು.

"ಸಾವನದುರ್ಗ ಮತ್ತು ಮಾಗಡಿಗಳ ವಿಷಯ ನಿನಗೆ ನನಗೆ ಏನು ಗೊತ್ತು ಹೇಳು. ಸಾವನದುರ್ಗ-ಮಾಗಡಿ ಎಂದೊಡನೆಯೇ ಮೊನ್ನೆ ಮೊನ್ನೆ ಇದ್ದ ಕೆಂಪೇಗೌಡನ ವಿಷಯ ನಮಗೆ ಜ್ಞಾಪಕ ಬರುತ್ತದೆ— —"

ಅವರು ಮಾತು ಮುಂದುವರಿಸುವಷ್ಟರಲ್ಲಿಯೇ ಗುಂಡೂರಾಯರು "ಹಾಗಾದರೆ ಕೆಂಪೇಗೌಡ ಸಾಮಾನ್ಯ ವ್ಯಕ್ತಿಯೆಂದು ಹೇಳುತ್ತೀಯಾ?" ಎಂದರು.

"ನಾನು ಯಾರನ್ನೂ ಸಾಮಾನ್ಯ ವ್ಯಕ್ತಿಯೆಂದು ಹೇಳಲಿಲ್ಲವಯ್ಯಾ. ನನಗೆ ಈ ದೊಡ್ಡ ವಿಷಯಗಳು ಗೊತ್ತಾಗುವುದಿಲ್ಲ ಎನ್ನುತ್ತೇನೆ. ನಮ್ಮೂರಿನ ಇತಿಹಾಸ ಕೇವಲ ಕೆಂಪೇಗೌಡನ ಕಾಲದಷ್ಟೇ ಹಳೆಯದಲ್ಲ. ಮೂರು ನಾಲ್ಕು ಸಹಸ್ರ ವರ್ಷಗಳಷ್ಟಾದರೂ ಪುರಾತನವಾದುದು ಎಂದು ಸೋಮಶೇಖರ ಹೇಳುತ್ತಾನೆ. ಅಲ್ಲಿ ಕೆಲವು ಗೋರಿಗಳಿವೆಯಂತೆ. ಅವು ಪುರಾತನ ದ್ರಾವಿಡರವೆಂದೂ, ಪುರಾತನ ದ್ರಾವಿಡರ ನಾಗರೀಕತೆಗಳು ಅಲ್ಲಿ ಕಂಡುಬರುತ್ತವೆ ಎಂದೂ ಅವನು ಹೇಳುತ್ತಾನೆ''

''ಸರಿ, ನಿಮ್ಮೂರಿನ ಕತೆ ದೊಡ್ಡದಾಗಿರುವಂತಿದೆಯಲ್ಲಪ್ಪ''

''ಏನೋ ಯಾರು ಬಲ್ಲರು? ರಾಜಣ್ಣ ನಮ್ಮೂರಿಗೆ ಬಂದಾಗ ಅವನಿಗೆ ಸೋಮಶೇಖರನ ಭೇಟಿಯಾಯಿತು. ಅವರಿಬ್ಬರೂ ಮಾತನಾಡಿದರು. ಸೋಮಶೇಖರ ಇವನಿಗೆ ಎಷ್ಟೋ ವಿಷಯಗಳನ್ನು ಹೇಳಿದ ಅದರಿಂದ ರಾಜಣ್ಣನಿಗೆ ವಿಪರೀತ ಆಸಕ್ತಿಯುಂಟಾಯಿತು. ತಾನು ಎಂಟು ಹತ್ತು ದಿನಗಳು ಅಲ್ಲಿದ್ದುಕೊಂಡು ಎಲ್ಲವನ್ನೂ ನೋಡಬೇಕೆಂದು ಅಪೇಕ್ಷೆಪಟ್ಟ. ''ಆಗಲೀ ಬಾಪ್ಪ'' ಎಂದು ಕರೆದೆ. ಬರುತ್ತಾನೆ''

"ಈ ಹುಡುಗನಿಗೆ ಇದರಲ್ಲೆಲ್ಲಾ ಆಸಕ್ತಿಯಿದೆಯೇ ?"

"ಅಷ್ಟೇ ಅಲ್ಲ. ಅವನಿಗೆ ಇನ್ನೂ ಎಷ್ಟೋ ವಿಷಯಗಳಲ್ಲಿ ಆಸಕ್ತಿಯಿದೆ. ಅವನು ಸಂಗೀತವನ್ನೂ ಬಲ್ಲ"

"ಸಂಗೀತ ಬರುತ್ತದೆಯೇ ?"

ಗುಂಡೂರಾಯರಿಗೆ ಸಂಗೀತ ಎಂದರೆ ಬಹಳ ಆಸಕ್ತಿ. ಎರಡು ಮೈಲಿ ದೂರದಲ್ಲಿ ಕಚೇರಿಯಿದೆ ಎಂದರೂ ಬೇಜಾರಿಲ್ಲದೇ ಹೋಗಿ ಬರುತ್ತಿದ್ದರು. ರಾಮ ನವಮಿ ಕಾಲದಲ್ಲಿ ಸಣ್ಣಪುಟ್ಟ ಕಚೇರಿಗಳಿಂದ ಹಿಡಿದು ದೊಡ್ಡದೊಡ್ಡ ಕಚೇರಿಗಳವರೆವಿಗೆ ಎಲ್ಲಕ್ಕೂ ಹೋಗಿಬರುತ್ತಿದ್ದರು. ಒಂದೇ ದಿನ ಎರಡು ಕಡೆ ಒಳ್ಳೇ ಕಚೇರಿಗಳಿದ್ದರೆ ಅವರು ಪತರಗುಟ್ಟುತ್ತಿದ್ದುದು ಆಶ್ಚರ್ಯವಲ್ಲ.

"ಕಚೇರಿ ಮಾಡುವಷ್ಟು ಸಂಗೀತವು ಬರುತ್ತದಯೋ ಇಲ್ಲವೋ ಹೇಳಲಾರೆ. ಸಂಗೀತ ನಿನಗೆ ಗೊತ್ತಾಗುವಷ್ಟು ನನಗೆ ಗೊತ್ತಾಗುವುದಿಲ್ಲ. ಆದರೆ ರಾಜಣ್ಣ ದೇವರನಾಮಗಳನ್ನು ಹಾಡುತ್ತಾನೆ. ಕನ್ನಡ ಪದ್ಯಗಳನ್ನು ಓದುತ್ತಾನೆ. ಕೆಲವು ಪದಗಳನ್ನು ಹೇಳುತ್ತಾನೆ. ಅವುಗಳನ್ನೆಲ್ಲಾ ಕೇಳಲು ಬಹಳ ಚೆನ್ನಾಗಿರುತ್ತದೆ"

"ನನಗೆ ಗೊತ್ತಾಗಲಿಲ್ಲವಲ್ಲಯ್ಯ ! ಗೊತ್ತಿದ್ದಿದ್ದರೆ ಮಧ್ಯಾಹ್ನ ಅವರಿಂದ ಕೆಲವು ದೇವರ ನಾಮಗಳನ್ನಾದರೂ ಹಾಡಿಸುತ್ತಿದ್ದೆ"

"ಅದಕ್ಕೇನು ಬಿಡಯ್ಯ. ಯಾವಾಗಬೇಕಾದರೂ ಹೇಳಿಸೋಣ. ಒಳ್ಳೇ ಹುಡುಗ. ಜಂಭವಿಲ್ಲ. ಹೇಳು ಎಂದರೆ ಹೇಳುತ್ತಾನೆ"

"ಅವನು ಹೇಳುವುದಿಲ್ಲ. ಎಂದರೆ ನೀನು ಬಿಡಬೇಕಲ್ಲ" ಎಂದು ಹೇಳುತ್ತಾ ಗುಂಡೂರಾಯರು ನಕ್ಕರು.

ಇಬ್ಬರು ವೃದ್ಧರೂ ಹೊರಗಡೆ ಕುಳಿತು ಮಾತನಾಡುತ್ತಿದ್ದ ಹಾಗೆ ಒಳಗಿನಿಂದ ವೀಣಾನಾದನವು ಕೇಳಿ ಬಂದಿತು. ಗುಂಡೂರಾಯರು ಆಡಿದ ಮಾತಿಗೆ ಏನೋ ಹೇಳಬೇಕೆಂದುಕೊಂಡಿದ್ದ ವೆಂಕಟೇಶಯ್ಯನವರನ್ನು ಮಾತನಾಡದಂತೆ ಅದು ಗಳಿಗೆಯ ಕಾಲ ತಡೆಯಿತು.

"ಏನಯ್ಯಾ ! ಸುಮ್ಮನಾಗಿಬಿಟ್ಟೆ ?"

"ಒಳಗಿನಿಂದ ವೀಣೆಯ ದನಿಯಾಗುತ್ತಿವೆಯಲ್ಲಾ. ಅದನ್ನು ಕೇಳುತ್ತಿದ್ದೇನೆ"

"ನಿನಗೆ ಸಂಗೀತದಲ್ಲಿ ಆಸಕ್ತಿಯೇ ಇಲ್ಲ-

"ಇಲ್ಲ, ನಿಜ. ಆದರೆ ಲಕ್ಷಣವಾಗಿ ವೀಣೆ ಬಾರಿಸುತ್ತಿದ್ದರೆ ಯಾರಿಗೆ ತಾನೇ ಸುಖವಾಗುವುದಿಲ್ಲ. ಕೇಳಿಲ್ಲವೇ, ಶಿಶುರ್ವೇತ್ತಿ ಪಶುರ್ವೇತ್ತಿ ಅಂತ. ಭಾಗ್ಯ ಸಂಗೀತ ಕಲಿಯುತ್ತಿದ್ದಾಳೆಂದು ಗೊತ್ತಿತ್ತು. ಆದರೆ ಇದುವರೆವಿಗೆ ಅವಳು ಹಾಡುವುದನ್ನಾಗಲೀ, ಬಾರಿಸುವುದನ್ನಾಗಲೀ ಕೇಳಿಯೇ ಇರಲಿಲ್ಲ"

"ಸಾಯಂಕಾಲದ ಹೊತ್ತು ನಾವಿಬ್ಬರೂ ವಾಕಿಂಗ್ ಹೊರಟುಹೋಗುತ್ತಿದ್ದೆವು. ಅದರಿಂದ ಕಿವಿಯಲ್ಲಿ ಬೀಳಲಿಲ್ಲವೆಂದು ಕಾಣುತ್ತದೆ. ಈ ವರ್ಷ ಸೀನಿಯರ್‌ಗೆ ಕಟ್ಟಿದ್ದಾಳೆ. ನೋಡಬೇಕು, ಏನಾಗುತ್ತದೆಯೋ ?"

"ಆಗುವುದೇನು ಖಂಡಿತ ಪಾಸು ಮಾಡುತ್ತಾಳೆ. ಎಷ್ಟು ಚೆನ್ನಾಗಿ ಬಾರಿಸುತ್ತಾಳೆ. ಇವಳಿಗೇ ಪಾಸಾಗದಿದ್ದರೆ ಇನ್ನಾರಿಗೆ ತಾನೇ ಪಾಸಾಗುತ್ತದೆ"

ಏಳೂ ಏಳೂವರೆಯುವರೆವಿಗೆ ಹಾಗೆಯೇ ಮಾತನಾಡುತ್ತಾ ಕುಳಿತುಕೊಂಡಿದ್ದರು. ಅನಂತರ ವೆಂಕಟೇಶಯ್ಯನವರು ಎದ್ದು ಒಳಗೆ ಹೊರಟುಹೋದರು.

ಪುನಃ ಅವರು ಹೊರಗೆ ಬರುವುದು ಅರ್ಧ ಗಂಟೆಯಾಯಿತು. ಅಷ್ಟು ಹೊತ್ತಿಗೆ ಅವರ ಸಂಧ್ಯಾವಂದನೆಯೂ ಮುಗಿದಿತ್ತು. ಹಣೆಯಲ್ಲಿ ತ್ರಿಪುಂಡ್ರಗಳು ಕಂಗೊಳಿಸುತ್ತಿದ್ದುವು. ಕೆಂಪು ಶಾಲುವನ್ನು ಮೈ ತುಂಬಾ ಹೊದ್ದುಕೊಂಡಿದ್ದರು.

ಅದಾದ ಸ್ವಲ್ಪ ಹೊತ್ತಿಗೆ ರಾಜಣ್ಣ ಬಂದ.

"ಬಾಪ್ಪ. ಇಷ್ಟು ಹೊತ್ತಾಯಿತಲ್ಲ, ಯಾಕೆ ಬರಲಿಲ್ಲವೋ ಎಂದು ಯೋಚನೆ ಮಾಡುತ್ತಾ ಇದ್ದೆ"

ರಾಜಣ್ಣ ನಗುತ್ತಾ ಬಂದು ಅವರ ಸಮೀಪದಲ್ಲಿ ಕುಳಿತುಕೊಂಡ.

"ಏನು. ಬಹಳ ದೂರ ಹೋಗಿದ್ದೆಯೋ ?"

"ಇಲ್ಲ. ವಿಶ್ವೇಶ್ವರಪುರದ ಸರ್ಕಲ್‌ವರೆವಿಗೆ ಹೋಗಿ ತಿರುಗಾಡಿಕೊಂಡು ಬಂದೆ"

"ಬೆಳಗಾಗಿನಿಂದ ಇಲ್ಲಿ ಕುಳಿತು ಬೇಜಾರು ಬಂದುಬಿಟ್ಟಿರಬೇಕು"

"ಏನಿಲ್ಲ, ನಿಮ್ಮ ಸ್ನೇಹಿತರು ಅದೂ ಇದೂ ಮಾತನಾಡಿಸುತ್ತಾ ಇದ್ದರು"

"ಅದೇ ನಾನು ಹೇಳಿದ್ದು. ಮಾತನಾಡಿ ಮಾತನಾಡಿ ಬೇಜಾರು ಮಾಡಿ ಬಿಟ್ಟನೋ ಅಂತ. ನಮ್ಮ ಗುಂಡಣ್ಣನ ಮಾತು ಸ್ವಲ್ಪ ಹೆಚ್ಚು"

ರಾಜಣ್ಣ ಮುಖದಲ್ಲಿ ನಗುವನ್ನು ತಂದುಕೊಂಡು "ಅಂತಹದೇನೂ ಇಲ್ಲ. ಅವರು ಮಾತನಾಡದೇ ಇದ್ದಿದ್ದರೆ ಬೇಜಾರಾಗುತ್ತಿದ್ದಿತೇನೋ? ಎಂದ.

"ಪರವಾಯಿಲ್ಲ, ಬಿಡು. ಇವನ ಮಾತು ಕೇಳಿ ಹೆದರಿಕೊಂಡು ಓಡಿ ಹೋದೆಯೇನೋ, ನನಗೆ ಸಿಕ್ಕುವುದೇ ಇಲ್ಲವೇನೋ ಎಂದುಕೊಂಡಿದ್ದೆ"

ಗುಂಡೂರಾಯರು ಮಾತು ಮುಗಿಸುತ್ತಾ "ವೆಂಕಟೇಶಯ್ಯನ ಮಾತನ್ನೆಲ್ಲಾ ಕಟ್ಟಿಕೊಳ್ಳಬೇಡಿ, ಸ್ವಾಮಿ. ಒಂದು ಕಿವಿಯಲ್ಲಿ ಕೇಳಿ ಮತ್ತೊಂದು ಕಿವಿಯಲ್ಲಿ ಬಿಟ್ಟುಬಿಡಿ" ಎಂದರು.

ರಾತ್ರಿ ಊಟವಾದನಂತರ ಗಂಡಸರೆಲ್ಲರೂ ಹಜಾರದಲ್ಲಿ ಕುಳಿತು ತಾಂಬೂಲ ಚರ್ವಣ ಮಾಡುತ್ತಿದ್ದಾಗ ಗುಂಡೂರಾಯರು ಅಂದರು.

"ರಾಜಣ್ಣನವರೇ, ಎರಡು ದೇವರ ನಾಮಗಳನ್ನು ಹೇಳಿ ಕೇಳೋಣ."

ಆ ಮಾತು ಕೇಳಿದ ರಾಜಣ್ಣ ಕಕ್ಕಾಬಿಕ್ಕಿಯಾಗಿ ನೋಡಿದ. ವೆಂಕಟೇಶಯ್ಯನವರು ಹೇಳಿರಬಹುದೆಂದು ಅವರ ಕಡೆ ದೃಷ್ಟಿ ಬಿತ್ತು.

ಗುಂಡೂರಾಯರು "ಅವನ ಕಡೆಗೇನು ನೋಡುತ್ತೀರಿ, ಎರಡು ದೇವರ ನಾಮ ಹೇಳಿ. ಲಕ್ಷಣವಾಗಿ ಕೇಳೋಣ" ಎಂದರು.

"ಹೇಳು, ರಾಜಣ್ಣ. ಆತ ಅಷ್ಟು ಕೇಳುವಾಗ ಇಲ್ಲವೆನ್ನಬಾರದು" ಎಂದು ವೆಂಕಟೇಶಯ್ಯನವರೂ ಸಹ ಒತ್ತಾಯ ಮಾಡಿದರು.

ರಾಜಣ್ಣನಿಗೆ ಸಂಕೋಚವಾದರೂ ಅವರುಗಳು ಒತ್ತಾಯ ಮಾಡಿದ್ದರಿಂದ ಆರಂಭ ಮಾಡಿದ.

ಅವನು ಹೇಳಿದ್ದೆರಡೂ ಪುರಂಧರ ದಾಸರ ಕೀರ್ತನೆಗಳು. ಬಹಳ ಚೆನ್ನಾಗಿಯೇ ಹೇಳಿದ. ವಿಶಾಲಾಕ್ಷಮ್ಮನವರೂ ಸಹ ಹೊರಗೆ ಬಂದು ಕೇಳುತ್ತಾ ಕುಳಿತುಕೊಂಡರು.

ಅದು ಮುಗಿದ ಮೇಲೆ ಎಲ್ಲರೂ ಪ್ರಶಂಸಿಸಿದರು.

ರಾಜಣ್ಣನು ಸೌಜನ್ಯದಿಂದ "ನನಗೆ ಸಂಗೀತ ಬರುವುದಿಲ್ಲ. ಅಭ್ಯಾಸ ಮಾಡಿ ಬಂದುದಲ್ಲ. ಅವರಿವರು ಹೇಳುವುದನ್ನು ಕೇಳಿ ಏನೋ ಹಾಗೆನ್ನುತ್ತೇನೆ" ಎಂದ.

ಗುಂಡೂರಾಯರು "ಏನೂ ಇಲ್ಲ. ಸೊಗಸಾಗಿಯೇ ಇದೆ. ಬಹಳ ಚೆನ್ನಾಗಿ ಹೇಳಿದಿರಿ. ನನ್ನ ಮನಸ್ಸಿಗಂತೂ ಬಹಳ ತೃಪ್ತಿಯಾಗಿದೆ" ಎಂದರು.

"ಗುಂಡಣ್ಣ ಚೆನ್ನಾಗಿದೆ ಎಂದ ಮೇಲೆ ಮುಗಿಯಿತು. ಅದರ ಮೇಲೆ ಅಪೀಲೇ ಇಲ್ಲ" ಎಂದು ವೆಂಕಟೇಶಯ್ಯನವರು ಆ ಮಾತು ಪುಷ್ಟಿಗೊಳಿಸಿದರು.

ಅಲ್ಲಿಯೇ ಬಾಗಿಲಿನಲ್ಲಿ ನಿಂತು ಕೇಳುತ್ತಿದ್ದ ಭಾಗ್ಯಳೂ "ಸಂಗೀತ ಬರುತ್ತದೆಯೋ ಇಲ್ಲವೋ? ಇನ್ನೂ ಅಷ್ಟು ಹೊತ್ತು ಕೇಳೋಣವೆಂಬಂತಿದೆ" ಎಂದುಕೊಂಡಳು.

ಮಧ್ಯಾನ್ಹ ಮಲಗಿದ್ದ ಕೋಣೆಯಲ್ಲಿಯೇ ರಾಜಣ್ಣನಿಗೆ ಹಾಸಿಗೆ ಹಾಸಿಕೊಡಲಾಯಿತು. ವೆಂಕಟೇಶಯ್ಯನವರೂ, ಗುಂಡೂರಾಯರೂ ಹಜಾರದಲ್ಲಿ ಹಾಸಿಗೆಗಳನ್ನು ಹಾಸಿಕೊಂಡು ಮಲಗಿದರು. ಯಾವಾಗಲೂ ಅಷ್ಟೇ. ಬಾಲ್ಯದಿಂದಲೂ ಸ್ನೇಹಿತರಾದ ಆ ಮುದುಕರುಗಳಿಬ್ಬರೂ ಮನದಣಿಯುವವರೆವಿಗೆ ಮಾತನಾಡುತ್ತಾ ಅಲ್ಲಿಯೇ ಮಲಗುತ್ತಿದ್ದರು.

ಮನೆಯಲ್ಲಿ ಎಲ್ಲರಿಗೂ ನಿದ್ದೆಯು ಬಂದುಬಿಟ್ಟಿದ್ದರೂ ಸಹ ಅವರುಗಳಿಬ್ಬರಿಗೂ ನಿದ್ದೆ ಬಂದಿರಲಿಲ್ಲ. ಮಾತನಾಡುತ್ತಲೇ ಇದ್ದರು.

ಒಂದು ಹೊತ್ತಿನಲ್ಲಿ ಗುಂಡೂರಾಯರು "ಈ ಮದುವೆಯ ಕಾಲ ಮುಗಿಯುವುದರೊಳಗಾಗಿ ಭಾಗ್ಯಳಿಗೆ ಮದುವೆಯಾಗುತ್ತದೆ ಎಂದು ಬಹಳ ಆಸೆಯನ್ನಿಟ್ಟುಕೊಂಡಿದ್ದೆ" ಎಂದರು.

"ಪುನಃ ಅದೇ ಮಾತು ಹೇಳುತ್ತೀಯಲ್ಲಾ. ಇನ್ನು ಈ ಮದುವೆ ಕಾಲವಿರುವುದು ಹದಿನೈದು ಇಪ್ಪತ್ತು ದಿನಗಳು. ಇಷ್ಟರಲ್ಲಿ ವರನನ್ನು ನಿಶ್ಚಯಮಾಡಿ ಮದುವೆ ಮಾಡುವುದು ಅಸಾಧ್ಯ. ಅದೂ ಅಲ್ಲದೇ ನಿನ್ನೆಯ ದಿನವೇ ಹೇಳಿದ್ದೇನೆ. ಈ ಒಂದು ತಿಂಗಳ ಕಾಲ ಭಾಗ್ಯಳಿಗೆ ಗುರು ಬಲವಿಲ್ಲ. ಗುರು ಬಲವಿಲ್ಲದ್ದಿದ್ದರೆ ಮದುವೆಯಾಗುವುದಿಲ್ಲ. ಈಗ ಗೋಚಾರ ರೀತ್ಯಾ ಗುರು ಮೂರನೆಯ ಮನೆಯಲ್ಲಿದ್ದಾನೆ. ಇನ್ನೊಂದು ತಿಂಗಳಿಗೆ ಅವನು ನಾಲ್ಕನೆಯ ಮನೆಗೆ ಬರುತ್ತಾನೆ. ಆ ಮಹರಾಯ ಆ ಮನೆಯಲ್ಲಿ ಕಾಲಿಟ್ಟನೋ ನೀನು ಬೇಡ ಬೇಡ ಅಂದರೂ ಮದುವೆಯಾಗಿ ಹೋಗುತ್ತದೆ. ಸ್ವಲ್ಪ ಸಮಾಧಾನವಾಗಿರು. ಏನಾದರೂ ಮಾಡಿ ನಾಳೆ ಶ್ರಾವಣದಲ್ಲಿ ಅವಳ ಮದುವೆ ಮಾಡಿಬಿಡೋಣ"

## ೨೪

ವಧೂವರರನ್ನು ಆಶೀರ್ವದಿಸಿ ಕನ್ಯಾಪಿತೃಗಳ ಮನಸ್ಸಂತೋಷಪಡಿಸಲು ಗುಂಡೂರಾಯರು ಸಪರಿವಾರ ಸಮೇತರಾಗಿ ನಾಲ್ಕು ದಿನ ಮುಂಚಿತವಾಗಿಯೇ ಮಾಗಡಿಗೆ ಬಂದಿದ್ದರು.

ವೆಂಕಟೇಶಯ್ಯನವರ ಮನೆಯು ಸಾಧಾರಣವಾಗಿ ದೊಡ್ಡದಾಗಿಯೇ ಇದ್ದಿತು. ಬರುವ ಅತಿಥಿ ಅಭ್ಯಾಗತರುಗಳಿಗೆ ಸಾಲುವುದೋ ಇಲ್ಲವೋ ಎಂದು ಮನೆಯ ಮುಂದಿದ್ದ ಬಯಲಿನಲ್ಲಿ ದೊಡ್ಡ ಚಪ್ಪರ ಹಾಕಿಸಿದ್ದರು. ಅವೆಲ್ಲವೂ ಬಂಧುಬಾಂಧವರಿಂದಲೂ, ಆಪ್ತೇಷ್ಟರುಗಳಿಂದಲೂ ತುಂಬಿಹೋಗಿದ್ದಿತು.

ಜಯ ಮತ್ತು ರಾಮಕೃಷ್ಣಯ್ಯ ಇವರ ಮದುವೆ ಇದ್ದುದರಲ್ಲಿ ವಿಜೃಂಭಣೆಯಾಗಿಯೇ ನಡೆಯಿತು.

ವೆಂಕಟೇಶಯ್ಯ ಊರಿನವರೆಲ್ಲರಿಗೂ ಬೇಕಾದವರು. ಆದ್ದರಿಂದ ಅವರೆಲ್ಲರೂ ಬಂದು ಓಡಿಯಾಡಲಾರಂಭ ಮಾಡಿದರು. ರಾಜಣ್ಣ ಗಿಳಿಯನಂತೆ ಗಂಭೀರವಾಗಿ ಕುಳಿತುಬಿಡಲಿಲ್ಲ. ಮದುವೆಯ ನಾಲ್ಕು ದಿನವೂ ಪಾದರಸದಂತೆ ಓಡಿಯಾಡಿದ. ಬಂದವರನ್ನು ಆದರದಿಂದ ಕೂರಿಸಿ ಕಾಫೀ ತಿಂಡೀ ತಂದು ಕೊಡುವುದರಿಂದ ಹಿಡಿದು, ಪುರೋಹಿತರ ಮುಂದಿರುವ ಬೆಳ್ಳಿ ಬಟ್ಟಲಿನಲ್ಲಿ ಮಂತ್ರಾಕ್ಷತೆಯಿದೆಯೋ ಇಲ್ಲವೋ ಎಂಬುದರವರೆವಿಗೆ ಎಲ್ಲವನ್ನೂ ನೋಡಿಕೊಳ್ಳುತ್ತಿದ್ದ. ಬಹಳ ಆಪ್ತರಾದವರು ವಿನಾ ಉಳಿದವರು ಅವನು ವರನ ಸ್ನೇಹಿತನೆಂದುಕೊಳ್ಳಲಿಲ್ಲ. ವೆಂಕಟೇಶಯ್ಯನವರ ಮಗನೇ ಎಂದುಕೊಂಡರು.

ಭಾಗ್ಯಳೂ ಅಷ್ಟೇ. ಅವಳಿಗೆ ವೆಂಕಟೇಶಯ್ಯನವರಲ್ಲಿ ಅಪಾರ ಗೌರವ ವಿಶ್ವಾಸಗಳಿದ್ದವು. "ನಮ್ಮ ಮನೆಯಲ್ಲಿ ಓಡಾಡುವರಿಲ್ಲ. ಜಯಳ ಮದುವೆ ಓಡಾಟವೆಲ್ಲವೂ ನಿನ್ನದೇ'' ಎಂದು ಅವರು ಮೊದಲೇ ಭಾಗ್ಯಳಿಗೆ ಹೇಳಿದ್ದರು. ಗುಂಡೂರಾಯರೂ, ವಿಶಾಲಾಕ್ಷಮ್ಮನವರೂ ಸಹ ಅದೇ ಮಾತು ಹೇಳಿದ್ದರು.

ರಾಜಣ್ಣನಂತೆಯೇ ಭಾಗ್ಯಳೂ ಸಹ ಸ್ವಲ್ಪವೂ ಬೇಸರ ಮಾಡಿಕೊಳ್ಳದೇ ಓಡಿಯಾಡುತ್ತಿದ್ದಳು.

ಈ ಓಡಾಟಗಳಲ್ಲಿ ಅವರಿಬ್ಬರೂ ಪರಸ್ಪರ ಅಭಿಮುಖರಾಗಬೇಕಾಗಿ ಬರುತಿತ್ತು. ಒಬ್ಬರೊಂದಿಗೆ ಒಬ್ಬರು ಮಾತನಾಡಬೇಕಾಗಿ ಬರುತಿತ್ತು. ಇದರಿಂದ ಮೊದಲು ಮೊದಲು ಇಬ್ಬರಿಗೂ ನಾಚಿಕೆ ಸಂಕೋಚಗಳಾಗುತ್ತಿದ್ದವು. ರಾಜಣ್ಣ ಮದುವೆಗೆ ಎರಡು ವಾರಗಳ ಮೊದಲೇ ಮಾಗಡಿಗೆ ಬಂದಿದ್ದ. ಭಾಗ್ಯಳು ನಾಲ್ಕು ದಿನಗಳ ಮೊದಲು ಬಂದಿದ್ದಳು. ಮದುವೆಯು ಆರಂಭವಾಗುವವರೆವಿಗೂ ನಾಚಿಕೆ-ಸಂಕೋಚಗಳಿಂದ ಅವರುಗಳು ದೂರ ದೂರವಾಗಿರಲು ಸಾಧ್ಯವಾಯಿತು. ಆದರೆ ಅದು ಹಾಗೆಯೇ ಇರಲಾಗಲಿಲ್ಲ. ಮೊದಲನೆಯ ದಿನದ ಓಡಿಯಾಟಗಳಲ್ಲಿಯೇ ಆ ನಾಚಿಕೆ ಸಂಕೋಚಗಳು ಬಿಟ್ಟು ಹೋಗಬೇಕಾಗಿ ಬಂದುವು. ಸಂಜೆ ಗಂಡಿನ ಬಿಡಾರದಲ್ಲಿ ವರ ಪೂಜೆಗೆ ಹೋಗುವುದರೊಳಗಾಗಿ ಅವರುಗಳು ಒಂದೇ ಮನೆಯವರಂತಾಗಿ ಹೋಗಿದ್ದರು,

ಧಾರೆಯ ದಿನ ಸಂಜೆ ಆರತಕ್ಷತೆಯನ್ನಿಟ್ಟುಕೊಂಡಿದ್ದರು

ಕಡೆಯ ಪಂಗ್ತಿ ಊಟವಾಗುವ ವೇಳೆಗೆ ಮಧ್ಯಾಹ್ನ ಮೂರು ಗಂಟೆಯಾಯಿತು. ಎಲೆಗಳನ್ನು ತೆಗೆದು ಹಾಕಿ ಚಪ್ಪರವನ್ನು ಚೊಕ್ಕಟ ಮಾಡಿದ ಕೂಡಲೇ ಭಾಗ್ಯ, ರಾಜಣ್ಣ ಇಬ್ಬರೂ ಸೇರಿ ಸಂಜೆಯ ಏರ್ಪಾಡುಗಳಲ್ಲಿ ತೊಡಗಿದರು. ಪ್ರೈಮರೀ ಮಿಡಲ್ ಸ್ಕೂಲುಗಳಿಂದ ಕುರ್ಚಿ ಬೆಂಚುಗಳನ್ನು ತರಿಸಿ ಚಪ್ಪರದ ಒಂದು ಕಡೆ ಸೂಟು ಹಾಕಿಕೊಂಡು ಬರುವ ಸಾಹೇಬರುಗಳಿಗಾಗಿ ಅಣಿಗೊಳಿಸಿದರು.

ಚಪ್ಪರದ ಪ್ರಶಸ್ತವಾದ ಎಡೆಯಲ್ಲಿ ಉಯ್ಯಾಲೆ ಮಣೆ ತಂದಿಟ್ಟು, ಅದರ ಮೇಲೆ ಜಮುಖಾನವನ್ನು ಮಡಿಚಿ ಹಾಕಿ, ಲಕ್ಷಣವಾಗಿ ಕಾಣುವಂತೆ ಮೇಲುಗಡೆ ಜರಿಯ ಪೀತಾಂಬರವನ್ನು ಒಪ್ಪವಾಗಿ ಹಾಸಿದರು.

ಆ ಸಮಯದಲ್ಲಿ ಭಾಗ್ಯಳು "ಇಷ್ಟು ಮಾಡಿದರೂ ಸಹ ಈ ಆರತಕ್ಷತೆಯು ಕಳೆಗಟ್ಟುವುದಿಲ್ಲವೇನೋ ?'' ಎಂದಳು.

ರಾಜಣ್ಣ ಗಾಬರಿಯಾಗಿ "ಯಾಕೆ ಹಾಗೆ ಹೇಳುತ್ತೀರಿ ?" ಎಂದ.

"ನೀವು ಗಾಬರಿಪಟ್ಟುಕೊಳ್ಳಬೇಕಾಗಿಲ್ಲ. ನಾನು ಹೇಳುವುದೇನೆಂದರೆ

ವಧೂವರರು ಹಸೆಯ ಮೇಲೆ ಕುಳಿತುಕೊಂಡಿರುತ್ತಾರೆ. ಬರುವವರು ಬಂದು ಅವರುಗಳನ್ನು ನೋಡಿಕೊಂಡು ಹೊರಟು ಹೋಗುತ್ತಾರೆ. ಪುನಃ ಯಾರಾದರೂ ನೋಡಲು ಬರುವವರೆವಿಗೆ ವಧೂವರರು ನವರಾತ್ರಿಯಲ್ಲಿ ಪಟ್ಟಕ್ಕೆ ಕೂರಿಸಿದ ಗೊಂಬೆಗಳಂತೆ ಕುಳಿತುಕೊಂಡಿರಬೇಕು. ಅದು ಅವರಿಗೂ ಬೇಜಾರಾಗುತ್ತದೆ. ನಮಗೂ ಚೆನ್ನಾಗಿರುವುದಿಲ್ಲ"

"ಹಾಗಾದರೆ ಏನು ಮಾಡಬೇಕು ಎನ್ನುತ್ತೀರಿ ?"

"ಹಾಗಾಗದಿರಲೆಂದೇ ಮದುವೆಗಳಲ್ಲಿ ಸಂಗೀತವನ್ನೋ ಪಂಗೀತವನ್ನೋ ಏರ್ಪಡಿಸುವುದು. ಬಂದವರು ಸಂಗೀತ ಕೇಳುತ್ತಾ ಎರಡು ಗಳಿಗೆ ಕುಳಿತು ಕೊಳ್ಳುತ್ತಾರೆ. ಅವರು ಹೊರಡುವುದರೊಳಗಾಗಿ ಮತ್ತಷ್ಟು ಜನ ಬರುತ್ತಾರೆ, ಹಸೇ ಮಣೆಯಲ್ಲಿ ಕುಳಿತುಕೊಂಡಿರುವವರಿಗೂ ಅಷ್ಟೇ. ತಮ್ಮನ್ನು ನೋಡಲು ಬರುವವರಿಗಾಗಿ ಕುಳಿತಿದ್ದೇವೆಂಬ ಭಾವನೆ ಇರುವುದಿಲ್ಲ. ಸಂಗೀತ ಕೇಳುತ್ತಾ ಕುಳಿತುಕೊಂಡಿದ್ದೇವೆ ಎಂದುಕೊಳ್ಳುತ್ತಾರೆ"

ಭಾಗ್ಯಳು ಹೇಳಿದ್ದು ರಾಜಣ್ಣನಿಗೆ ಸೂಕ್ತವಾಗಿ ಕಂಡಿತು. ಮೈಸೂರು ಬೆಂಗಳೂರು ಪಟ್ಟಣಗಳಲ್ಲಾದರೆ ಯಾರಾದರೂ ಸಂಗೀತಗಾರರನ್ನು ಕರೆದು ಕೊಂಡು ಬಂದು ಹಾಡಿಸಬಹುದಾಗಿತ್ತು. ಆದರೆ ಈ ಊರಿನಲ್ಲಿ ಯಾರು ಸಿಕ್ಕುತ್ತಾರೆ. ಅದೊಂದೂ ಅವನಿಗೆ ಸಾಧ್ಯವಾಗುವಂತೆ ಕಾಣಲಿಲ್ಲ.

"ಈ ಊರಿನಲ್ಲಿ ಸಂಗೀತಗಾರರನ್ನೆಲ್ಲಿ ಕರೆದುಕೊಂಡು ಬರುವುದು ? ನಿಮ್ಮ ಪುಣ್ಯ ಸುಮ್ಮನಿರಿ. ಆಮೇಲೆ ನಾನೇ ಕುಳಿತು ಹಾಡಬೇಕಾಗಿಬರುತ್ತದೆ"

ಹುಸಿ ನಗೆಯನ್ನು ನಗುತ್ತಾ "ಅದೂ ಒಳ್ಳೆಯದೇ ಆಯಿತು. ಲಕ್ಷಣವಾಗಿ ನಾಲ್ಕು ದೇವರ ನಾಮಗಳನ್ನು ಹಾಡಿರಿ. ಕೇಳುವವರಿಗೂ ಪುಣ್ಯ ಬರುತ್ತದೆ" ಎಂದಳು ಭಾಗ್ಯ.

"ನಾನು ದೇವರ ನಾಮಗಳನ್ನು ಹೇಳಬೇಕೋ ? ತಡೆಯಿರಿ, ವೆಂಕಟೇಶಯ್ಯನವರಿಗೆ ಹೇಳಿ ನಿಮ್ಮ ಸಂಗೀತ ಕಚೇರಿಯನ್ನು ಏರ್ಪಾಟು ಮಾಡಿಸುತ್ತೇನೆ"

ಈ ಐದಾರು ದಿನಗಳಲ್ಲಿ ಭಾಗ್ಯಳು ರಾಜಣ್ಣನ ರೀತಿಯನ್ನು ತಕ್ಕ ಮಟ್ಟಿಗೆ ಅರ್ಥ ಮಾಡಿಕೊಂಡಿದ್ದಳು. ಅವನು ತೋರಿದುದನ್ನು ಮಾಡಿಯೇ ಬಿಡುತ್ತಾನೆಂದು ಮನಸ್ಸಿಗೆ ಬಂದು ಹೆದರಿದಳು.

"ನೀವು ಸುಮ್ಮನೆ ತಮಾಷೆ ಮಾಡಬೇಡಿ. ಊರು ಎಂದರೆ ಯಾವಾಗಲೂ ಹಾಳಲ್ಲ. ಯಾರೋ ಒಬ್ಬ ಸಂಗೀತಗಾರನೋ, ಸಂಗೀತದ ಮೇಷ್ಟ್ರೋ ಇರುತ್ತಾನೆ. ಚೆನ್ನಾಗಿ ಹಾಡಲೇಬೇಕೆಂಬ ನಿಯಮವೇನೂ ಇಲ್ಲ. ಏನೋ ಕಚೇರಿ ಅಂತ ಏರ್ಪಾಟು ಮಾಡಿದರೆ ಸಾಕು ಕಳೆ ಕಟ್ಟುತ್ತದೆ. ಎಲ್ಲಾದರೂ ಒಂದು ಲೌಡ್‌ಸ್ಪೀಕರ್ ಸಿಕ್ಕಿಬಿಟ್ಟರಂತೂ ಏನಿಲ್ಲದಿದ್ದರೂ ಅದರ ಗಲಾಟೆಯಿಂದಲೇ ಚಪ್ಪರವು ತುಂಬಿಹೋಗುತ್ತದೆ"

ಅವಳು ಹೇಳಿದುದು ರಾಜಣ್ಣನ ಮನಸ್ಸಿಗೆ ಹಿಡಿಯಿತು

"ನೀವು ಹೇಳುವುದು ಸರಿಯಾಗಿದೆ, ಭಾಗ್ಯ. ನೀವು ಇಲ್ಲಿಯ ಏರ್ಪಾಟುಗಳನ್ನು ನೋಡಿಕೊಳ್ಳಿರಿ. ನಾನು ಹೋಗಿ ಯಾವನಾದರೂ ಸಂಗೀತಗಾರ ಸಿಕ್ಕುತ್ತಾನೆಯೋ ಎಂದು ನೋಡಿಕೊಂಡು ಬರುತ್ತೇನೆ" ಎಂದು ಹೇಳಿ ಹೊರಟುಹೋದ.

ರಾಜಣ್ಣ ಈ ಹೊಸ ಏರ್ಪಾಟಿನ ವಿಷಯವನ್ನು ಹೇಳಿದಾಗ ಅದು ಕೂಡಲೇ ವೆಂಕಟೇಶಯ್ಯನವರ ಮನಸ್ಸಿಗೆ ಬರಲಿಲ್ಲ. ಅವನು ಸಮರ್ಥನೆಯ ಎರಡು ಮಾತುಗಳನ್ನು ಹೇಳಿದ. ಕೂಡಲೇ ಅವನು ಹೇಳುವುದರಲ್ಲಿ ಅರ್ಥವಿದೆ ಎಂದು ಗ್ರಹಿಸಿದರು.

ವೆಂಕಟೇಶಯ್ಯನವರು "ಸ್ಕೂಲುಗಳಲ್ಲಿ ಪಾಠ ಹೇಳುವ ಸಂಗೀತದ ಮೇಷ್ಟರುಗಳಿದ್ದಾರೆ. ಆದರೆ ಅವರಿಗೆ ಕಚೇರಿ ಮಾಡುವಷ್ಟು ಬರುತ್ತದೆಯೋ ಇಲ್ಲವೋ ಗೊತ್ತಿಲ್ಲ" ಎಂದು ಹೇಳಿದವರು ಗಳಿಗೆಯ ಕಾಲ ಯೋಚನೆಮಾಡಿ "ಹಾ– ಈಗ ಜ್ಞಾಪಕ ಬಂದಿತು ನೋಡು. ಈ ಊರಿನಲ್ಲಿ ಗೋಪಾಲಯ್ಯ ಅಂತ ಒಬ್ಬನಿದ್ದಾನೆ. ವಂಶಾನುಕ್ರಮವಾಗಿ ಅವರು ವೀಣೆ ತಯಾರಿಸುತ್ತಿದ್ದಾರೆ. ಅಷ್ಟೇ ಅಲ್ಲ, ಸಂಗೀತ ವಿದ್ವಾಂಸರೆಂದೂ ಹೆಸರಾಗಿದ್ದಾರೆ. ನಾನು ಹೇಳುವ ಗೋಪಾಲಯ್ಯನಿಗೂ ಸಂಗೀತ ಬರುತ್ತದೆಂದು ಕೇಳಿದ್ದೇನೆ. ಹೊರಗಡೆ ಕಚೇರಿಗಳಿಗೆ ಸಹ ಹೋಗುವುದುಂಟು. ಹೋಗಿ ವಿಚಾರಿಸೋಣ, ಬಾ" ಎಂದರು.

ಆವರಿಬ್ಬರೂ ಹೊರಟು ಗೋಪಾಲಯ್ಯನವರ ಮನೆಗೆ ಹೋದರು. ಪುಣ್ಯವಶಾತ್ ಆತ ಮನೆಯಲ್ಲಿಯೇ ಇದ್ದರು. ವೆಂಕಟೇಶಯ್ಯ ತಾವು ಹೋದ ಉದ್ದೇಶವನ್ನು ಹೇಳಿದರು.

ಗೋಪಾಲಯ್ಯನವರು "ನೀವು ಹೇಳುವುದು ಸರಿ. ನೀವು ಬಂದು ಕರೆದರೆ ಆಗುವುದಿಲ್ಲವೆಂದು ಹೇಳಲು ಬಾಯಿ ಬರುವುದಿಲ್ಲ. ಆದರೆ ನೀವು ಕಟ್ಟಕಡೆಯ ಗಳಿಗೆಯಲ್ಲಿ ಬಂದಿದ್ದೀರಿ. ಈ ಹೊತ್ತಿನಲ್ಲಿ ಪಕ್ಕ ವಾದ್ಯದವರನ್ನು ಎಲ್ಲಿ ಹುಡುಕಿಕೊಂಡುಬರಲಿ. ಕಚೇರಿಯನ್ನು ಮಾಡುವುದು ಹೇಗೆ?", ಎಂದರು.

ವೆಂಕಟೇಶಯ್ಯನವರು "ಅದು ವಾಸ್ತವ. ಆದರೆ ಈ ನಿಮಿಷದವರೆವಿಗೆ ಹೀಗೆ ತೋರಲೇ ಇಲ್ಲ. ನಮ್ಮ ಹುಡುಗ ಕಚೇರಿ ಆಗಲೇಬೇಕೆಂದು ಹಠ ಹಿಡಿದುಬಿಟ್ಟಿದ್ದಾನೆ. ಏನಾದರೂ ಮಾಡಿ ನೀವು ದೊಡ್ಡ ಮನಸ್ಸು ಮಾಡಬೇಕು" ಎಂದಿರು.

"ಈ ಹೊತ್ತಿನಲ್ಲಿ ಇನ್ನು ಏನು ಮಾಡುವುದಕ್ಕೂ ಆಗುವುದಿಲ್ಲ. ನಾನಿದ್ದೇನೆ. ನನ್ನ ವೀಣೆಯಿದೆ. ಅದನ್ನು ತಂದು ನೀವು ಎಷ್ಟು ಹೊತ್ತು ಬಾರಿಸು ಎಂದರೆ ಅಷ್ಟು ಹೊತ್ತು ಬಾರಿಸಿ ಹೋಗುತ್ತೇನೆ"

ರಾಜಣ್ಣನು ಬಾಯಿ ಹಾಕಿ "ಅಷ್ಟು ಮಾಡಿದರೆ ಸಾಕು. ವೀಣೆಗಿಂತಲೂ ಉತ್ತಮವಾದ ವಾದ್ಯವೇನಿದೆ? ವೀಣಾವಾದನಕ್ಕಿಂತಲೂ ಉತ್ತಮವಾದ ಸಂಗೀತವಾವುದಿದೆ? ಸರಸ್ವತಿಯು ಬಾರಿಸುವುದೇ ವೀಣೆಯನ್ನಲ್ಲವೇ? ಅಷ್ಟು ಮಾಡಿ. ಸಾಕು" ಎಂದ.

ಅವರು ಒಪ್ಪಿಕೊಂಡರು.

ಹೊರಟು ಬರುವ ಮೊದಲು ರಾಜಣ್ಣನು "ಗೋಪಾಲಯ್ಯನವರೇ! ನೀವು ವೀಣಾ ವಾದನದಲ್ಲಿ ಪರಿಣತರೆಂದು ಕೇಳಿದ್ದೇನೆ. ನಾವೇ ಅಲ್ಲದೇ ನಾಲ್ಕು ಜನರೂ ಕೇಳಲಿ ಎಂದು ನನ್ನ ಅಭಿಪ್ರಾಯ. ಈ ಊರಿನಲ್ಲಿ ಎಲ್ಲಿಯಾದರೂ ಲೌಡ್ ಸ್ಪೀಕರು ಸಿಕ್ಕುವುದಾದರೆ ಅದನ್ನು ಏರ್ಪಾಟು ಮಾಡಿಬಿಡಬೇಕು ಎಂದು ಮನಸ್ಸು" ಎಂದ.

ಗೋಪಾಲಯ್ಯ ವೆಂಕಟೇಶಯ್ಯನವರನ್ನು ಕುರಿತು "ಛತ್ರದಿಂದ ಕೆಳಗೆ ನಂಜುಂಡರಾಯರ ಮಗ ಅನಂತ ಅಂಗಡಿಯಿಟ್ಟುಕೊಂಡಿದ್ದಾನೆ, ನೋಡಿ. ಅವನ ಬಳಿ ಲೌಡ್ ಸ್ಪೀಕರ್ ಇದೆ. ಈ ದಿನ ಯಾರೂ ಗೊತ್ತು ಮಾಡಿಕೊಳ್ಳದೇ ಇದ್ದರೆ–ಬಹುಮಟ್ಟಿಗೆ ಗೊತ್ತುಮಾಡಿಕೊಂಡಂತೆ ಇಲ್ಲ–ಅವನನ್ನು ಕೇಳಿದರೆ ಎಲ್ಲಾ ಏರ್ಪಾಡೂ ಮಾಡುತ್ತಾನೆ" ಎಂದರು.

ರಾಜಣ್ಣನಿಗೆ ಬಹಳ ಸಂತೋಷವಾಯಿತು.

"ಈ ಊರಿನಲ್ಲಿ ಲೌಡ್‌ಸ್ಪೀಕರ್ ಸಿಕ್ಕಬಹುದೆಂದು ನಾನು ಭಾವಿಸಿರಲಿಲ್ಲ"

"ಸಿಕ್ಕದೇ ಏನು ಸ್ವಾಮಿ. ಈಗ ಹಳ್ಳಿಪಳ್ಳಿಗಳಿಗೂ ಇವೆಲ್ಲಾ ಬೇಕು. ಮಂತ್ರಿಗಳ ಪ್ರವಾಸ, ಸಭೆ ಸಮಾರಂಭಗಳು, ಎಲ್ಲದಕ್ಕಿಂತಲೂ ಹೆಚ್ಚಾಗಿ ಎಲೆಕ್ಷನ್‌ಗಳು, ಲೌಡ್‌ಸ್ಪೀಕರುಗಳಿಲ್ಲದಿದ್ದರೆ ನಡೆಯುವುದೇ ಇಲ್ಲ"

ಗೋಪಾಲಯ್ಯನವರಿಗೆ ಧನ್ಯವಾದಗಳನ್ನು ಸಮರ್ಪಿಸಿ ಅವರಿಬ್ಬರೂ ಹೊರಗೆ ಬಂದರು.

ಅನಂತ ಲೌಡ್ ಸ್ಪೀಕರ್ ಸಾಧನಗಳನ್ನು ತಂದು ಜೋಡಿಸಿ, ಎರಡು ಬಾರಿ "ಹಲೋ-ಹಲೋ" ಎಂದು ಕೂಗಿ, ರಿಕಾರ್ಡುಗಳನ್ನು ಹಾಕತೊಡಗಿದಾಗ ಭಾಗ್ಯಳು ಬಂದು ನಿಂತು ನೋಡಿದಳು, ತಾನು ಹೇಳಿದುದು ನೆರವೇರಿತಲ್ಲಾ ಎಂಬ ತೃಪ್ತಿಯಿಂದ ರಾಜಣ್ಣನ ಕಡೆಗೆ ನೋಡಿದಳು. ತಾನೊಂದು ಮಹತ್ಕಾರ್ಯವನ್ನು ಮಾಡಿದಂತೆ ಅವನಿಗೆ ಭಾಸವಾಯಿತು.

ಸಂಜೆ ಸಂಗೀತವು ನಡೆಯುತ್ತದೆಂದು ಮದುವೆಗೆ ಬಂದವರೆಲ್ಲರಿಗೂ ಗೊತ್ತಿತ್ತು. ಹೆಂಗಸರು ಗಂಡಸರು ಅಲಂಕಾರ ಮಾಡಿಕೊಂಡು ಚಪ್ಪರದಲ್ಲಿ ಸೇರಿದರು. ಸಮಯಕ್ಕೆ ಸರಿಯಾಗಿ ಗೋಪಾಲಯ್ಯನವರು ಬಂದರು. ವಧೂವರರು ಹಸೇಮಣೆಯ ಮೇಲೆ ಕುಳಿತುಕೊಳ್ಳುತ್ತಲೇ ಆತ ವೀಣಾವಾದನವನ್ನು ಆರಂಭಿಸಿದರು. ಅದು ತಕ್ಕಮಟ್ಟಿಗೆ ಚೆನ್ನಾಗಿಯೇ ಇದ್ದಿತು.

ಆ ಹೊತ್ತಿಗೆಲ್ಲಾ ಆಹ್ವಾನಿತರುಗಳು ಬರಲಾರಂಭಿಸಿದರು. ಭಾಗ್ಯಳು ಹೆಂಗಸರನ್ನೂ, ರಾಜಣ್ಣನು ಗಂಡಸರನ್ನೂ ಕರೆತಂದು ಕೂರಿಸಿ ಗೌರವಿಸಿದರು.

ಸುಮಾರು ಎಂಟು ಗಂಟೆಯ ವೇಳೆಗೆ ಆರತಕ್ಷತೆಗಳು ಮುಗಿದವು.

ಊಟಕ್ಕೆ ಇನ್ನೂ ಬೇಕಾದಷ್ಟು ಹೊತ್ತಿತ್ತು. ಅನಂತ ಒಂದೊಂದಾಗಿ ತನ್ನಲ್ಲಿದ್ದ ರಿಕಾರ್ಡುಗಳೆಲ್ಲವನ್ನೂ ಮುಗಿಸಿ ತಮಿಳು ಸಿನಿಮಾದ ಹಾಡುಗಳನ್ನು ಹಾಕಲು ಮೊದಲು ಮಾಡಿದ. ಯಾವುದೋ ಹಿಂದೀ ಚಿತ್ರದ ದಾಟಿಯಲ್ಲಿ ತಮಿಳು ಗಂಡುಹೆಣ್ಣುಗಳು ಪರಸ್ಪರ ವಾಗ್ವಾದವನ್ನು ಮಾಡುತ್ತಿದ್ದ ರಿಕಾರ್ಡು.

ಅದನ್ನು ಕೇಳಿ ರಾಜಣ್ಣನಿಗೆ ಬೇಜಾರಾಯಿತು. ಹೋಗಿ ನಿಲ್ಲಿಸಿಬಿಡ ಬೇಕೆಂದು ಯೋಚನೆ ಬಂದಿತು. ಹಾಗೆ ಮಾಡಿದರೆ ಇರುವ ಗಲಾಟೆಯು ಸಹ ನಿಂತುಹೋಗುತ್ತದೆ. ಬೇರೇ ರಿಕಾರ್ಡು ಹಾಕಬೇಕೆಂದು ಹೇಳಬಹುದು. ಆಸಂತ ತಾನೇನು ಮಾಡಬಲ್ಲ? ಜನಪ್ರಿಯವಾದ ರಿಕಾರ್ಡುಗಳನ್ನು ಕೊಂಡು ತಂದಿಟ್ಟುಕೊಂಡಿರುತ್ತಾನೆ. "ಬೇರೇ ತೆಗೆದುಕೊಂಡು ಬಾ" ಎಂದರೆ ಅವನೆಲ್ಲಿ ತರುತ್ತಾನೆ?

ಆಗ ಅವನಿಗೊಂದು ಯೋಚನೆಯು ಬಂದಿತು.

ಭಾಗ್ಯಳನ್ನು ಕರೆದು "ಭಾಗ್ಯ. ಈ ಹಾಳು ರಿಕಾರ್ಡುಗಳು ಬಹಳ ಬೇಜಾರಾಗುತ್ತವೆ. ಯಾರಾದರೂ ಚೆನ್ನಾಗಿ ಹಾಡುವ ಹುಡುಗಿಯರಿದ್ದರೆ ಕರೆದುಕೊಂಡು ಬಾ. ಮೈಕ್ ಮುಂದೆ ಅವರನ್ನು ಹಾಡಿಸೋಣ. ಹಸೇ ಮಣೆಯ ಮುಂದೆ ಕೂರಿಸಿ ಬಲಾತ್ಕಾರದಿಂದ ಹಾಡು ಹೇಳಿಸುತ್ತೀರಿ. ಗಲಾಟೆಯಲ್ಲಿ ಅವರ ಹಾಡು ಕೇಳುವವರೇ ಇಲ್ಲ. ಈಗಲಾದರೂ ನಾಲ್ಕಾರು ಹಾಡುಗಳನ್ನು ಹೇಳಿಸಿದರೆ ಚೆನ್ನಾಗಿರುತ್ತದೆ" ಎಂದ.

ಅವಳಿಗೂ ಅದು ಒಪ್ಪಿತು.

ನಾಲ್ಕಾರು ಮಂದಿ ಹುಡುಗಿಯರನ್ನು ಹಿಡಿದುಕೊಂಡು ಬಂದು ಮೈಕ್ ಮುಂದೆ ಕೂರಿಸಿ ಹಾಡುವಂತೆ ಹೇಳಿದರು. ನಾಚಿಕೆಯಿಂದ ಅವರಾರೂ ಒಪ್ಪಲಿಲ್ಲ. ಬಲಾತ್ಕಾರದಿಂದ ಒಬ್ಬ ಹುಡುಗಿಯಿಂದ ಹಾಡು ಹೇಳಿಸಲು ತಾವು ತಾವೆಂದು ಎಲ್ಲರೂ ಮುಂದೆ ಬಂದರು. ಗಂಡು ಹುಡುಗರು. ಯುವಕರು ಸಹ ತಾವು ಹಾಡುವುದಾಗಿ ಹೇಳಿ ಹಾಡತೊಡಗಿದರು,

ತಮ್ಮ ಮಕ್ಕಳುಮರಿಗಳೇ ಹಾಡಲು ಮೊದಲು ಮಾಡಿದುದರಿಂದ ಮದುವೆಗೆ ಬಂದವರಿಗೆಲ್ಲರಿಗೂ ಖುಷಿಯಾಯಿತು.' ಅವರುಗಳು ಅತ್ಯಾಸಕ್ತಿಯಿಂದ ಕೇಳತೊಡಗಿದರು.

ಇದ್ದಕ್ಕಿದ್ದ ಹಾಗೆಯೇ ಆದ ಈ ಹೊಸ ಬದಲಾವಣೆಯನ್ನು ನೋಡಿ ವೆಂಕಟೇಶಯ್ಯನವರು ಮೈಕ್ ಬಳಿಗೆ ಬಂದರು. ಅಲ್ಲಿ ಕುಳಿತಿದ್ದ ಹೊಸ ಸಂಗೀತಗಾರರುಗಳನ್ನೂ. ಸಂಗೀತ ಪ್ರವರ್ತಕರನ್ನೂ ನೋಡಿ ಹೇಳಿದರು.

"ಏನು, ನೀವು ವಿವಿಧ ವಿನೋದಾವಳಿಯನ್ನೇ ಏರ್ಪಡಿಸಿರುವಂತೆ ಕಂಡುಬರುತ್ತಿದೆಯಲ್ಲಾ"

ಭಾಗ್ಯಳು ಹೆಮ್ಮೆಯಿಂದ "ಹೇಗಿದೆ ನೋಡಿ. ಆ ರಿಕಾರ್ಡುಗಳಿಗಿಂತಲೂ ಈ ವಿವಿಧ ವಿನೋದಾವಳಿಯು ಎಷ್ಟೋ ಚೆನ್ನಾಗಿದೆ. ಏನೆನ್ನುತ್ತೀರಿ ?'' ಎಂದಳು.

ವೆಂಕಟೇಶಯ್ಯನವರು ಕುಳಿತುಕೊಂಡು "ಭಾಗ್ಯ. ಮಧ್ಯಾಹ್ನ ರಾಜಣ್ಣ ಬಂದು ಸಂಗೀತವನ್ನು ಏರ್ಪಡಿಸಬೇಕೆಂದು ಹೇಳಿದಾಗ ನಿನ್ನಿಂದಲೇ ಹಾಡಿಸಬೇಕೆಂದು ಯೋಚನೆ ಮಾಡಿದ್ದೆ'' ಎಂದರು.

"ನೀವು ಯೋಚಿಸಿದ ಹಾಗೆ ಮಾಡದಿದ್ದುದೇ ಒಳ್ಳೆಯದಾಯಿತು. ನೀವು ನನ್ನ ಸಂಗೀತವನ್ನೇ ಏರ್ಪಡಿಸಿದ್ದಿದ್ದರೆ ಬಂದವರೆಲ್ಲರೂ ಕೇಳದೇ ಕೇಳದೇ ಹೊರಟುಹೋಗುತ್ತಿದ್ದರು"

''ಹಾಗೇನೂ ಇಲ್ಲ. ನೀನು ಆ ದಿನ ಕೋಣೆಯಲ್ಲಿ ಕುಳಿತು ವೀಣೆ ಬಾರಿಸುತ್ತಿದ್ದುದನ್ನು ಕೇಳಿದ್ದೆ. ಅದೇನು ಕಳಪೆಯಲ್ಲ. ಅದೆಷ್ಟೋ ಚೆನ್ನಾಗಿತ್ತು. ಅದೂ ಅಲ್ಲದೇ ನೀನು ಚೆನ್ನಾಗಿ ಹಾಡುತ್ತೀಯೆಂದು ನಿಮ್ಮಪ್ಪನೇ ಹೇಳುತ್ತಾನೆ. ಅವನು ಹೇಳಿದ ಮೇಲೆ ಯಾರೂ ಏನೂ ಮಾತನಾಡುವಂತೆಯೇ ಇಲ್ಲ'

ರಾಜಣ್ಣನು "ಇವರಿಗೆ ಸಂಗೀತ ಬೇರೇ ಬರುತ್ತದೆಯೇನು ? ನನಗೆ ಗೊತ್ತೇ ಇರಲಿಲ್ಲ. ಗೊತ್ತಿದ್ದಿದ್ದರೆ ಇವರದೇ ಆಗಲಿ ಎಂದು ಹೇಳುತ್ತಿದ್ದೆ. ನಿಮಗೆ ಗೊತ್ತಿದ್ದೂ ನೀವೇಕೆ ನನ್ನೊಂದಿಗೆ ಹೇಳಲಿಲ್ಲ ?" ಎಂದ.

"ಒಳ್ಳೇ ಬುದ್ಧಿವಂತನಯ್ಯಾ ನೀನು. ಅವಳನ್ನು ಸಂಗೀತ ಹಾಡುವುದಕ್ಕೆ ಕೂರಿಸಿಬಿಟ್ಟಿದ್ದರೆ ಬಂದ ಹೆಂಗಸರನ್ನೆಲ್ಲಾ ಕರೆತಂದು ಕೂರಿಸಿ ಅವರಿಗೆ ತಾಂಬೂಲವನ್ನು ಕೊಡಲು ನಾನು ಸೀರೆ ಉಟ್ಟುಕೊಂಡು ಓಡಿಯಾಡಬೇಕಾಗಿತ್ತು ಎಂದು ಹೇಳುತ್ತೀಯೇನು ?''

"ಹೋಗಲಿ. ಆಗಂತೂ ಇವರ ಸಂಗೀತ ಕಚೇರಿ ಏರ್ಪಡಿಸಲು ಆತಂಕವಿದ್ದಿತು. ಈಗ ಏರ್ಪಡಿಸಬಹುದಲ್ಲ. ಈಗ ಯಾವ ಅಡ್ಡಿ ಆತಂಕಗಳೂ ಇಲ್ಲವಲ್ಲ"

ಆ ವಿಷಯ ವೆಂಕಟೇಶಯ್ಯನವರಿಗೆ ತೋರಿಯೇ ಇರಲಿಲ್ಲ. ಈಗ ರಾಜಣ್ಣ ಸೂಚನೆ ಮಾಡಿದ ಮೇಲೆ ಹೇಳಿದರು.

''ಹೌದಮ್ಮ. ನೀನು ಚೆನ್ನಾಗಿ ಹಾಡುತ್ತೀಯೆಂದು ಕೇಳಿದ್ದೇನೆ.

ಆದರೆ ನೀನು ಹಾಡಿದುದನ್ನು ಕೇಳಿಲ್ಲ. ಯಾವುದಾದರೂ ಒಂದೆರಡು ಕೀರ್ತನೆಗಳನ್ನು ಹಾಡು"

ಭಾಗ್ಯ ಹಾಡುವುದಕ್ಕೆ ಒಪ್ಪಲಿಲ್ಲ. ವೆಂಕಟೇಶಯ್ಯನವರು ಬಲಾತ್ಕಾರ ಮಾಡಿದರು. ಅಲ್ಲಿಗೂ ಅವಳು ತನ್ನ ಸಮ್ಮತಿಯನ್ನು ಸೂಚಿಸಲಿಲ್ಲ.

ರಾಜಣ್ಣನು "ದೊಡ್ಡವರು ಹೇಳಿದ ಮಾತು ತೆಗೆದುಹಾಕಬೇಡಿ, ಹೇಳಿ'' ಎಂದ.

ಅವನ ಕಡೆಗೆ ದುರುಗುಟ್ಟಿಕೊಂಡು ನೋಡುತ್ತಾ ಭಾಗ್ಯ ಅಣಕಿಸುವ ಧ್ವನಿಯಲ್ಲಿ "ಹೌದು. ದೊಡ್ಡವರು ಹೇಳಿದ ಮಾತು ತೆಗೆದುಹಾಕಬೇಡಿ, ನೀವೇ ಎರಡು ದೇವರ ನಾಮಗಳನ್ನು ಹೇಳಿ" ಎಂದಳು.

"ವೆಂಕಟೇಶಯ್ಯನವರು ಹೇಳಿದ್ದು ನನಗಲ್ಲ, ನಿಮಗೆ"

"ನಿಮಗೇ ಹೇಳಿದರೆಂದುಕೊಂಡು ಹೇಳಿ"

''ಅವನಿಂದಲೂ ಹೇಳಿಸೋಣ. ನೀನು ಹೇಳಮ್ಮ"

"ನಿಮಗೆ ಗೊತ್ತಿಲ್ಲ. ಅವರು ನುಣಚಿಕೊಂಡುಬಿಡುತ್ತಾರೆ''

''ಅಯ್ಯೋ! ನಾನು ಹಿಡಿದುಬಿಟ್ಟರೆ ಜಡೀ ಹಿಡಿದ ಹಾಗೆ. ನಾನೆಲ್ಲಿ ಬಿಡುತ್ತೇನೆ. ನೀನು ಹೇಳಮ್ಮ"

ವಿಧಿಯೇ ಇಲ್ಲದೇ, ಭಾಗ್ಯಳು ಎರಡು ಕೀರ್ತನೆಗಳನ್ನು ಹೇಳಿದಳು. ಇಷ್ಟು ಬಲಾತ್ಕಾರದ ಮೇಲೆ ಹೇಳಿದವಳು ಅಲ್ಲಿಗೇ ಮುಗಿಸುತ್ತಾಳೆಂದುಕೊಂಡಿದ್ದರು. ಆದರೆ ಅವಳು ಅಲ್ಲಿಗೇ ನಿಲ್ಲಿಸಲಿಲ್ಲ. "ಎಂತನೇರ್ಚಿನಾ ಅಂತ ಕಾಂತ ದಾಸುಲೇ" ಎಂಬ ಕೀರ್ತನೆಯನ್ನು ಹೇಳಿ ಮುಗಿಸಿದಳು.

ಅದಾದ ಮೇಲೆ "ನನ್ನಿಂದ ಹೇಳಿಸಿದರಲ್ಲಾ. ಇನ್ನು ಅವರಿಂದಲೂ ಹೇಳಿಸಿರಿ. ದೇವರ ನಾಮಗಳನ್ನು ಕೇಳಿ ಪುಣ್ಯ ಕಟ್ಟಿಕೊಳ್ಳೋಣ" ಎಂದು ಹೇಳಿ ನಕ್ಕಳು ಭಾಗ್ಯ.

ವೆಂಕಟೇಶಯ್ಯನವರು ರಾಜಣ್ಣನನ್ನು ಎರಡು ದೇವರ ನಾಮಗಳನ್ನು ಹೇಳುವಂತೆ ಹೇಳಿದರು.

ಅವನು ಏನೂ ಮಾತನಾಡದೇ ಎದ್ದು ನಿಂತುಕೊಂಡ.

ಭಾಗ್ಯಳು "ನೋಡಿದಿರಾ. ನಾನು ಹೇಳಿದಂತೆಯೇ ಅವರು ತಪ್ಪಿಸಿಕೊಂಡು ಹೊರಟು ಬಿಡುತ್ತಿದ್ದಾರೆ'' ಎಂದಳು.

ಅಷ್ಟು ಹೊತ್ತಿಗಾಗಲೇ ಅವನ ಕೈ ಹಿಡಿದು ಕೂರಿಸುತ್ತಿದ್ದ ವೆಂಕಟೇಶಯ್ಯನವರು "ಏನಯ್ಯಾ. ಹೆಣ್ಣು ಹುಡುಗಿಯರಿಗಿಂತ ಸಂಕೋಚಪಡುತ್ತೀಯೆ. ಖಣೀರೆಂದು ಏನಾದರೂ ಹೇಳು" ಎಂದರು.

ಕುಳಿತುಕೊಂಡು ರಾಜಣ್ಣ ಹೇಳಿದ.

"ನನಗೆ ದೇವರ ನಾಮಗಳ ವಿನಾ ಮತ್ತೇನೂ ಬರುವುದಿಲ್ಲ"

ವೆಂಕಟೇಶಯ್ಯನವರು ಮಾತನಾಡುವ ಮೊದಲೇ ಭಾಗ್ಯಳು "ಪರವಾಯಿಲ್ಲ. ಅದನ್ನೇ ಹೇಳಿರಿ" ಎಂದಳು.

"ಮದುವೆಯ ಮನೆಯಲ್ಲಿ ಕೀರ್ತನೆಗಳನ್ನೋ ಹಾಡುಗಳನ್ನೋ ಹೇಳಬೇಕು. ಅದುಬಿಟ್ಟು ದೇವರ ನಾಮಗಳನ್ನು ಹೇಳಿದರೆ ಯಾರಾದರೂ ನಗುತ್ತಾರೆ"

"ಅವರಿಗೆ ಹಾಡುವುದಕ್ಕೆ ಬರುವುದು, ಅದೇ. ದಯವಿಟ್ಟು ನಗಬೇಡಿ-ಎಂದು ನಾನು ಎಲ್ಲರೊಂದಿಗೂ ಹೇಳಿಕೊಂಡು ಬರುತ್ತೇನೆ"

ರಾಜಣ್ಣ ಉಸುರೆತ್ತದೇ ಕುಳಿತುಬಿಟ್ಟ.

ಭಾಗ್ಯಳು ಅಲ್ಲಿಗೇ ಬಿಡದೇ "ಕಡೆಗೂ ಅವರು ತಪ್ಪಿಸಿಕೊಂಡು ಬಿಡುತ್ತಾರೆ, ವೆಂಕಟೇಶಯ್ಯನವರೇ. ನೀವು ಅವರಿಂದ ಹೇಳಿಸಲೇಬೇಕು" ಎಂದು ಒತ್ತಾಯ ಮಾಡಿದಳು

ವಯಸ್ಸಾಗಿದ್ದರೂ ಸಣ್ಣದೊಂದು ಕುಹಕವನ್ನು ಮಾಡಬೇಕೆಂದು ವೆಂಕಟೇಶಯ್ಯನವರಿಗೆ ಚಪಲವುಂಟಾಯಿತು.

"ಅವನಿಂದ ಹಾಡು ಹಾಡಿಸಲೇಬೇಕೆಂದು ನಿನಗೇಕಮ್ಮ ಅಷ್ಟೊಂದು ಹಟ"

ಆ ಪ್ರಶ್ನೆಯನ್ನು ಭಾಗ್ಯ ಸರ್ವೇಸಮಾನ್ಯವಾಗಿ ಭಾವಿಸಿದಳು.

"ಹಟವೇನೂ ಇಲ್ಲ. ಆ ದಿನ ರಾತ್ರಿ ನಮ್ಮ ಮನೆಯಲ್ಲಿ ಹೇಳಿಸಿದಿರಲ್ಲಾ. ಚೆನ್ನಾಗಿ ಹೇಳುತ್ತಾರೆ. ಪುನಃ ಕೇಳೋಣ ಅಂತ ಹೇಳಿದೆ. ಆದರೆ ಹೇಳಲೇ ಕೂಡದೆಂದು ಅವರಿಗೇಕೆ ಹಟ ?"

ವೆಂಕಟೇಶಯ್ಯನವರು "ಹೇಳು, ರಾಜಣ್ಣ. ಹೆಣ್ಣು ಹುಡುಗಿಯರೇ ಧೈರ್ಯವಾಗಿ ಹೇಳುವಾಗ ನೀನು ಸಂಕೋಚಪಡುವುದು ತರವಲ್ಲ. ರಾಜಾರೋಷಾಗಿ ಹೇಳು" ಎಂದರು.

"ಹೌದು. ರಾಜಾರೋಷವಾಗಿ ಹೇಳಿರಿ" ಎಂದು ಭಾಗ್ಯಳೂ ಸಮರ್ಥಿಸಿದಳು.

ಒತ್ತಾಯ ಹೆಚ್ಚಾಗಲು ರಾಜಣ್ಣ ಮೈಕ್‌ನ ಮುಂದೆ ಕುಳಿತುಕೊಂಡ. ಮೊದಲು ಏನೋ ಹೇಳುವುದಕ್ಕೆ ಹೊರಟಿದ್ದವನು "ರಾಯರು ಬಂದರು ಮಾವನ ಮನೆಗೆ" ಎಂಬ ಲಘು ಗೀತವನ್ನು ಹೇಳಲು ತೊಡಗಿದ. ಅನಂತರ ಮೈಸೂರು ಮಲ್ಲಿಗೆಯದೇ ಮತ್ತೊಂದು ಪದವನ್ನು ಹೇಳಿ ಮುಗಿಸಿದ.

ಮದುವೆಯ ಮನೆ, ರಾತ್ರಿಯ ಹೊತ್ತು, ನೆರೆದಿದ್ದ ಜನರ ಹಾಯಾದ ಮನೋಭಾವ ಇವೆಲ್ಲವೂ ರಾಜಣ್ಣ ಹೇಳಿದ ಹಾಡುಗಳಿಗೆ ಮತ್ತಷ್ಟು ಕಳೆ ಕಟ್ಟಿದ್ದವು. ಹುಡುಗರಿಗೆ ಅವು ತಮಾಷೆಯಾಗಿದ್ದವು. ಯುವಕ ಯುವತಿಯರಿಗೆ ಮನೋಹ್ಲಾದಕರವಾಗಿದ್ದವು. ವೃದ್ಧರಿಗೆ ಅವರ ತಾರುಣ್ಯದ ದಿನಗಳನ್ನು ನೆನಪುಮಾಡಿ ಕೊಡುತ್ತಿದ್ದವು.

ಎಲ್ಲರೂ ಮತ್ತಷ್ಟು ಹಾಡುಗಳನ್ನು ಹೇಳಬೇಕೆಂದು ಬಲಾತ್ಕಾರ ಮಾಡಿದರು. ವೆಂಕಟೇಶಯ್ಯನವರೂ ಬಲಾತ್ಕಾರ ಮಾಡಿದರು. ಬಜಾವಾಗಬೇಕಾದರೆ ರಾಜಣ್ಣ ಮತ್ತೆ ನಾಲ್ಕು ಪದಗಳನ್ನು ಹೇಳಬೇಕಾಯಿತು. ಮೊದಲು ಹೇಳಿದ "ರಾಯರು ಬಂದರು ಮಾವನ ಮನೆಗೆ" ಎಂಬ ಹಾಡನ್ನು ಪುನಃ ಒಂದು ಬಾರಿ ರಾಜಣ್ಣನಿಂದ ಹೇಳಿಸಿದರು.

೬

ಆ ರಾತ್ರಿ ರಾಜಣ್ಣ ಹೇಳಿದ್ದ ಹಾಡುಗಳು ಭಾಗ್ಯಳ ಮನಸ್ಸಿನ ಮೇಲೆ ವಿಪರೀತ ಪರಿಣಾಮವನ್ನು ಉಂಟುಮಾಡಿದವು.

ವರ ವರಾಹಗಳು ಬಂದು ತನ್ನನ್ನು ನೋಡಿಕೊಂಡು ಹೋಗುತ್ತಿದ್ದುದೂ, ಒಬ್ಬೊಬ್ಬರು ಒಂದೊಂದು ಮಾತನಾಡುತ್ತಿದ್ದುದೂ ಭಾಗ್ಯಳ ಮನಸ್ಸಿಗೆ ಬಹಳ ಬೇಜಾರು ಮಾಡಿದ್ದವು. ಅವಳನ್ನು ನೋಡಿದ ಯಾರೂ ಹುಡುಗಿಯು ಚೆನ್ನಾಗಿಲ್ಲವೆಂದಾಗಲೀ, ಅವಳು ಬೆಳ್ಳಗಿಲ್ಲವೆಂದಾಗಲೀ ಹೇಳುವುದು ಸಾಧ್ಯವೇ ಇರಲಿಲ್ಲ. ಆದರೂ ಎಷ್ಟೋ ವರಗಳು ಬಂದು ನೋಡಿಕೊಂಡು ಹೋದರೂ ಅವಳಿಗೆ ಇನ್ನೂ ಮದುವೆಯೇಕೆ ಆಗಿರಲಿಲ್ಲ ?

ಅದರ ಕಾರಣಗಳು ವಿಚಿತ್ರವಾಗಿದ್ದವು.

ಒಬ್ಬ ಭಾಗ್ಯಳನ್ನು ಬಂದು ನೋಡಿದ್ದ. ಒಪ್ಪಿಕೊಂಡೂ ಇದ್ದ. ಇನ್ನೇನು ಲಗ್ನಪತ್ರಿಕೆಯಾಗಿ ಬಿಡುವುದರಲ್ಲಿಯೇ ಅವನಿಗೆ ಮತ್ತೊಂದು ಹುಡುಗಿಯನ್ನು ತೋರಿಸಿದರು. ಆ ಹುಡುಗಿ ಓತೀಕೇತನಂತಿದ್ದಳು, ಎಂಟು ನೂರು ರೂಪಾಯಿಯವರೆವಿಗೆ ಸಂಬಳ ತೆಗೆದುಕೊಳ್ಳುವ ಇಂಜಿನಿಯರು ಅವಳನ್ನು ಯಾಕೆ ಮದುವೆ ಮಾಡಿಕೊಳ್ಳುತ್ತಾನೆ-ಎಂದುಕೊಂಡೇ ಇದ್ದರು. ಆದರೆ ಹಾಗೆಂದುಕೊಂಡಿದ್ದವರ ಎಣಿಕೆಗಳು ತಪ್ಪಾದುವು. ಅವಳ ರೂಪಕ್ಕಿಂತಲೂ ಅವಳೊಡನೆ ಬರುವ ಇಪ್ಪತ್ತು ಸಹಸ್ರ ರೂಪಾಯಿಗಳೇ ಪ್ರಾಮುಖ್ಯವಾದುದೆಂದು ಆ ವರಶ್ರೇಷ್ಠನಿಗೆ ತೋರಿತು.

ಮತ್ತೊಬ್ಬ ವರ ಬಂದು ಭಾಗ್ಯಳನ್ನು ನೋಡಿದ. ಅವನು "ಹುಡುಗಿ ಚೆನ್ನಾಗಿದ್ದಾಳೆ. ಆದರೂ ಮನಸ್ಸಿಗೇಕೋ ಅಷ್ಟು ಒಪ್ಪಲಿಲ್ಲ'' ಎಂದು ಹೇಳಿದ. ಭಾಗ್ಯ ಚೆನ್ನಾಗಿಲ್ಲವೆಂದು ಹೇಳಲು ಅವನಿಗೆ ಬಾಯಿ ಬರದಿದ್ದರೂ ಹುಡುಗಿ ಸಿನಿಮಾಸ್ಟಾರ್ ಹಾಗಿಲ್ಲವೆಂದು ಮನಸ್ಸು ಹೇಳುತಿತ್ತು. ವೈಜಯಂತಿಮಾಲೆಯೋ, ನೂತನಾ ಸಮರ್ಥಳೋ, ಮಧುಬಾಲೆಯೋ ಮದುವೆ ಮಾಡಿಕೊಳ್ಳಲು ತನಗೆ ಹೇಳಿಕಳುಹಿಸುತ್ತಾರೆಂದು ಅವನಿನ್ನೂ ಆಶೆ ಇಟ್ಟುಕೊಂಡಿದ್ದ.

ಮಗದೊಬ್ಬ ವರಾಹನದು ಇನ್ನೂ ವಿಚಿತ್ರ. ಅವನು ಭಾಗ್ಯಳನ್ನು ನೋಡಿಕೊಂಡು ಹೊರಗೆ ಹೋದಕೂಡಲೇ ತನ್ನವರೊಂದಿಗೆ "ಈ ಹುಡುಗಿ ನನಗೆ ಬೇಡ" ಎಂದು ಹೇಳಿದನಂತೆ. ಅವನಿಗೆ ರೂಪವತಿಯಾದ ಹೆಂಡತಿಯು ಬೇಡವೆಂದಿತ್ತು. "ಭಾರ್ಯಾ ರೂಪವತೀ ಶತ್ರುಃ" ಎಂದು ಯಾರೋ ಬುದ್ಧಿಯಿಲ್ಲದವರು ಹೇಳಿದ್ದನ್ನು ಕೇಳಿ ಅವನ ತಲೆ ಕೆಟ್ಟಿತ್ತು.

ಮಗಳು ಬೆಳ್ಳಗೆ ತಕ್ಕಮಟ್ಟಿಗಿದ್ದರೆ ಸಾಕು. ಹೇಗೋ ಮದುವೆಯಾಗುತ್ತದೆ—ಎಂದಿದ್ದ ಗುಂಡೂರಾಯರಿಗೆ "ಇದೊಂದು ಮದುವೆಯಾಗಿಬಿಟ್ಟರೆ ಸಾಕಪ್ಪ—" ಎನ್ನಿಸಿಬಿಟ್ಟಿತ್ತು.

ಇದನ್ನೆಲ್ಲಾ ನೋಡುತ್ತಿದ್ದ, ಅನುಭವಿಸುತ್ತಿದ್ದ ಭಾಗ್ಯಳಿಗೆ ಇದು ಮದುವೆ ಎಂಬುದಕ್ಕಿಂತಲೂ ಮಾರುಕಟ್ಟೆ ಎನ್ನುವುದೇ ಸರಿ ಎಂದು ತೋರಿತ್ತು.

ಅದರಿಂದ ಅವಳು ಮದುವೆಯ ವಿಷಯವಾಗಿ ತಾತ್ಸಾರದಿಂದ ಇದ್ದಳು. ಬಂದು ನೋಡುತ್ತಿದ್ದ ವರಗಳ ವಿಷಯವಾಗಿ ನಿರ್ಲಕ್ಷ್ಯದಿಂದ ಇರುತ್ತಿದ್ದಳು.

ಬರುಬರುತ್ತಾ ಅವಳ ಮನಸ್ಸಿನಲ್ಲಿ ಇನ್ನೂ ಹಲವಾರು ಬಗೆಯ ಭಾವನೆಗಳು ಮನೆ ಮಾಡಿಕೊಂಡವು.

ವೈವಾಹಿಕ ಜೀವನದಲ್ಲಿ ಗಂಡು ಹೆಣ್ಣುಗಳು ಸಮಾನಸ್ಕಂದರು. ಗಂಡಸರು ಮದುವೆಯೇ ಇಲ್ಲದೇ ಮೂವತ್ತು ನಲವತ್ತು ವರ್ಷವಾದರೂ ಲಕ್ಷ್ಯವೇ ಮಾಡದಿರುವಂತೆ ಹೆಂಗಸರೇಕೆ ಇರಬಾರದು ? ಎಷ್ಟೋ ಜನ ಗಂಡಸರು ಮದುವೆಯೇ ಇಲ್ಲದೇ ತಮ್ಮ ಜೀವನವನ್ನು ಕಳೆಯುವುದಿಲ್ಲವೇ ? ಹಾಗೆಯೇ ಹೆಂಗಸರೂ ಕೂಡಾ ಮದುವೆಯೇ ಇಲ್ಲದೇ ಜೀವನವನ್ನು ಕಳೆಯಬಾರದೇಕೆ ?

ಯಾಕೆ ಹಾಗೆ ಇರಬಾರದೆಂದು ಯಾರೂ ಭಾಗ್ಯಳಿಗೆ ಹೇಳಿರಲಿಲ್ಲ. ಅವಳೊಂದಿಗೆ ಚರ್ಚೆ ಮಾಡಿರಲಿಲ್ಲ. ಆದರೆ ಆ ಸಂಬಂಧವಾದ ವಿವಾದಗಳನ್ನು ತನ್ನ ಮನಸ್ಸಿನಲ್ಲಿಯೇ ಊಹಿಸಿಕೊಂಡು ಆಲೋಚಿಸುತ್ತಿದ್ದಳು.

ಯೋಚಿಸುವಾಗಲೆಲ್ಲಾ ಗಂಡಸರು ಹೇಗೆ ಮದುವೆಯಿಲ್ಲದೇ ಇರಬಹುದೋ ಹಾಗೆಯೇ ಹೆಂಗಸರೂ ಇರಬಹುದೆಂಬ ತೀರ್ಮಾನಕ್ಕೆ ಬರುತ್ತಿದ್ದಳು.

ಮಾತು ಬಂದಾಗ ಅವಳ ತಾಯಿ ವಿಶಾಲಾಕ್ಷಮ್ಮನವರು "ನೀನು ಹೇಳುವಂತೆ ಇರಬಹುದೋ ಏನೋ ? ಆದರೆ ಈ ಪ್ರಪಂಚದಲ್ಲಿ ಆ ರೀತಿ ಯಾರೂ ಇಲ್ಲ" ಎನ್ನುತ್ತಿದ್ದರು.

ಆಗ ಭಾಗ್ಯಳು "ಯಾರೂ ಇಲ್ಲದಿದ್ದರೇನಂತೆ ! ಹಾಗೆ ಹೆಂಗಸರು ಸ್ವತಂತ್ರ ಬಾಳುವೆ ಮಾಡುವುದನ್ನು ಯಾರಾದರೂ ಆರಂಭಿಸಬೇಕಷ್ಟೆ. ನಾನೇ ಅದನ್ನು ಆರಂಭಿಸುತ್ತೇನೆ. ಜೀವನ ಮಾಡಲು ಮದುವೆ ಮಾಡಿಕೊಳ್ಳಬೇಕೆಂಬ ನಿಯಮವೇನೂ ಇಲ್ಲ. ಏನೂ ಇಲ್ಲದಿದ್ದರೆ ಮೇಡಂ ಕೆಲಸವಾದರೂ ಸಿಕ್ಕುವುದಿಲ್ಲವೇ ? ಮೇಡಂ ಆಗುತ್ತೇನೆ" ಎಂದು ಹೇಳುತ್ತಿದ್ದಳು.

ಭಾಗ್ಯ ಹುಡುಗಿಯಾಗಿದ್ದಾಗ—ಎಂದರೆ ಏಳು ಎಂಟು ವರ್ಷದ ಹುಡುಗಿಯಾಗಿದ್ದಾಗ "ನಾನು ಮದುವೆ ಮಾಡಿಕೊಳ್ಳುವುದಿಲ್ಲ. ಮೇಡಂ ಆಗುತ್ತೇನೆ'' ಎಂದು ಹೇಳುತ್ತಿದ್ದಳು. ಈಗ ವಯಸ್ಸಾದ ಮೇಲೆ ಹೇಳುವ ಈ ಮಾತಿಗೂ ಅಷ್ಟೇ ಅರ್ಥವೆಂದುಕೊಳ್ಳುತ್ತಿದ್ದರು ವಿಶಾಲಾಕ್ಷಮ್ಮನವರು.

ಆದರೆ ಅದು ಮಗಳ ಕೃತನಿಶ್ಚಯವೆಂಬುದು ತಾಯಿಗೆ ತಿಳಿಯಲಿಲ್ಲ.

ಮದುವೆಗೆ ಇಷ್ಟು ವಿರೋಧವಿದ್ದರೂ ಭಾಗ್ಯಳು ವರಾಹಗಳು ಬಂದಾಗ ಎದುರಿಗೆ ಬಂದು ಕುಳಿತುಕೊಳ್ಳುತ್ತಿದ್ದಳು. ಅದಕ್ಕೆ ಕಾರಣ ತಾಯಿತಂದೆಗಳು ನೊಂದುಕೊಳ್ಳುತ್ತಾರೆಯಲ್ಲಾ-ಎಂದು ಮಾತ್ರ. ಮದುವೆಯಾಗಬೇಕೆಂಬ ಬಯಕೆಯಿಂದಲ್ಲ.

ಹೆಣ್ಣಿಗೇ ಆಗಲೀ, ಗಂಡಿಗೇ ಆಗಲೀ ವಿವಾಹದ ವಿಷಯದಲ್ಲಿ ಎಷ್ಟೇ ವಿರೋಧವಿದ್ದರೂ ಅವರುಗಳಿಗೆ ವೈವಾಹಿಕ ಜೀವನದ್ದೊಂದು ಆಸೆಯು ಒಳ ಮನಸ್ಸಿನಲ್ಲಿಯೇ ಅಡಗಿಕೊಂಡು ಕುಳಿತಿರುತ್ತದೆ. ತಮ್ಮ ಸಂಗಾತಿಗಳಾರೆಂಬುದು ಗೊತ್ತಿಲ್ಲದಿದ್ದರೂ ಒಂದಾನೊಂದು ವ್ಯಕ್ತಿಯನ್ನು ಮನಸ್ಸಿನಲ್ಲಿಯೇ ಚಿತ್ರಿಸಿಕೊಂಡು ಅದರೊಂದಿಗೆ ವಿವಹರಿಸುತ್ತಿದ್ದಾರೆ. ಆ ವಿಹಾರದ ಚಿತ್ರಗಳನ್ನು ಮನಸ್ಸಿನಲ್ಲಿಯೇ ತಂದುಕೊಂಡು ಸುಖಿಸುತ್ತಾರೆ. ಆ ಕನಸು ಮನಸಾಗಲೀ ಎಂದು ಹಾರೈಸುತ್ತಿರುತ್ತಾರೆ.

ಆಗಾಗ ಅಂತಹ ಆಶಾಚಿತ್ರಗಳು ಭಾಗ್ಯಳ ಭಾವಭಿತ್ತಿಯಲ್ಲಿಯೂ ಸುಳಿಯುತ್ತಿದ್ದವು. ಆದರೆ ಬಲೋದ್ಬಂಧವಾಗಿ ಅವಳವುಗಳನ್ನು ಒಳಗೇ ಅದುಮಿಡುತ್ತಿದ್ದಳು.

ಆ ದಿನ ರಾತ್ರಿ ರಾಜಣ್ಣ ಹಾಡಿದ ಹಾಡುಗಳು ಮೇಲಿಂದ ಮೇಲೆ ವೈವಾಹಿಕ ಜೀವನದ ರಸನಿಮಿಷಯುಗಳನ್ನು ಮೇಲಿಂದ ಮೇಲೆ ನೆನಪು ಮಾಡಿಕೊಡುತ್ತಿದ್ದವು. ಎಷ್ಟು ದಮನ ಮಾಡಿದರೂ ಅವುಗಳನ್ನು ಅದುಮಿಡಲಾಗದಂತಿತ್ತು.

ಮನುಷ್ಯ ಮಾಡುವ ಕೆಲಸಗಳು ತಪ್ಪಿರಬಹುದು, ಸರಿಯಿರಬಹುದು. ಆದರೆ ಅವೊಂದೂ ಮುಖ್ಯವಲ್ಲ. ಸೌಂದರ್ಯಕ್ಕೆ ಸಂಬಂಧಪಟ್ಟುದೆಲ್ಲವೂ ಸುಂದರವಾಗಿಯೇ ಕಾಣುವಂತೆ ಸುಖನಿಮಿಷಗಳನ್ನು ನೆನಪಿಗೆ ತರುವ ತಪ್ಪುಗಳು ಒಪ್ಪುಗಳಾಗಿಯೇ ಕಂಡುಬರುತ್ತವೆ. ಚೆಲುವೆಯಾದ ಹೆಣ್ಣಿನ ಮುಖದ ಮೇಲಿನ ತುಂಟು ನಗೆಯನ್ನು ಮತ್ತೆಮತ್ತೆ ನೋಡೋಣವೆಂದು ಆಸೆಯಾಗುವುದಿಲ್ಲವೇ ಹಾಗೆ.

ಗಂಡು ಅತ್ತೆಯ ಮನೆಗೆ ಬರುವುದರ ಸಂದರ್ಭವನ್ನು ಭಾಗ್ಯ ಮನಸ್ಸಿ

ನಲ್ಲಿಯೇ ಚಿತ್ರಿಸಿಕೊಂಡಳು. ಅವನು ಹೆಂಡತಿಯನ್ನು ಕಾಣುವುದಕ್ಕಾಗಿಯೇ ಬಲು ದೂರದಿಂದ ಬಂದಿದ್ದಾನೆ. ಇನ್ನೇನು ಮನದನ್ನೆಯು ಬಳಿಗೆ ಬರುತ್ತಾಳೆ ಎಂದವನು ನಿರೀಕ್ಷಿಸುತ್ತಿದ್ದಾಗ ಕಟ್ಟಕಡೆಯ ನಿಮಿಷದಲ್ಲಿ ಗೊತ್ತಾಗುತ್ತದೆ. ಅವಳು ಹೊರಗಾಗಿದ್ದಾಳೆಂದು. ಮನಸ್ಸು ಮುರಿದ ಗಂಡ್ಸ ಆ ಕ್ಷಣವೇ ಹೊರಟು ಹೋಗಬೇಕೆಂದು ತೀರ್ಮಾನಿಸುತ್ತಾನೆ. ಆದರೆ ರಾತ್ರಿ. ಹೋಗುವುದಕ್ಕಿಲ್ಲ. ಹೇಗೋ ಅಲ್ಲಿಯೇ ಕಳೆಯುತ್ತಾನೆ. ಮಾರನೆಯ ದಿನ ಬೆಳಗಾಗ ತಾನು ಹೋಗುತ್ತೇನೆಂದು ಹೇಳುವ ಹೊತ್ತಿಗೆ ಸರಿಯಾಗಿ ಸಾದಿನಿಯೋ, ಯಾರೋ ಬಂದು ಹೇಳುತ್ತಾರೆ ಅವನ ಪ್ರೇಯಸ್ಸಿಗೆ ನಿರಾಯಿತೆಂದು.

ಅಷ್ಟು ಆತುರದಲ್ಲಿ ಆ ಗಂಡು ಕೋಪ ಮಾಡಿಕೊಂಡುದು ತಪ್ಪಿರಬಹುದು. ಆದರೆ ಆ ತಪ್ಪು ಏತಕ್ಕಾಗಿ ? ಅದು ಅವನಿಗಿರುವ ಅತೀವ ಪ್ರೇಮದ ಪ್ರತೀಕ.

ಗಂಡಿಗಾಗುವ ಕ್ಷಣಿಕ ನಿರಾಸೆ, ಕೂಡಲೇ ಅದು ಸರಿಹೋಗುವುದು. ಆ ಆಸೆ ನಿರಾಸೆಗಳು ಎಷ್ಟು ಸುಂದರವಾದವುಗಳು. ಗಂಡನಿಗೆ ತನ್ನ ಮೇಲೆ ಎಷ್ಟು ಪ್ರೀತಿಯಿದೆ ಎಂದು ಹೆಂಡತಿಯು ಅರಿತುಕೊಳ್ಳುವುದಕ್ಕೆ ಅದೆಂತಹ ಅವಕಾಶ.

ಆ ಗಂಡು ಹೆಣ್ಣುಗಳು ವೃದ್ಧರಾದರೂ, ಜೀರ್ಣಕಾಯರಾದರೂ ಈ ಸವಿ ನೆನಪು ಅವರಿಗೆಷ್ಟು ಹುಮ್ಮಸ್ಸು ಕೊಡುತ್ತಿರುತ್ತದೆ ?

ಮತ್ತೊಂದು ಹಾಡೂ ಅಷ್ಟೇ ರಮ್ಯವಾದುದು. ಹುಡುಗಿಗೆ ತವರು ಮನೆಯಲ್ಲಿ ಹೂ ಮುಡಿಸುತ್ತಿರುತ್ತಾರೆ. ಎಲ್ಲರೂ ನೆರೆದಿದ್ದಾರೆ. ಅಂಗಳವೇ ತುಂಬಿಹೋಗಿರುತ್ತದೆ. ಆದರೆ ಹೆಣ್ಣಿಗೆ ಎಲ್ಲವೂ ಬಟ್ಟಬಯಲಾಗಿಯೂ, ಅಂಧಕಾರಮಯವಾಗಿಯೂ ಕಂಡುಬರುತ್ತದೆ.

ಅವಳ ಪ್ರಿಯತಮನು ಅಲ್ಲಿಲ್ಲ.

ಕವಿ ಎಷ್ಟು ಮಧುರವಾಗಿ ಆ ಹಾಡು ಕಟ್ಟಿದ್ದಾನೆ. ಗಂಡನ ವಿಷಯವನ್ನು ಹೆಂಡತಿಗೆ ಬಳೆಗಾರನಿಂದ ಹೇಳಿಸಿ ಅವಳ ಮನಸ್ಸಂತೋಷಪಡಿಸುತ್ತಾನೆ. ಬಟ್ಟಬಯಲಾಗಿ ಕಂಡ ಮನೆಯು ತುಂಬಿದಂತೆಯೂ, ಅಂಧಕಾರಮಯವಾಗಿ ಕಂಡುದು ಪ್ರಕಾಶಮಾನವಾಗಿ ಕಂಡುಬರುವಂತೆಯೂ ಮಾಡುತ್ತಾನೆ.

ಹಾಡುಗಳನ್ನು ಕವಿಯೇನೋ ಸುಂದರವಾಗಿಯೇ ಬರೆದಿದ್ದಾನೆ. ಹಾಗೆಯೇ ಅದನ್ನು ಹಾಡಿದ ರಾಜಣ್ಣನೂ ಮಧುರವಾಗಿಯೇ ಹಾಡಿದ. ಅವನ ಮನಸ್ಸಿನಲ್ಲಿಯೂ ಅಂತಹ ಆಶಾಕಲ್ಪನೆಗಳಿರಬೇಕು. ಆ ಭಾವಗಳು ಅವನನ್ನೂ ಆನಂದತುಂದಿಲವಾಗಿ ಮಾಡಿರಬೇಕು. ಇಲ್ಲದಿದ್ದರೆ ಹಾಡಿದುದು ಅಷ್ಟು ರಮ್ಯವಾಗುತ್ತಿರಲಿಲ್ಲ.

ಮಧುರವಾದ ರಾತ್ರಿಯಲ್ಲಿ ಹಾಡಿದ ಆ ಸುಂದರವಾದ ಹಾಡುಗಳನ್ನು ಭಾಗ್ಯಳು ಮರೆಯಲಾಗಲಿಲ್ಲ. ಮರೆಯುವುದೂ ಸಾಧ್ಯವಿರಲಿಲ್ಲ. ಆ ದಿನ ರಾತ್ರಿ ಬೆಂಗಳೂರಿನಲ್ಲಿಯೂ ರಾಜಣ್ಣ ಹಾಡಿದ್ದ. ಆದರೆ ಆ ಹಾಡುಗಳಿಗೆ ಈ ಹಾಡುಗಳಿಗೆ ಅಜಗಜಾಂತರ ವ್ಯತ್ಯಾಸ. ಅಂದಿನ ಹಾಡು ಎದುರಿಗೆ ಕುಳಿತಿದ್ದ ವ್ಯಕ್ತಿಯ ಬಾಯಿಂದ ಬರುತ್ತಿರುವಂತಿತ್ತು. ಇಂದೂ ಹಾಡಿದವನು ಅದೇ ವ್ಯಕ್ತಿ. ಆದರದು ಹಾಗಿರಲಿಲ್ಲ. ಆ ಸ್ವರವು ಒಂದು ಕಡೆಯಿಂದಲ್ಲ. ನಾನಾ ಕಡೆಗಳಿಂದ ಬಂದು ಕಿವಿಯಲ್ಲಿ ತುಂಬಿಕೊಳ್ಳುವಂತಿದ್ದಿತು. ಒಂದು ಜೇನು ನೊಣವು ಜೀಯೆಂದು ಶಬ್ದ ಮಾಡಿದಂತೆ ಇರಲಿಲ್ಲ. ಮಧುವನ್ನು ಹೊತ್ತು ತಂದ ನೂರಾರು, ಸಾವಿರಾರು ಜೇನುಗಳು ತಂಬೂರಿಯ ಶೃತಿಯಂತೆ ದನಿಮಾಡುತ್ತಾ ನಾನೆಲ್ಲಿ ನುಗ್ಗಲಿ, ನಾನೆಲ್ಲಿ ನುಗ್ಗಲಿ ಎಂದು ಸುಳಿದಾಡುತ್ತಿರುವಂತೆ ಭಾಸವಾಗಿತ್ತು. ಅವಳು ಕೋಣೆಯಲ್ಲಿ ಕುಳಿತಿದ್ದರೂ ಚಾವಣಿಯಿಲ್ಲದ ಅಂಗಳದಲ್ಲಿರುವಂತೆ ತೋರಿತ್ತು. ತಾನು ಹಾಲಿನಂತೆ ಚೆಲ್ಲಿರುವ ಬೆಳದಿಂಗಳಿನಲ್ಲಿ ಕುಳಿತಿರುವಂತೆಯೂ, ಶುಭ್ರಾಕಾಶದಲ್ಲಿ ಮಿನುಗುಟ್ಟುತ್ತಿರುವ ಚುಕ್ಕೆಗಳಿಂದ ಆ ನಾದವು ಬರುತ್ತಿರುವಂತೆಯೂ ಬೋಧೆಯಾಗಿತ್ತು.

ಅದನ್ನು ಮರೆಯಲಾಗುವುದಿಲ್ಲ. ಇಲ್ಲ. ಆ ರಾತ್ರಿ ಅಮರ. ಆ ಭಾವಗಳು ಅಜರಾಮರ.

ಅಷ್ಟೇ ಅಲ್ಲ. ಆ ಹಾಡುಗಳು ನೆನಪಿಗೆ ಬರುತ್ತಿದ್ದುದ್ದಷ್ಟೇ ಅಲ್ಲ. ಅವು ಹಿಂದೆ ಎಷ್ಟೋ ಕಾಲದಿಂದ ಮನಸ್ಸಿನಲ್ಲಿಯೇ ಹುದುಗಿದ್ದ ವಿವಿಧ ಭಾವಗಗಳನ್ನು ಹೊರಗೆ ತರುತ್ತಿದ್ದವು. ಮನಸ್ಸಿನಲ್ಲಿ ಅಡಗಿದ್ದ ಸುಪ್ತ ಬಯಕೆಗಳನ್ನು ರೊಚ್ಚಿಗೆಬ್ಬಿಸುತ್ತಿದ್ದವು.

ಅದಾದನಂತರ ರಾಜಣ್ಣನ ವಿಷಯದಲ್ಲಿ ಶಿಥಿಲವಾಗಿ ಹೋಗಿದ್ದ ನಾಚಿಕೆ, ಸಂಕೋಚಗಳು ಪುನಃ ಚಿಗುರಲಾರಂಭಿಸಿದವು,

ಆದರೆ ಅವನಿಂದ ದೂರವಿರಲು ಆ ಸನ್ನಿವೇಶ ವಾತಾವರಣಗಳಲ್ಲಿ ಸಾಧ್ಯವಿರಲಿಲ್ಲ.

ಭಾಗ್ಯಳ ಆ ಸ್ಥಿತಿಯು ವಿಚಿತ್ರವಾದುದು.

ಅವನು ಕಾಣದಾದರೆ ಕಣ್ಣುಗಳು ಅವನಿಗಾಗಿ ಹುಡುಕುತ್ತವೆ. ಎಲ್ಲಿ ಹೋದನೋ ಎಂದು ಮನಸ್ಸು ಪತರಗುಟ್ಟುತ್ತದೆ. ಸನಿಯದಲ್ಲಿ ಓಡಿಯಾಡುತ್ತಿದ್ದರೆ ಸಮೀಪಕ್ಕೆ ಹೋಗದಂತೆ ಯಾವುದೋ ಸಂಕೋಚವು ಹಿಡಿದಿಡುತ್ತದೆ. ಏನಾದರೂ ಕೊಡುವಾಗಲೋ ಅಥವಾ ತೆಗೆದುಕೊಳ್ಳುವಾಗಲೋ ಅಕಸ್ಮಾತ್ ಅವನ ಕೈ ಸ್ಪರ್ಶವಾದರೆ, ಇಲ್ಲ, ಸಡಗರದಿಂದ ಓಡಿಯಾಡುವಾಗ ಅಕಸ್ಮಾತ್ ಅವನ ಸ್ಪರ್ಶವಾದರೆ ಮುಖವೆಲ್ಲಾ ಕೆಂಪಗಾಗುತ್ತದೆ. ಮೈ ಉಬ್ಬಿಕೊಂಡು ಬಂದು ಇನ್ನೇನು ಬಿರಿದು ಹೋಗುತ್ತದೆಯೋ ಎಂದು ಭಾಸವಾಗುತ್ತದೆ.

ಬಳಿಯಲ್ಲಿ ಅವನಿಲ್ಲದಿರುವುದೂ ಇರುವುದೂ ಎರಡೂ ಒಂದೊಂದು ಬಗೆಯಲ್ಲಿ ಪ್ರಿಯವಾಗಿರುತ್ತದೆ. ಅವನ ಸ್ಮೃತಿ ಸನಿಯಗಳೆರಡೂ ಪ್ರಿಯವಾಗಿರುತ್ತವೆ.

ಹಾಗೆ ಭಾಗ್ಯ ಈ ಸುಖ ಸ್ವಪ್ನದಲ್ಲಿ ಮದುವೆಯ ಕಡೆಯದೆರಡು ದಿನಗಳನ್ನೂ ಆ ಮೇಲೆ ಎರಡು ದಿನಗಳನ್ನೂ ಕಳೆದಳು.

## ೭

ಧಾರೆ ಆರತಕ್ಷತೆಗಳಾದ ಮೂರನೆಯ ದಿನವೇ ಬಂದಿದ್ದವರು ಒಬ್ಬೊಬ್ಬರಾಗಿ ಹೊರಡಲು ಅನುವಾದರು. ಮದುವೆ ಮುಗಿದ ಎರಡು ದಿನಗಳಲ್ಲಿ ಎಲ್ಲರೂ ಹೊರಟು ಹೋಗಿ ಅತ್ಯಂತ ಆಪ್ತೇಷ್ಟರುಗಳು ಮಾತ್ರ ಉಳಿದರು.

ಅವರುಗಳೂ ಸಹ ಹೊರಟು ಹೋಗಲು ಇಷ್ಟವುಳ್ಳವರಾಗಿದ್ದರು. ವೆಂಕಟೇಶಯ್ಯನವರ ಒತ್ತಾಯವಿಲ್ಲದಿದ್ದರೆ ಅವರುಗಳು ನಿಲ್ಲುತ್ತಿರಲಿಲ್ಲ.

ಎಲ್ಲರೂ ಹೊರಟು ಹೋದರೂ ಗುಂಡೂರಾಯರು ಹೊರಟು ಹೋಗುವುದು ಸಾಧ್ಯವಾಗಲಿಲ್ಲ. "ನಾನು ಹೋಗುತ್ತೇನೆಂ"ದು ಅವರು ವೆಂಕಟೇಶಯ್ಯನವರೊಡನೆ ಹೇಳುವುದು ಸಹ ಕಷ್ಟವಾಗಿತ್ತು.

ಬೀಗರೂ ಹೊರಟು ಹೋಗಿ, ಮದುವೆಯ ಗಲಾಟೆಗಳೆಲ್ಲವೂ ಅಡಗಿದ ಮೇಲೆ, ಒಂದು ದಿನ ಗುಂಡೂರಾಯರು ಲೋಕಾಭಿರಾಮವಾಗಿ "ನನಗೂ ಮನೆ ಮಠಗಳಿವೆ. ನಾನೂ ಊರಿಗೆ ಹೋಗಬೇಕಯ್ಯ'' ಎಂದರು.

''ಮನೆ ಮಠಗಳಿವೆ, ನೀನೂ ಊರಿಗೆ ಹೋಗಬೇಕು, ಒಪ್ಪಿಕೊಳ್ಳುತ್ತೀನೆ. ಆದರೆ ಈಗ ನಿನಗೆ ಊರಿಗೆ ಹೋಗಲೇಬೇಕಾದ ಪ್ರಾಮುಖ್ಯವಾದ ಕೆಲಸವೇನಿದೆ ? ನಿನಗೇನು ಕಚೇರಿಯೇ, ಕೊತ್ವಾಲಿಯೇ''

"ಅದೇನು ಇಲ್ಲ ಎನ್ನು. ಆದರೂ ಭಾಗ್ಯ ಕಾಲೇಜಿಗೆ ಹೋಗುವ ಏರ್ಪಾಟು ಮಾಡಬೇಡವೇ ? ಅವಳು ಸಂಗೀತದ ಪರೀಕ್ಷೆಗೆ ಬೇರೇ ಕಟ್ಟಿದ್ದಾಳೆ. ಸ್ವಲ್ಪ ಅಭ್ಯಾಸ ಮಾಡಬೇಡವೇ ?''

"ಸರಿಯಪ್ಪ. ಈ ವಾರದಲ್ಲಿ ನಿನ್ನನ್ನು ಕಳಿಸಿಕೊಟ್ಟರಾಯಿತೋ ಇಲ್ಲವೋ"

''ಇದೇನಯ್ಯ ಹುಡುಗನ ಹಾಗೆ ಮಾತನಾಡುತ್ತೀಯೇ ? ಮನೆಗೆ ಬೀಗ ಹಾಕಿಕೊಂಡು ಬಂದು ಹದಿನೈದು ದಿನವಾಯಿತು. ಇನ್ನೂ ಹೊರಡದೇ ಇದ್ದರೆ ಹೇಗಪ್ಪ"

ಅದು ವೆಂಕಟೇಶಯ್ಯನವರ ಮನಸ್ಸಿಗೆ ತಟ್ಟಿತು. ಆದರಿಂದ ಅದಕ್ಕೆ ಏನೂ ಹೇಳದೇ ಸುಮ್ಮನಾದರು. ಅದೇ ಸಮಯದಲ್ಲಿ ಗುಂಡೂರಾಯರು ಮತ್ತಷ್ಟು ಒತ್ತಾಯ ಮಾಡಿ ಮಾರನೆಯ ದಿನ ಪ್ರಯಾಣ ಮಾಡುವುದೆಂದು ಗೊತ್ತು ಮಾಡಿಕೊಂಡರು.।

ಆಗ ನಡುವೆ ಭಾಗ್ಯ ''ಹೊರಡುವ ಮೊದಲು ಸಾವನದುರ್ಗವನ್ನು ನೋಡಿಕೊಂಡು ಹೋಗಬೇಕಪ್ಪ'' ಎಂದಳು.

ಏನೋ ಒಂದು ಮಾರ್ಗದಲ್ಲಿ ವೆಂಕಟೇಶಯ್ಯನನ್ನು ಒಪ್ಪಿಸಿಕೊಂಡಿದ್ದಾರೆ. ಅಷ್ಟರಲ್ಲಿ ಮಗಳೊಂದು ಹೇಳುತ್ತಾಳೆಯಲ್ಲಾ ಎನ್ನಿಸಿತು ಗುಂಡೂರಾಯರಿಗೆ.

"ಅದನ್ನೇನೇ ನೋಡುವುದು. ಹಳೆಯ ಕಾಲದ ಮಣ್ಣು ಕೋಟೆಯನ್ನು''

ವೆಂಕಟೇಶಯ್ಯನವರು ''ನಮ್ಮೂರಿನ ಕೋಟೆಯನ್ನು ಅಷ್ಟು ತಾತ್ಸಾರ ಮಾಡಬೇಡಪ್ಪ. ಕೆಳಗೆ ಮಣ್ಣಿನ ಗೋಡೆಗಳು ಕಂಡರೂ ಭರ್ಜರಿ ಕೋಟೆ'' ಎಂದರು.

"ಸರಿಯಪ್ಪ. ಭರ್ಜರೀ ಕೋಟೆಯೇ. ಏಳು ಸುತ್ತಿನ ಕೋಟೆ. ಇಂತಹ ಕೋಟೆ ಈ ಪ್ರಪಂಚದಲ್ಲಿ ಎಲ್ಲಿಯೂ ಇಲ್ಲ. ಒಪ್ಪಿಕೊಳ್ಳುತ್ತೇನೆ" ಎಂದು ವ್ಯಂಗವಾಗಿ ಹೇಳಿ, ಮಗಳನ್ನು ಕುರಿತು "ಅದನ್ನೇನು ನೋಡುವುದು ಭಾಗ್ಯ. ನಮ್ಮ ಬೆಂಗಳೂರಿನಲ್ಲಿ ಮಾರ್ಕೆಟ್ಟಿಗೆ ಹೋಗುತ್ತಾ ಕೋಟೆಯಿಲ್ಲವೇ ಹಾಗೆ. ಅಲ್ಲಿ ಒಂದು ಸುತ್ತು ಕೋಟೆ ಬತ್ತೇರಿಗಳು ಕಾಣುತ್ತವೆ. ಇಲ್ಲಿ ಅದೇ ದೊಡ್ಡ ಆಕಾರದಲ್ಲಿರಬಹುದು. ಬೇಕಾದರೆ ಒಂದು ದಿನ ಕರೆದುಕೊಂಡು ಹೋಗಿ ಅದನ್ನು ತೋರಿಸಿಕೊಂಡು ಬರುತ್ತೇನೆ" ಎಂದರು.

ಸಾವನದುರ್ಗವನ್ನು ನೋಡಿಕೊಂಡೇ ಹೋಗಬೇಕೆಂಬ ಅಭಿಮತವು ಭಾಗ್ಯಳಿಗೆ ಬಲವಾಗಿತ್ತು. ಆದರೆ ತಂದೆ ಊರಿಗೆ ಹೊರಟೇಬಿಡಬೇಕೆಂದು ಒತ್ತಾಯ ಮಾಡುತ್ತಿರುವಾಗ ಎದುರು ಹೇಳಲು ಅವಳಿಗೆ ಧೈರ್ಯವಾಗಲಿಲ್ಲ.

ಅವಳ ಮನಸ್ಸಿನಲ್ಲಿದ್ದದ್ದನ್ನು ವೆಂಕಟೇಶಯ್ಯನವರೇ ಹೇಳಿದರು

"ಒಂದು ದಿನದಲ್ಲಿ ನಿನಗೆ ಮುಳುಗಿ ಹೋಗುವುದೇನು ? ನಾಳೆ ಹೋಗುವುದು ನಾಡಿದ್ದು ಹೋಗುವುದು"

"ಆಗಲೇ ಹೇಳಿದೆನಲ್ಲಯ್ಯ. ಮನೆಗೆ ಬೀಗ ಹಾಕಿ ಹದಿನೈದು ದಿನಗಳಾದುವೆಂದು. ಬೀಗ ಹಾಗೇ ಇದೆಯೋ ಯಾರಾದರೂ ಒಡೆದು ಹಾಕಿದ್ದಾರೆಯೋ ಹೋಗಿ ನೋಡಬೇಡವೆ ?"

ವೆಂಕಟೇಶಯ್ಯ ತಾವೇ ಗೆಲ್ಲುತ್ತೇವೆಂಬ ಭಾವದಿಂದ ನಗುತ್ತಾ "ಆಗಲಪ್ಪ. ನೀನೂ ನಿನ್ನ ಹೆಂಡತಿಯೂ ನಾಳೆ ದಿನ ಬೆಳಗಾಗಿನ ಬಸ್ಸಿಗೇ ಪ್ರಯಾಣಮಾಡಿ. ಈ ದಿನ ಸಾಯಂಕಾಲವೇ ಎರಡು ಸೀಟುಗಳಿಗೆ ಬೇಕಾದರೆ ಹೇಳಿ ಬರುತ್ತೇನೆ. ಭಾಗ್ಯ ಇಲ್ಲಿಯೇ ಇರಲಿ. ನಾನು ಸಾವನದುರ್ಗವನ್ನು ತೋರಿಸಿಕೊಂಡು ಅವಳನ್ನು ಬೆಂಗಳೂರಿಗೆ ತಂದು ಬಿಟ್ಟು ಹೋಗುತ್ತೇನೆ. ಸರಿಯೇ ?" ಎಂದರು.

ಮಗಳನ್ನು ವೆಂಕಟೇಶಯ್ಯನವರ ಮನೆಯಲ್ಲಿ ಬಿಟ್ಟು ಹೋಗುವುದಕ್ಕೆ ಅವರಿಗಾವ ಬಗೆಯ ಅಭ್ಯಂತರವೂ ಇರಲಿಲ್ಲ. ಆದರೆ ಬಿಟ್ಟುಹೋಗುವುದು ಎಂದಾಗ ತಮ್ಮದೇನೋ ಕೊರತೆಯಾದಂತೆ ಆತನ ಮನಸ್ಸಿಗೆ ತೋರಿತು.

"ಸರಿಯಪ್ಪ. ನಿನ್ನ ಹಟವೇ ಗೆಲ್ಲಲಿ. ನಾವು ನಾಡಿದ್ದು ಬೆಳಗಾಗ ಪ್ರಯಾಣ ಮಾಡುತ್ತೇವೆ"

"ಹಾಗೆ ದಾರಿಗೆ ಬಾ"

ಮಾರನೆಯ ದಿನ ಬೆಳಗಾಗ ಎಲ್ಲರೂ ಸಾವನದುರ್ಗಕ್ಕೆ ಹೋಗಿ ಬರುವುದೆಂದೂ ಅದಾದನಂತರ ಬೆಂಗಳೂರಿಗೆ ಗುಂಡೂರಾಯರು ಪ್ರಯಾಣ ಮಾಡುವುದೆಂದೂ ಗೊತ್ತಾಯಿತು.

ಕಾಫೀ ತಿಂಡಿಗಳನ್ನು ಮುಗಿಸಿಕೊಂಡು ಮಾರನೆಯ ದಿನ ಬೆಳಗಾಗ ಎಲ್ಲರೂ ಸಾವನದುರ್ಗಕ್ಕೆ ಹೊರಟರು.

ಎಲ್ಲರೂ ಎಂದರೆ ಹೊರಟವರೇನು ವಿಪರೀತವಾಗಿರಲಿಲ್ಲ. ವೆಂಕಟೇಶಯ್ಯನವರು, ಗುಂಡೂರಾಯರು. ವಿಶಾಲಾಕ್ಷಮ್ಮ, ಜಯ, ಭಾಗ್ಯ. ಇವರುಗಳು ಹೊರಟರು. ವಿಶಾಲಾಕ್ಷಮ್ಮ ಜಯಳ ತಾಯಿ ಸೀತಮ್ಮನವರನ್ನು ಕರೆದರು. ಆದರೆ ಬರುವ ವೇಳೆಗೆ ಎಲ್ಲರಿಗೂ ಅಡಿಗೆ ಮಾಡಬೇಕಾಗಿದ್ದುದರಿಂದ ಆಕೆ ಹೋಗಲಿಲ್ಲ.

ಮನೆ ಬಿಟ್ಟು ಅಷ್ಟು ದೂರ ಹೋದ ಮೇಲೆ ಗುಂಡೂರಾಯರು "ಸೋಮಶೇಖರ ಇದ್ದಿದ್ದರೆ ಚೆನ್ನಾಗಿದ್ದಿತಲ್ಲವೇ?" ಎಂದರು

ವೆಂಕಟೇಶಯ್ಯನವರು "ಚೆನ್ನಾಗಿತ್ತು. ಯಾವಾಗಲೂ ನೀನು ಮಾಡುವುದು ಹೀಗೆಯೇ. ಸ್ವಲ್ಪ ಮೊದಲೇ ಹೇಳಿದ್ದರೆ ಅವನಿಗೆ ಹೇಳಿ ಗೊತ್ತು ಮಾಡಿಕೊಳ್ಳಬೇಕಾಗಿತ್ತು. ನಿನ್ನೆಯ ದಿನ ಸಾಯಂಕಾಲವೇ ವಿಚಾರಿಸಿದೆ. ಅವನು ಊರಿನಲ್ಲಿರಲಿಲ್ಲ. ಬೆಂಗಳೂರಿಗೆ ಹೋಗಿದ್ದಾನೆ" ಎಂದರು.

"ಹೋಗಬೇಕೆಂಬುದು ಮೊದಲು ಗೊತ್ತಾಗಿರಲಿಲ್ಲವಲ್ಲ. ಸೋಮಶೇಖರ ಇದ್ದಿದ್ದರೆ ನೋಡಬೇಕಾದುದನ್ನೆಲ್ಲಾ ಸರಿಯಾಗಿ ತೋರಿಸುತ್ತಿದ್ದ ಎಂದುಕೊಂಡೆ. ಇಷ್ಟಕ್ಕೂ ನಾವು ಸಾಯುವವರು ಅದನ್ನು ನೋಡಿ ಆಗಬೇಕಾದುದೇನಿದೆ? ಹುಡುಗಿ ಆಸೆಪಡುತ್ತಾಳೆಯಲ್ಲಾ ಎಂದು ತೋರಿಸಲು ಕರೆದುಕೊಂಡು ಬಂದೆವು. ಅವಳಿಗೂ ನೋಡಿದ ಆಸೆ ತೀರುತ್ತದೆಯಲ್ಲ, ಅಷ್ಟೇ ಸಾಕು"

"ಅವನಿಲ್ಲವೆಂದು ನೀನು ಯೋಚನೆ ಮಾಡಬೇಕಾಗಿಲ್ಲಪ್ಪ. ನಮ್ಮ ರಾಜಣ್ಣ ಇದ್ದಾನೆಯಲ್ಲಾ. ಅವನು ಎಲ್ಲವನ್ನೂ ತೋರಿಸುತ್ತಾನೆ. ಇವನು ಸೋಮಶೇಖರನೊಡನೆ ಎಂಟು ಹತ್ತು ದಿನಗಳು ಓಡಿಯಾಡಿ ಎಲ್ಲವನ್ನೂ ತಿಳಿದುಕೊಂಡಿದ್ದಾನೆ"

"ಸಾಕು ಸಾಕು, ನಡಿ ಎಷ್ಟು ನೋಡಬೇಕು"

ಮಾಗಡಿಯಿಂದ ಸಾವನದುರ್ಗಕ್ಕೆ ನಾಲ್ಕೈದು ಮೈಲಿಗಳ ದೂರ. ಸುಮಾರು ಮೂರು ಮೈಲಿಗಳಷ್ಟು ಸರಿಯಾದ ರಸ್ತೆ. ಅನಂತರ ಕಾಡು ರಸ್ತೆ. ಹೆಬ್ಬಾವಿನಂತೆ ಸುತ್ತಿಕೊಂಡು ಮಲಗಿದ್ದ ಕೋಟೆಯ ಗೋಡೆಗಳು ದೂರದಿಂದಲೇ ಕಂಡುಬರುತ್ತಿದ್ದವು.

ಸಮೀಪಕ್ಕೆ ಹೋದ ಹಾಗೆಲ್ಲಾ ಕಾಡು ದಟ್ಟವಾಗುತಿತ್ತು. ಮಾರ್ಗವು ಅಷ್ಟೇ. ಕಲ್ಲು ಮುಳ್ಳುಗಳಿಂದ ಕೂಡಿತ್ತು. ಆದರೆ ಬಗೆಬಗೆಯ ಉದ್ದೇಶ ಗಳಿಗಾಗಿ ಜನರು ಹೋಗಿ ಬರುತ್ತಾ ಇದ್ದುದರಿಂದ ಹೋಗಲು ಅಸಾಧ್ಯವಾ ಗುವಂತೇನೂ ಆ ರಸ್ತೆ ಅಗಮ್ಯವಾಗಿರಲಿಲ್ಲ.

ಕೆಳಗಡೆ ಮಣ್ಣಿನ ಗೋಡೆಗಳೂ ಮೇಲೆ ದುರ್ಗವುವಾದ ಕೋಟೆಯೂ ಕಂಡನಂತರ ಗುಂಡೂರಾಯರು ಕೆಂಪೇಗೌಡನು ಕಟ್ಟಿದ ಕೋಟೆಯೇನೋ ಇದು" ಎಂದರು.

ರಾಜಣ್ಣನು "ಇಲ್ಲ. ಈ ಕೋಟೆಯನ್ನು ಪ್ರಥಮಶಃ ಕಟ್ಟಿದವನು ಕೆಂಪೇಗೌಡನಲ್ಲ. ಅವನು ಬಂದು ಇದನ್ನು ಆಕ್ರಮಿಸಿದ" ಎಂದ.

ಕೋಟೆ ಕೆಂಪೇಗೌಡನದೇ ಎಂದು ಗುಂಡೂರಾಯರ ಭಾವನೆ.

"ಇದು ಕೆಂಪೇಗೌಡನೇ ಕಟ್ಟಿದನೆಂದು ಕೇಳಿದ್ದೇನೆ"

"ಹೌದು. ಜನರಲ್ಲಿರುವ ಪ್ರತೀತಿಯು ಅದೇ. ಆದರೆ ಇದನ್ನು ಕಟ್ಟಿದ ವನು ಅವನಲ್ಲ. ವಿಜಯನಗರದ ಚಕ್ರವರ್ತಿಗಳು ತಮ್ಮ ಅಧಿಕಾರಿಯಾದ ಸಾವಂತರಾಯನನ್ನು ಈ ಭಾಗದ ಆಡಳಿತಕ್ಕೆ ಇಟ್ಟರು. ಅವನೇ ಇದನ್ನು ಕಟ್ಟಿದವನೆಂದು ಹೇಳುತ್ತಾರೆ. ಅದರಿಂದಲೇ ಇದಕ್ಕೆ ಸಾವಂತನ ದುರ್ಗ ವೆಂದು ಹೆಸರು ಬಂದಿತು"

"ಮತ್ತೆ ಕೆಂಪೇಗೌಡನ ಹೆಸರು ಬರಲು ಕಾರಣ"

"ಆ ಮೇಲೆ ಬೆಂಗಳೂರಿನ ಇಮ್ಮಡಿ ಕೆಂಪೇಗೌಡನು ಬಂದು ಆಕ್ರ ಸಿದ. ಕಡೆಯವರೆವಿಗೆ ಅವನೂ ಅವನ ವಂಶಜರೂ ಇಲ್ಲಿಯೇ ಇದ್ದುದರಿಂದ ಅವನ ಹೆಸರೇ ಬಂದುಬಿಟ್ಟಿತು. ಅದೂ ಅಲ್ಲದೇ ಸಾವಂತನ ದುರ್ಗವೆಂದು ಹೆಸರಿದ್ದುದನ್ನು ಸಾವನದುರ್ಗವೆಂದು ಬದಲಾಯಿಸಿದವನೂ ಅವನೇ"

ದುರ್ಗದ ಸಮೀಪಕ್ಕೆ ಹೋದವರೇ ವಿಶಾಲಾಕ್ಷಮ್ಮನವರು ಕಾಲು

ನೋಯುತ್ತದೆಂದು ಕುಳಿತುಕೊಂಡುಬಿಟ್ಟರು.

ಗುಂಡೂರಾಯರು "ನಾವು ತಿಂಡೀ ತಿಂದುಕೊಂಡು ಬಂದುದು ಒಳ್ಳೆಯದಾಯಿಪ್ಪ. ಇಲ್ಲದಿದ್ದರೆ ಹಸಿವಿನಿಂದ ಪ್ರಾಣ ಹೋಗುವಂತಾಗುತಿತ್ತು" ಎಂದರು.

ಬುಡದಿಂದ ಮೇಲೆ ಹತ್ತಿ ಹೋಗುವುದಕ್ಕೆ ದಾರಿಯಿದ್ದಿತು. ಎಲ್ಲರೂ ಆ ದಾರಿಯಲ್ಲಿ ಹೊರಟರು,

ಗುಂಡೂರಾಯರು "ಇದನ್ನು ಏನೋ ಎಂದಿದ್ದೆನಪ್ಪಾ. ಈ ಬಂಡೆಯು ಇನ್ನೂ ಎಷ್ಟು ಬೆಳೆದು ನಿಂತಿದೆಯೋ? ಇನ್ನು ಹತ್ತುವುದು ನನ್ನಿಂದಾಗುವುದಿಲ್ಲಪ್ಪ" ಎನ್ನುತ್ತಾ ವೆಂಕಟೇಶಯ್ಯನವರನ್ನು ಕುರಿತು ಹೇಳಿದರು.

ರಾಜಣ್ಣ "ಇದು ಚಾಮುಂಡೀ ಬೆಟ್ಟ, ನಂದೀ ಬೆಟ್ಟಗಳಂತೆ ಇಲ್ಲ. ಅಲ್ಲಿ ಕಲ್ಲುಗಳೊಡನೆ ವಿಪುಲವಾಗಿ ಮಣ್ಣು ಬೆರೆತಿದೆ. ಒಂದು ವಿಧವಾಗಿ ನೋಡಿದರೆ ಅವುಗಳನ್ನು ಗುಡ್ಡಗಳೆಂದು ಹೇಳಬಹುದು. ಆದರೆ ಇದು ಹಾಗಲ್ಲ. ಬೃಹದಾಕಾರವಾಗಿ ಬೆಳೆದು ನಿಂತಿರುವ ಬಂಡೆ ಕಲ್ಲು. ಅದರ ಮೇಲೆ ಕೋಟೆಯನ್ನು ಕಟ್ಟಿದೆ" ಎಂದು ಹೇಳಿದ.

ಅವರು ಅದುವರೆವಿಗೆ ಮಣ್ಣು ಗೋಡೆಯು ಮುಗಿಯುವವರೆವಿಗೆ ಬಂದಿದ್ದರು. ಮುದುಕರುಗಳು ಅಲ್ಲಿ ಕುಳಿತುಬಿಟ್ಟರು.

ವಿಶಾಲಾಕ್ಷಮ್ಮನವರು "ನೀವು ಹುಡುಗರು. ಬೇಕಾದರೆ ಹೋಗಿ ಬನ್ನೀಪ್ಪ. ನಾವು ಇಲ್ಲಿ ಕುಳಿತಿರುತ್ತೇವೆ" ಎಂದರು.

ಜಯು, ಭಾಗ್ಯ, ರಾಜಣ್ಣ ಮೂರು ಮಂದಿಯೂ ಮುಂದೆ ಹೋದರು. ಆದರೆ ಅವರು ಬಹಳ ಮುಂದೆ ಹೋಗುವುದಕ್ಕಾಗಲೀ ದುರ್ಗದ ಮೇಲೆಲ್ಲಾ ಓಡಿಯಾಡುವುದಕ್ಕಾಗಲೀ ಆಗಲಿಲ್ಲ ಸ್ವಲ್ಪ ದೂರ ಹೋಗಿ ಸುಮಾರು ಅರ್ಧ ಗಂಟೆಯ ಒಳಗಾಗಿ ವಾಪ್ಸು ಬಂದುಬಿಟ್ಟರು.

ದುರ್ಗದಿಂದ ಕೆಳಗಿಳಿಯುತ್ತಾ ರಾಜಣ್ಣನು "ಈ ದುರ್ಗದ ಮೇಲೆ ಹಿಂದೊಂದು ಕಾಲದಲ್ಲಿ ಎಂಟು ಸಾವಿರದಷ್ಟು ಸೇನೆಯಿದ್ದಿತು" ಎಂದ.

"ಈ ಬಂಡೆ ಕಲ್ಲಿನಲ್ಲಿ ಭಾವಿ ತೋಡುವುದಕ್ಕೂ ಇಲ್ಲ. ಅಷ್ಟೊಂದು ಜನ ನೀರಿಗೇನು ಮಾಡುತ್ತಿದ್ದರೋ?" ಎಂದರು ಗುಂಡೂರಾಯರು.

"ನೀರಿಗೇನು ಕಷ್ಟವಿಲ್ಲ. ದುರ್ಗದ ಮೇಲೆ ಬೇಕಾದಷ್ಟು ನೀರಿದೆ"

ವಿಶಾಲಾಕ್ಷಮ್ಮನವರು "ಭಗವಂತನ ಲೀಲೆ ಎಂದರೆ ಇದೇ. ಇಷ್ಟು ದೊಡ್ಡ ಬಂಡೆ ಕಲ್ಲಿನ ಮೇಲೆ ಧಾರಾಳವಾಗಿ ನೀರು ಸಿಗುತ್ತದೆ ಎಂದರೆ ಅದು ಪರಮಾಶ್ಚರ್ಯಕರವೇ" ಎಂದರು.

ಭಾಗ್ಯಳು "ಕೆಂಪೇಗೌಡರು ಸಾಧಾರಣ ಪಾಳೆಯಗಾರರೆಂದು ಕೇಳಿದ್ದೇನೆ. ವಿಜಯನಗರದ ಚಕ್ರವರ್ತಿಗಳ ಕಡೆಯ ಅಧಿಕಾರಿಯಾದ ಸಾವಂತರಾಯರು ಇಲ್ಲಿ ರಾಜ್ಯವಾಳುತ್ತಿದ್ದರೆ ಕೆಂಪೇಗೌಡರು ಬಂದು ಇದನ್ನು ಆಕ್ರಮಿಸಿದರೆನ್ನುವುದು ಹೇಗೆ?" ಎಂದಳು.

ಇತಿಹಾಸಕಾರನಾಗಿ ಹೋಗಿದ್ದ ರಾಜಣ್ಣ ಹೇಳಿದ.

"ಅದು ಆ ರೀತಿಯಾಗಲಿಲ್ಲ. ಸಾವಂತರಾಯನೂ ಅವನ ಮಗ ಸಂಪಾಜರಾಯನೂ ರಾಜ್ಯಭಾರ ಮಾಡಿದರು. ಸಂಪಾಜರಾಯನ ಮಗ ಚಿಕ್ಕರಾಯನೆಂಬುವನು ರಾಜ್ಯವಾಳುತ್ತಿದ್ದಾಗ ಬುದ್ಧಿ ಕೆಟ್ಟು ನೀರಿನಲ್ಲಿ ಮುಳುಗಿ ಪ್ರಾಣಬಿಟ್ಟ. ಅವನಿಗೆ ಮಕ್ಕಳಿರಲಿಲ್ಲ. ದೊರೆಯ ಊಳಿಗದವನಾದ ಗುಡಮಾರನಹಳ್ಳಿಯ ಗಂಗ ಎಂಬುವವನು ಇಲ್ಲಿ ಹಾವಳಿ ಮಾಡತೊಡಗಿದ. ಆಗ ಬೆಂಗಳೂರಿನಲ್ಲಿದ್ದ ಇಮ್ಮಡಿ ಕೆಂಪೇಗೌಡ ಬಂದು ಗಂಗನನ್ನು ಓಡಿಸಿ ಇದನ್ನು ಆಕ್ರಮಿಸಿದ"

ದುರ್ಗದಿಂದ ಕೆಳಗಿಳಿದು ಬಂದ ಮೇಲೆ ಭಾಗ್ಯಳು ರಾಜಣ್ಣನನ್ನು ಕುರಿತು "ಇಲ್ಲಿ ಯಾವುದೋ ಚಿಕ್ಕ ಚಿಕ್ಕ ಗುಡಿಗಳಿವೆ ಎಂದೂ ಸುಮಾರು ನಾಲ್ಕೈದು ಸಾವಿರ ವರ್ಷಗಳ ಹಿಂದಿನ ನಾಗರೀಕತೆಯ ಕುರುಹುಗಳು ಕಂಡುಬರುತ್ತವೆಂದೂ ಹೇಳುತ್ತಾರಂತೆಯಲ್ಲ. ಅವುಗಳೆಲ್ಲಾ ಇರುವುದೆಲ್ಲಿ?" ಎಂದು ಕೇಳಿದಳು.

"ಅವುಗಳನ್ನೆಲ್ಲಾ ನಿಮಗಾರು ಹೇಳಿದಳು?"

"ಯಾರೇಕೆ ಹೇಳಬೇಕು. ನನಗೇ ಗೊತ್ತಾಯಿತು. ನೀವು ಮದುವೆಗೆ ಹದಿನೈದು ದಿನಗಳ ಮುಂಚೆ ಇಲ್ಲಿಗೆ ಬಂದುದೇ ಅವುಗಳನ್ನು ನೋಡುವುದಕ್ಕಂತೆ"

"ಓಹೋ! ಸರಿ. ಬೆಂಗಳೂರಿನಲ್ಲಿಯೇ ಇವುಗಳನ್ನೆಲ್ಲಾ ವೆಂಕಟೇಶಯ್ಯನವರು ಹೇಳಿದರೆಂದು ಕಾಣುತ್ತದೆ"

"ಯಾರು ಹೇಳಿದರೆ ತಾನೇ ಏನು ? ಅಂತೂ ಅದು ನಿಜ ತಾನೇ ? ಅವುಗಳೆಲ್ಲಿವೆಯೋ ತೋರಿಸಿ. ನೋಡಿಕೊಂಡು ಹೋಗೋಣ"

"ನಾನಂತೂ ತೋರಿಸುವುದಕ್ಕೆ ಸಿದ್ಧ. ಆದರೆ ಇವರೆಲ್ಲಾ ಈಗ ಅಲ್ಲಿಗೆ ಬರುತ್ತಾರೆಯೇ ?" ಎಂದು ವೃದ್ಧರ ಕಡೆಗೆ ನೋಡುತ್ತಾ ರಾಜಣ್ಣ ಕೇಳಿದ.

ಮತ್ತೊಬ್ಬರು ಉತ್ತರ ಕೊಡುವ ಮೊದಲು ಆತುರದಿಂದ ಭಾಗ್ಯಳು "ನಾನಿಲ್ಲಿ ನೋಡುವುದಕ್ಕೆ ಬಂದುದೇ ಅದನ್ನು. ಅದೇ ನೋಡಿಕೊಳ್ಳದೇ ಹೋದರೆ ಏನು ಪ್ರಯೋಜನ ?" ಎಂದಳು.

ಅವಳು ಹೇಳಿದ ಆ ಮಾತು ನಿಶ್ಚಯೋಕ್ತಿಯನ್ನು ಹೇಳಿದ ಹಾಗೆ ಇದ್ದಿತು.

"ಅವೇನು ಇಲ್ಲಿಗೆ ಬಹಳ ದೂರವೋ ?" ಎಂದು ಗುಂಡೂರಾಯರು ವಿಚಾರಿಸಿದರು.

ರಾಜಣ್ಣನು ವಿಷಯವನ್ನು ತಿಳಿಸುತ್ತಾ ."ಹತ್ತಿರದಲ್ಲಿಯೂ ಕೆಲವಿವೆ. ದೂರವಲ್ಲಿಯೂ ಇವೆ ಹೆಚ್ಚು ಹೊತ್ತೇನೂ ಆಗುವುದಿಲ್ಲ" ಎಂದ.

"ಆದರೂ ಈಗಾಗಲೇ ಮಧ್ಯಾನ್ಹವಾಗಿದೆ ಮನೆಯಲ್ಲಿ ! ಸೀತಮ್ಮನವರೂ ಕಾಯುತ್ತಿದ್ದಾರೆ. ನಮಗೂ ಹಸಿವಾಗುತ್ತಿದೆ"

ನಡುವೆ ವೆಂಕಟೇಶಯ್ಯನವರು ಪ್ರವೇಶ ಮಾಡಿ"ನಾನೊಂದು ಮಾತು ಹೇಳುತ್ತೇನೆ, ಕೇಳು ಗುಂಡಣ್ಣ. ನೀನು ಬೇಡವೆಂದರೂ ಅವರು ಬಿಡುವುದಿಲ್ಲ. ನಾವು ಅವರೊಂದಿಗೆ ಹೋಗಿ ಬರುವುದು ಸಾಧ್ಯವಾಗುವುದಿಲ್ಲ. ಅವರು ಎಲ್ಲಾ ಮುಗಿಸಿಕೊಂಡು ಬರುವವರೆವಿಗೆ ಇಲ್ಲಿ ಕಾಯುತ್ತಾ ಕುಳಿತಿರುವುದೂ ಆಗುವ ಕೆಲಸವಲ್ಲ. ಹುಡುಗರು ಏನೇನು ನೋಡಿಕೊಂಡು ಬರುತ್ತಾರೆಯೋ ಅವುಗಳನ್ನೆಲ್ಲಾ ನೋಡಿಕೊಂಡು ಬರಲಿ. ನಮ್ಮಷ್ಟಕ್ಕೆ ನಾವು ಮನೆಗೆ ಹೋಗೋಣ" ಎಂದರು.

ತನಗೆ ಸಹಾಯಕವಾಗಿ ಮಾತನಾಡಿದರಲ್ಲಾ ಎಂದು ಭಾಗ್ಯಳಿಗೆ ಸಂತೋಷವಾಯಿತು. ಭಾಗ್ಯಳು ಬೇಕೆಂದರೆ ಒಂದಲ್ಲ, ಎರಡಲ್ಲ, ಅಲ್ಲಿರುವ ಪ್ರತಿಯೊಂದು ಗೋರಿಯನ್ನೂ ಹುಡುಕಿ ಹುಡುಕಿ ತೋರಿಸಿಕೊಂಡು ಬರಲು ರಾಜಣ್ಣ ಸಿದ್ಧವಾಗಿದ್ದ.

ಆದರೆ ಈ ಮಾತ್ರಯನ್ನು ನುಂಗುವುದು ಗುಂಡೂರಾಯರಿಗೆ ಮಾತ್ರ,

ಕಷ್ಟವಾಯಿತು. ವಯಸ್ಸಿಗೆ ಬಂದ ಹುಡುಗಿಯನ್ನು ಯಾರೋ ಗೊತ್ತಿಲ್ಲದ ಯುವಕನೊಂದಿಗೆ ನಿರ್ಜನವಾದ ಅಡವಿಯಲ್ಲಿ ತಿರುಗಾಡಲು ಕಳುಹಿಸುವುದು ಹೇಗೆ? ಒಂದುವೇಳೆ ಏನಾದರೂ ಪ್ರಮಾದವು ಸಂಭವಿಸಿದರೆ? ಆದರೆ ಮನೆಯವನಂತೆಯೇ ಆಗಿರುವ ರಾಜಣ್ಣನೊಡನೆ ಕಳುಹಿಸುವುದಿಲ್ಲವೆಂದು ಹೇಳುವುದಾದರೂ ಹೇಗೆ? ಈ ಹಾಳು ಹುಡುಗಿ ಎಂತಹ ಸಂದಿಗ್ಧತೆಯನ್ನು ತಂದಿಟ್ಟಳು. ಅವಳಾದರೂ ಹುಡುಗಿ ಬುದ್ಧಿಯಿಲ್ಲವೆಂದರೆ ಗಡ್ಡ ಮೀಸೆಗಳು ನರೆತಿರುವ ವೆಂಕಟೇಶಯ್ಯನಿಗಾದರೂ ವಿವೇಕ ಬೇಡವೇ?

ಹೀಗೆ ಗುಂಡೂರಾಯರು ಒಳಗೊಳಗೇ ಪತರುಗುಟ್ಟತೊಡಗಿದರು.

ತನ್ನ ತಂದೆಯನ್ನು ಒಪ್ಪಿಸಿ ಅವರ ಪರವಾನಗಿಯನ್ನು ತೆಗೆದುಕೊಂಡು ಹೋಗುವುದು ಅಸಂಭವವೆಂಬುದನ್ನು ಆತನ ಮುಖಭಾವದಿಂದಲೇ ಅರಿತ ಭಾಗ್ಯಳು ಹೊರಡಲು ಸನ್ನಾಹ ಮಾಡುತ್ತಾ "ವೆಂಕಟೇಶಯ್ಯನವರು ಹೇಳುವುದೇ ಸರಿ. ನಾವೆಲ್ಲವನ್ನೂ ನೋಡಿಕೊಂಡು ಬರುತ್ತೇವೆ. ನೀವುಗಳು ಹೋಗಿರಿ" ಎಂದು ಹೇಳಿ "ನೀನೂ ಬಾ, ಜಯ" ಎಂದು ವೆಂಕಟೇಶಯ್ಯನವರ ಮಗಳನ್ನೂ ಕರೆದುಕೊಂಡು ಹೊರಟುಬಿಟ್ಟಳು.

ಮಗಳು ಆ ರೀತಿಯಾಗಿ ಹೋದದ್ದು ಗುಂಡೂರಾಯರಿಗೆ ಸರ್ವಥಾ ಸಮಾಧಾನವಿರಲಿಲ್ಲ. ಆದರೆ ಜೊತೆಯಲ್ಲಿ ವೆಂಕಟೇಶಯ್ಯನವರ ಮಗಳೂ ಹೋದಳಲ್ಲ ಎಂಬುದೊಂದೇ ತೃಪ್ತಿ.

ಮನಸ್ಸಿನಲ್ಲಿ ಇಲ್ಲದ ಸಮಾಧಾನವನ್ನು ತಂದುಕೊಂಡು, ಹೋಗುತ್ತಿದ್ದ ಮಗಳ ಕಡೆಗೆ ಗುಂಡೂರಾಯರು "ಎಲ್ಲಿಯಾದರೂ ಹೋಗಬೇಕೆಂದು ತೋರಿದರೆ ಒಂದು ಕ್ಷಣ ನಿಲ್ಲುವುದಿಲ್ಲ. ತಿರುಗಾಲು ತಿಪ್ಪಿ ಎಂದು ಹೇಳಿ 'ನಡಿಯಪ್ಪ, ಹೋಗೋಣ" ಎಂದು ಹೇಳಿ ಹೆಂಡತಿಯನ್ನು ಕರೆದುಕೊಂಡು ವೆಂಕಟೇಶಯ್ಯನವರ ಜೊತೆಯಲ್ಲಿ ಮಾಗಡಿಗೆ ಅಭಿಮುಖವಾಗಿ ಹೊರಟರು.

ಇತ್ತ ಮೂರು ಮಂದಿಯೂ ಸಾವನದುರ್ಗದಿಂದ ಆಚೆ ಕಾಡಿನಲ್ಲಿ ಹೊರಟರು. ಅವರು ಹೋಗುತ್ತಿದ್ದ ಕಡೆ ಕಾಲು ದಾರಿಯು ಸಹ ಇರಲಿಲ್ಲ. ಎಲ್ಲೆಲ್ಲಿಯೂ ಕಲ್ಲು ಮುಳ್ಳುಗಳು ಬಿದ್ದಿದ್ದವು. ವಿಪುಲವಾಗಿ ಬಿದಿರು ಮೆಳೆಗಳೂ, ಕಾಡು ಮರಗಳೂ ಬೆಳೆದಿದ್ದವು.

ಮರಗಳು : ಳಿಯದೇ ಬಯಲಾಗಿ ದಾರಿ ಬಿಟ್ಟಿದ್ದ ಕಡೆ ನಡೆದು ಕೊಂಡು ಮುಂದುವರಿದರು.

ಸುಮಾರು ಮೂರು ನಾಲ್ಕು ಫರ್ಲಾಂಗುಗಳು ನಡೆದುಹೋದ ಮೇಲೆ ನೀರಿನ ತೊಟ್ಟಿಯಂತೆ ನಾಲ್ಕು ಕಡೆಯೂ ಕಲ್ಲಿನ ಚಪ್ಪಡಿಗಳಿದ್ದವು. ಅಗಲ ವಾದ ಕಲ್ಲು ಚಪ್ಪಡಿಯೊಂದು ಪಕ್ಕದಲ್ಲಿ ಬಿದ್ದಿದ್ದಿತು.

ಅವುಗಳನ್ನು ಜಯ ಭಾಗ್ಯರಿಗೆ ತೋರಿಸುತ್ತಾ ರಾಜಣ್ಣ ಹೇಳಿದ.:

"ಇದೇ ಇಲ್ಲಿ ಕಂಡುಬರುವ ಗುಡಿಗಳ ಸ್ವರೂಪ. ಗುಡಿಯೆನ್ನಿ. ಗೋರಿ ಯೆನ್ನಿ. ಯಾರೋ ಇದನ್ನು ಕಿತ್ತುಹಾಕಿದ್ದಾರೆ. ಆದರೆ ಅದರ ಸ್ವರೂಪವು ಯಾವ ರೀತಿಯಾಗಿದ್ದಿತೆಂಬುದನ್ನು ಸುಲಭವಾಗಿ ಊಹೆ ಮಾಡಬಹುದು. ನಾಲ್ಕು ಚಪ್ಪಡಿಗಳನ್ನಿಲ್ಲಿ ಚಚ್ಚೌಕವಾಗಿಡಲಾಗಿದೆಯಷ್ಟೆ. ಪೂರ್ತಿರುವ ಈ ಚಪ್ಪಡಿಯನ್ನು ನೋಡಿರಿ. ಇದರ ಮಧ್ಯ ಭಾಗದಲ್ಲಿ ವರ್ತುಲಾಕಾರವಾದ ರಂಧ್ರವಿದೆಯಷ್ಟೆ. ಇದನ್ನು ನೋಡಿರಿ. ಒಬ್ಬ ಮನುಷ್ಯ ಒಳಗೆ ಹೋಗು ವಷ್ಟಿದೆ, ಈ ರಂಧ್ರ. ಒಳಗೆ ಹೋಗುವುದಕ್ಕೆ ಅನುಕೂಲವಾಗಿರುವಂತಹ ಬಾಗಿಲು, ಇದು ಯಾವಾಗಲೂ ಪೂರ್ವ ದಿಕ್ಕಿಗೇ ಇರುತ್ತದೆ"

"ಇದು ಕಲ್ಲಿನ ತೊಟ್ಟಿಯಂತಿದೆ. ಗುಡಿಯು ಹೇಗಾಗುತ್ತದೆ" ಎಂದಳು ಜಯ.

"ಇದರ ಮೇಲಿನ ಚಾವಣಿಯಂತಿದ್ದ ಚಪ್ಪಡಿಯನ್ನು ಕೆಳಗೆ ಹಾಕಿ ದ್ದಾರೆ, ನೋಡು. ಅದನ್ನು ಈ ಕಲ್ಲಿನ ತೊಟ್ಟಿಯ ಮೇಲೆ ಇಟ್ಟರೆ ಇದು ಗುಡಿಯಂತಾಯಿತೋ ಇಲ್ಲವೋ ?" ಎಂದು ರಾಜಣ್ಣ ಸಮಾಧಾನವನ್ನು ಹೇಳಿದ.

ಅವರುಗಳು ಇನ್ನೂ ಮುಂದೆ ಮುಂದೆ ಹೋದರು. ಮೊದಲು ನೋಡಿ ದುದಕ್ಕಿಂತಲೂ ದೊಡ್ಡದೊಂದು ಗುಡಿಯು ಕಂಡಿತು. ಅದರ ಮೇಲ್ಚಾವ ಣಿಯನ್ನು ಯಾರೂ ಕಿತ್ತುಹಾಕಿರಲಿಲ್ಲ. ಅದು ಹಾಗೆಯೇ ನಿಂತಿತ್ತು.

ರಾಜಣ್ಣನು ಅವರುಗಳನ್ನು ಅದರ ಬಳಿಗೆ ಕರೆದುಕೊಂಡು ಹೋಗಿ ತೋರಿಸಿ "ಈಗ ನೋಡಿರಿ. ಎಲ್ಲಾ ಕಡೆಗಳಿಂದಲೂ ಕಲ್ಲು ಮುಚ್ಚಿದೆ. ಒಳಗೆ ಹೋಗುವುದಕ್ಕೆ ಅವಕಾಶವಿರುವುದು ಈ ರಂಧ್ರ ಅಥವಾ ಬಾಗಿಲಿನಿಂದಲೇ. ಇದು ಪೂರ್ವಾಭಿಮುಖವಾಗಿಯೇ ಇದೆ" ಎಂದ,

ಹುಡುಗಿಯರಿಬ್ಬರೂ ತಲೆಗಳನ್ನು ಹಾಕಿ ಆ ರಂಧ್ರದೊಳಗೆ ನೋಡಿದರು. ಅಲ್ಲಿ ಏನೂ ಇರಲಿಲ್ಲ.

"ಒಳಗೇನೂ ಇಲ್ಲ"

ಹುಡುಗಿಯರಲ್ಲಿ ಒಬ್ಬಳು ಹೇಳಿದ ಮಾತಿಗೆ ರಾಜಣ್ಣ ಹೇಳಿದ.

"ಅಲ್ಲಿಯೇನೋ ಇರುತ್ತದೆಂದು ನಿರೀಕ್ಷಿಸುವುದು ತಪ್ಪು"

"ಏನೂ ಇಡುವುದಕ್ಕಿಲ್ಲದಿದ್ದರೆ ಈ ಗುಡಿಗಳನ್ನು ಯಾಕೆ ಕಟ್ಟಿದರು?"

ಆ ಪ್ರಶ್ನೆಯನ್ನು ಕೇಳಿದವಳು ಭಾಗ್ಯ.

"ಸರಿಯಾಗಿ ಹೇಳುವುದಾದರೆ ಇವುಗಳು ಗುಡಿಗಳಲ್ಲ. ಒಂದು ಕಾಲದಲ್ಲಿ ಜನಗಳು ಇಲ್ಲಿಗೆ ಬಂದು ಪೂಜೆಪುನಸ್ಕಾರಗಳನ್ನು ಮಾಡುತ್ತಿದ್ದಿರಬಹುದು, ಆದರೆ ಇವುಗಳನ್ನು ಗುಡಿಗಳು ಎನ್ನಲಾಗುವುದಿಲ್ಲ. ಗೋರಿಗಳು ಎಂದು ಕರೆಯಬಹುದು. ಒಂದು ಕಾಲದಲ್ಲಿ ಈ ಸುತ್ತಮುತ್ತಲಲ್ಲಿ ವಾಸಿಸುತ್ತಿದ್ದ ಜನ ತಮ್ಮಲ್ಲಿ ವೀರಪುರುಷರೂ, ಕೀರ್ತಿಶಾಲಿಗಳೂ ಮೃತರಾದನಂತರ ಅವರನ್ನು ಈ ಗುಡಿಗಳಲ್ಲಿ ತಂದು ಹೂಳುತ್ತಿದ್ದರೆಂದು ತೋರುತ್ತದೆ. ವೀರಪುರುಷರೂ, ಕೀರ್ತಿಭಾಜನರೂ ಆಗದ ಶ್ರೀಮಂತರಿಗೂ ಇಂತಹ ಗುಡಿಗಳಲ್ಲಿ ಜಾಗವು ಸಿಗುತ್ತಿದ್ದಿತೋ ಏನೋ ?"

ಮಾತಿನ ಕಡೆಯ ಭಾಗವನ್ನು ಹೇಳಿದ ರಾಜಣ್ಣ ನಕ್ಕ.

"ಯಾರು ಯಾವ ಕಾಲದಲ್ಲಿ ಸಾಯುತ್ತಾರೆಂದು ಹೇಳುವುದು ಕಷ್ಟ. ಹಾಗೆ ಸಾಯುವ ಹೊತ್ತಿಗೆ ಈ ಗುಡಿಗಳು ತಯಾರಾಗಿರುತ್ತಿದ್ದವೆಂದರೆ—"

"ಹುಂ. ಹಾಗೆಯೇ ಹೇಳಬೇಕು. ಪುರಾತನ ಕಾಲದಲ್ಲಿ ವಿಪುಲ ದ್ರವ್ಯವನ್ನು ಖರ್ಚುಮಾಡಿ, ವರ್ಷಾಂತರಗಳು ಕಷ್ಟಪಟ್ಟು ಈಜಿಪ್ಟಿನ ರಾಜರ ಶವಗಳನ್ನು ಇಡಲು ಪಿರಿಮಿಡ್ಡುಗಳನ್ನು ಕಟ್ಟುತ್ತಿದ್ದರು ಎಂದು ಹೇಳುತ್ತಾರೆ. ಹಾಗೆಯೇ ಪ್ರತಿಯೊಬ್ಬನಿಗೂ ತಾನು ಎಂದಾದರೂ ಸಾಯುತ್ತೇನೆಂಬುದು ತಿಳಿದೇ ಇರುತ್ತದೆಯಷ್ಟೇ. ಸಾಯುವ ಕಾಲಕ್ಕಾಗಲೆಂದು ಈ ಜನ ಮೊದಲೇ ಇಂತಹ ಗುಡಿಗಳನ್ನು ನಿರ್ಮಿಸುತ್ತಿದ್ದರೆಂದು ತೋರುತ್ತದೆ"

ಹತ್ತಿರದಲ್ಲಿ ಮತ್ತಾವ ಗುಡಿಗಳೂ ಕಂಡುಬರಲಿಲ್ಲ.

ಜನರು ಕೇಳದೇ ಇರುವಂತಹ ಒಂದು ಗೋರಿಯನ್ನು ತೋರಿಸಿ

ವಾಪ್ಸು ಕರೆದುಕೊಂಡು ಹೋಗೋಣವೆಂದುಕೊಂಡ ರಾಜಣ್ಣ ಮುಂದು ವರಿಯುತ್ತಿದ್ದ. ಅವನು ಹೋಗುತ್ತಿದ್ದಾನೆಯಲ್ಲಾ ಎಂದು ಅವರೂ ಅನು ಸರಿಸುತ್ತಿದ್ದರು.

"ಹೆಣವನ್ನಷ್ಟೇ ಅಲ್ಲದೇ ಇಲ್ಲಿ ಮಣ್ಣಿನ ಪಾತ್ರೆ ಪಡಗಗಳನ್ನೂ ಅದ ರೊಂದಿಗೆ ಇಡುತ್ತಿದ್ದರೆಂದು ಕಂಡುಬರುತ್ತದೆ. ಅಂತಹ ಕೆಲವು ಮಡಿಕೆ ಕುಡಿಕೆಗಳು ಪ್ರಾಕ್ತನ ವಿಮರ್ಶನಕಾರರಿಗೆ ಸಿಕ್ಕಿವೆ''

ಭಾಗ್ಯಳು "ಆ ಕುಡಿಕೆ ಮಡಿಕೆಗಳು ಹೇಗಿವೆಯೋ'' ಎಂದಳು.

"ಹೆಚ್ಚು ಕಡಿಮೆ ಅವುಗಳು ನಮ್ಮ ಮಡಿಕೆಗಳಂತೆಯೇ ಇವೆ. ಆದರೆ ಗುಡಾಣಗಳಂತೆ ಅವು ಎತ್ತರವಾಗಿವೆ. ಅವುಗಳಲ್ಲಿ ಸಣ್ಣದೂ ದೊಡ್ಡದೂ ಇರುತ್ತವೆ. ಆದರೆ ಅವುಗಳಲ್ಲಿ ಒಂದು ವಿಶೇಷ. ತಳವು ನಮ್ಮ ಕಾಲದ ಮಡಿಕೆಗಳಿರುವಂತೆ ಬೋಳಾಗಿಲ್ಲ. ಮಡಿಕೆಗಳು ಕೆಳಗೆ ಬೀಳದಂತೆ ಅವು ಗಳ ಕೆಳಗೆ ಮೂರು ಗೂಟಗಳಿವೆ. ಮಡಿಕೆಗಳು ಕೆಳಗೆ ಬೀಳದಂತೆ ಅವು ಸಹಾಯಕವಾಗಿವೆ. ಮಡಿಕೆ ದೊಡ್ಡದಾಗಿರಲಿ, ಸಣ್ಣದಾಗಿರಲಿ ಅವುಗಳ ಕೆಳಗೆ ಈ ಗೂಟಗಳಂತೆ ಮೂರು ಇದ್ದೇ ಇರುತ್ತವೆ. ಅವು ಆ ಕಾಲದ ಮಡಿಕೆಗಳಿಗಿರುತ್ತಿದ್ದ ವೈಶಿಷ್ಟ''

''ನೀವು ಹೇಳುವುದು ಬಹಳ ಆಶ್ಚರ್ಯಕರವಾಗಿದೆ''

"ಇದರಲ್ಲಿ ಆಶ್ಚರ್ಯವೇನು ಬಂದಿತು, ಭಾಗ್ಯ ?"

"ಆಶ್ಚರ್ಯವಲ್ಲವೇ ಏನು ? ಬೋಳು ಮಡಿಕೆಗಳಿಗಿಂತಲೂ ಪೀಠ ವಿರುವ ಮಡಿಕೆಗಳು ಹೆಚ್ಚು ನಾಗರೀಕತೆಯ ಗುರುತು. ಏನಿಲ್ಲವೆಂದರೂ ಈ ಪ್ರದೇಶವು ನಮ್ಮ ಕನ್ನಡನಾಡಿಗೇ ಸೇರಿದ್ದು. ಪೀಠವನ್ನು ಒಳಗೊಂಡ ಮಡಿಕೆಗಳನ್ನು ಮಾಡುತ್ತಿದ್ದ ನಮ್ಮ ಜನ ಅದನ್ನೇಕೆ ಬಿಟ್ಟರೋ ಅರ್ಥ ವಾಗುವುದಿಲ್ಲ. ನಾಗರೀಕತೆಯು ಮುಂದುವರಿಯುತ್ತಾ ಹೋಗುತ್ತದೆಯೇ ವಿನಾ ಹಿಂತಿರುಗುವುದಿಲ್ಲ"

ರಾಜಣ್ಣನು ನಗುತ್ತಾ "ಯಾವುದು ನಾಗರೀಕತೆಯೋ ಯಾವುದು ಅಲ್ಲವೋ, ನಾಗರೀಕತೆಯು ಮುಂದುವರಿಯುತ್ತಾ ಹೋಗುವುದೋ ಹಿಂತಿ ರುಗುತ್ತದೆಯೋ ಒಂದೂ ನನಗೆ ಅರ್ಥವಾಗುವುದಿಲ್ಲ" ಎಂದು ಹೇಳಿದ.

ದೂರದಲ್ಲಿ ಸಾಧಾರಣವಾಗಿ ಸಣ್ಣ ಮನೆಯಷ್ಟಿದ್ದ ಒಂದಾನೊಂದು ಗುಡಿಯೂ, ಅದರ ಪಕ್ಕದಲ್ಲಿ ಸಣ್ಣ ಗುಡಿಯೂ ಕಂಡವು.

ಮೂರು ಮಂದಿಯೂ ಅತ್ತ ಕಡೆಗೆ ಹೋಗಲಾರಂಭಿಸಿದರು.

"ಈ ಗುಡಿಗಳನ್ನೂ ನಿರ್ಮಾಣ ಮಾಡಿದವರು ನಾಲ್ಕೈದು ಸಹಸ್ರ ವರ್ಷಗಳ ಹಿಂದೆ ಬದುಕಿದ್ದ ಜನ ಎಂದು ಸೋಮಶೇಖರರು ಹೇಳುತ್ತಾರೆ ಯಂತಲ್ಲ"

ಜಯಳು "ಹೌದು. ಅವರು ಹಾಗೆ ಹೇಳುವುದನ್ನು ನಾನು ಅನೇಕ ಬಾರಿ ಕೇಳಿದ್ದೇನೆ" ಎಂದು ಹೇಳಿದಳು.

ರಾಜಣ್ಣನು ಸಹ "ಹೌದು ಅವನು ಅದೇ ರೀತಿಯಾಗಿ ಹೇಳು ತ್ತಾನೆ. ನನಗೂ ಅದೇ ರೀತಿಯಾಗಿ ತೋರುತ್ತದೆ'' ಎಂದ.

"ನಾಲ್ಕೈದು ಸಾವಿರ ವರ್ಷದ ಹಿಂದಿನ ಜನ. ಅವರು ಕಟ್ಟಿದ ಗುಡಿ ಗಳು. ಅವು ನಮ್ಮೂರಿನ ಹತ್ತಿರದಲ್ಲಿ. ಆಶ್ಚರ್ಯವಾಗುತ್ತದೆ''

"ಆ ವಿಷಯುವನ್ನು ಅಷ್ಟು ಖಡಾಖಂಡಿತವಾಗಿ ಹೇಳುವುದಕ್ಕಾಗುವು ದಿಲ್ಲ, ಭಾಗ್ಯ. ಆ ಗುಡಿಗಳಿಗೆ ಉಪಯೋಗಿಸಿರುವ ಕಲ್ಲುಗಳನ್ನು ಲೋಹ ದಿಂದ ಕಡೆದದ್ದಲ್ಲ. ಅದರಿಂದ ಅದು ಅಷ್ಟು ಹಿಂದೆ ವಾಸಮಾಡುತ್ತಿದ್ದ ಜನ ರಿಂದಲೇ ಕಟ್ಟಲ್ಪಟ್ಟದ್ದೆಂದು ಹೇಳಬಹುದಾಗಿದೆ"

"ಅಂದರೆ— — —"

"ಅಂದರೆ ಈ ಗುಡಿಗಳಿಗೆ ಉಪಯೋಗಿಸುವಂತ ಕಲ್ಲುಗಳು ಇದ್ದಕ್ಕಿ ದ್ದಂತೆಯೇ ಎಲ್ಲಿಯೂ ಸಿಕ್ಕಿಬಿಡುವುದಿಲ್ಲ. ಯಾವ ಕಾಲದಲ್ಲಿಯೇ ಆಗಲಿ, ಹಾಗೆ ಸಿಕ್ಕಿತೆಂದುಕೊಳ್ಳುವುದು ಸರಿಯಲ್ಲ ಇದರಲ್ಲಿ ಎಷ್ಟೋ ಕೆಲಸಗಳಿವೆ. ಕಲ್ಲುಗಳನ್ನು ಬಂಡೆಗಳಿಂದ ಸೀಳಿಕೊಳ್ಳಬೇಕು. ಅನಂತರ ಅವುಗಳನ್ನು ಬೇಕಾದ ಖಚಿತ ಆಕಾರಕ್ಕೆ ತುಂಡು ಮಾಡಿಕೊಳ್ಳಬೇಕು. ಇವೆಲ್ಲದಕ್ಕಿಂ ತಲೂ ಮುಖ್ಯವಾಗಿ ಪೂರ್ವಾಭಿಮುಖವಾದ ಕಡೆ ರಂಧ್ರವಿಡೆಯಲ್ಲ. ಆ ರಂಧ್ರವನ್ನು ಮಾಡಬೇಕು. ಇವುಗಳನ್ನೆಲ್ಲಾ ಮಾಡಲು ನಾವು ಉಕ್ಕಿನ ಉಳಿಗಳನ್ನು ಉಪಯೋಗಿಸುತ್ತೇವೆ. ಲೋಹ ಅಥವಾ ಉಕ್ಕು ಮನುಷ್ಯ ನಿಗೆ ಗೊತ್ತಿಲ್ಲದೇ ಇದ್ದ ಕಾಲದಲ್ಲಿ ಕಲ್ಲಿನಿಂದ ಏನಾದರೂ ಮಾಡಬೇಕಾಗಿದ್ದ ಕಲ್ಲಿನಿಂದಲೇ ಹೊಡೆದು ಮಾಡಿಕೊಳ್ಳುತ್ತಿದ್ದರು. ಅಂದಿನ ಜನರನ್ನು ಶಿಲಾ ಯುಗದ ಜನರೆಂದು ಕರೆಯುತ್ತಾರೆ. ಇಲ್ಲಿದ್ದ ಜನರು ಸಹಸ್ರಾರು ವರ್ಷಗಳ ಹಿಂದಿನವರೆಂದು ಧಾರಾಳವಾಗಿ ಹೇಳಬಹುದು"

"ಆ ಕಲ್ಲುಗಳನ್ನು ಕಲ್ಲುಗಳಿಂದಲೇ ಹೊಡೆದು ಕಡೆದಿದ್ದಾರೆಂದು ಯಾವ ರೀತಿಯಾಗಿ ಹೇಳುತ್ತೀರಿ"

"ಅದನ್ನು ಇಲ್ಲಿಯೇ ವಿವರಿಸುವುದಕ್ಕಾಗುವುದಿಲ್ಲ. ಆ ಗುಡಿಗಳ ಒಳಗೆ ಹೋಗೋಣ ಬನ್ನಿರಿ. ನನ್ನಿಂದ ಅದನ್ನು ಎಷ್ಟರ ಮಟ್ಟಿಗೆ ವಿವರಿಸುವುದಕ್ಕೆ ಆಗುತ್ತದೆಯೋ ಅಷ್ಟರ ಮಟ್ಟಿಗೆ ವಿವರಿಸುತ್ತೇನೆ"

ಅಷ್ಟು ಹೊತ್ತಿಗೆ ಅವರು ಆ ಗುಡಿಗಳ ಬಳಿಗೆ ಬಂದಿದ್ದರು.

ಜಯ, ಭಾಗ್ಯರು ಕುತೂಹಲದಿಂದ ದೊಡ್ಡ ಗುಡಿಯ ಬಳಿಗೆ ಹೋದರು. ಅಲ್ಲೂ ಅಷ್ಟೇ. ಮನುಷ್ಯ ತೂರುವಷ್ಟು ರಂಧ್ರವೊಂದು ಪೂರ್ವ ದಿಕ್ಕಿಗಿತ್ತು. ಒಳಗೆಲ್ಲಾ ಖಾಲೀ ಕೋಣೆಯಂತೆ ಇದ್ದಿತು.

ರಾಜಣ್ಣ ಅವರ ಬಳಿ ಹೋಗಿ ಗುಡಿಗೆ ಉಪಯೋಗಿಸಿದ್ದ ಚಪ್ಪಡಿಯ ಅಂಚುಗಳನ್ನು ತೋರಿಸಿದ. ಅವೇನು ವಿಶೇಷ ವರ್ಗದ ಕಲ್ಲುಗಳಾಗಿರಲಿಲ್ಲ. ನಮ್ಮೂರುಗಳಲ್ಲಿ ಕಣ್ಣಿಗೆ ಬೀಳುವ ಕಲ್ಲುಗಳಂತೆಯೇ ಬೂದಿಯ ಬಣ್ಣದ್ದಾಗಿದ್ದವು. ಮೈಯಲ್ಲೆಲ್ಲಾ ಸಣ್ಣ ದೊಡ್ಡ ಕರಿಯ ಚುಕ್ಕೆಗಳಿದ್ದವು. ಒಂದು ಚಪ್ಪಡಿಯ ನಡುವೆ ಕರಿಯದೊಂದು ಗೆರೆಯೂ ಬಂದಿದ್ದಿತು.

ಅದನ್ನು ತೋರಿಸುತ್ತಾ ರಾಜಣ್ಣ ಹೇಳಿದ.

"ಈ ಕಲ್ಲಿನ ಮೇಲೊಂದು ಗೆರೆಯೂ ಬಂದಿದೆ, ನೋಡಿರಿ. ಅತ್ತಕಡೆಯಲ್ಲಿ ಅದು ಸಣ್ಣದಾಗುತ್ತಾ ಹೋಗಿ ಕಡೆಗೆ ಮಾಯವಾಗಿರುವಂತೆ ಇತ್ತ ಕಡೆ ಆಗಿಲ್ಲ. ಮಧ್ಯದಲ್ಲಿಯೇ ನಿಂತುಹೋಗಿದೆ. ಅಂದರೆ ಈ ಕಲ್ಲನ್ನು ಬೇಕಾದ ಅಳತೆಗೆ ತಕ್ಕಹಾಗೆ ಒಡೆದಿರುವಂತೆ ಕಂಡುಬರುತ್ತದೆ. ಇದರ ಅಂಚುಗಳನ್ನು ನೋಡಿರಿ. ಈಗ ಕಲ್ಲು ಕತ್ತರಿಸಿದರಾಗುವಂತೆ ಅಂಚುಗಳು ಖಚಿತವಾಗಿಲ್ಲ. ಡೊಂಕುಡೊಂಕಾಗಿಯೂ ಮೊಂಡುಮೊಂಡಾಗಿಯೂ ಇವೆ. ಆದ್ದರಿಂದ ಲೋಹದ ಉಳಿಗಳಿಂದ ಇವನ್ನು ಕತ್ತರಿಸಿದರೆಂದು ಹೇಳಲಾಗುವುದಿಲ್ಲ. ಇಲ್ಲಿ ಈ ಮಧ್ಯದಲ್ಲಿರುವ ರಂಧ್ರಗಳನ್ನು ನೋಡಿರಿ. ಈ ರಂಧ್ರಗಳೂ ಅಷ್ಟೇ ಗುಂಡಾಗಿವೆಯೇ ಹೊರತು ಕಂಪಾಸ್‌ನಲ್ಲಿ ಹಾಕಿದ ಖಚಿತ ವರ್ತುಲಗಳಂತೆ ಇಲ್ಲ. ವರ್ತುಲಗಳ ಒಳ ಅಂಚುಗಳನ್ನು ಗಮನಿಸಿರಿ. ಅವೂ ಚಪಡಿಯ ಅಂಚುಗಳಂತೆಯೇ ಮೊಂಡುಮೊಂಡಾಗಿವೆ"

ಅಲ್ಲಿಗೆ ಹುಡುಗಿಯರ ಆಸಕ್ತಿಯು ಮುಗಿದುಹೋಯಿತು.

ಆಗ ರಾಜಣ್ಣ ಅವರುಗಳನ್ನು ಉದ್ದೇಶಿಸಿ "ಈ ಸಣ್ಣ ಗುಡಿಯನ್ನು ನೋಡುವುದಿಲ್ಲವೇನು ?'' ಎಂದ.

ಭಾಗ್ಯಳು "ಅದನ್ನು ನೋಡುವುದೇನು ? ಇದುವರೆವಿಗೆ ನೋಡಿದ ಗುಡಿಗಳಂತೆಯೇ ಇರುತ್ತದೆ ಇದೇನೋ ಬಹಳ ದೊಡ್ಡದಾಗಿ ಕಾಣುತ್ತಿದೆಯಲ್ಲಾ-ಎಂದು ಇಲ್ಲಿಯವರೆವಿಗೆ ಬಂದೆ. ಇಲ್ಲದಿದ್ದರೆ ಇಷ್ಟುದೂರ ಯಾರು ಬರುತ್ತಿದ್ದರು. ಅಲ್ಲಿಂದಲೇ ವಾಪ್ಸು ಹೊರಟು ಹೋಗುತ್ತಿದೆ'' ಎಂದಳು.

ರಾಜಣ್ಣನು ನಗುತ್ತಾ "ನೀವು ಹಾಗೆಯೇ ಹೊರಟುಹೋಗುವುದಕ್ಕೆ ನಾನು ಬಿಡುತ್ತಿರಲಿಲ್ಲ. ಬಂದು ಈ ಗುಡಿಯ ಬಾಗಿಲನ್ನು ನೋಡಿರಿ" ಎಂದ

ಅವರಿಬ್ಬರೂ ಬಂದು ನೋಡಿದರು. ಇತರ ಗುಡಿಗಳಂತೆ ಅದರ ಬಾಗಿಲು ತೆರೆದಿರಲಿಲ್ಲ. ಆ ರಂಧ್ರದಲ್ಲಿ ಪ್ರವೇಶಿಸಲಾಗದಂತೆ ಒಳಗಿನಿಂದ ಮತ್ತೊಂದು ಚಪ್ಪಡಿಯನ್ನು ಒತ್ತರಿಸಿ ಕೊಡಲಾಗಿತ್ತು.

ಭಾಗ್ಯಳು ಕುತೂಹಲಾವಿಷ್ಟಳಾಗಿ"ಇದೇನು. ಇದರ ಬಾಗಿಲು ಮುಚ್ಚಲ್ಪಟ್ಟಿದೆ'' ಎಂದಳು.

ಅಷ್ಟು ಹೊತ್ತಿಗೆ ಬಿಸಿಲು ಜೋರಾಗಿತ್ತು. ನೆತ್ತಿಯ ಮೇಲೆ ಬಂದಿದ್ದ ಸೂರ್ಯ ಮುಂದಕ್ಕೆ ಜರುಗುತ್ತಿದ್ದ.

ರಾಜಣ್ಣನು"ಬನ್ನಿ, ವಾಪ್ಸು ಹೋಗೋಣ. ದಾರಿಯಲ್ಲಿ ಹೇಳುತ್ತೇನೆ'' ಎಂದ.

ಎಲ್ಲರೂ ವಾಪ್ಸು ಹಿಂತಿರುಗಿದರು.

ತನ್ನ ಪ್ರಶ್ನೆಯನ್ನು ಮರೆಯದೇ ಆ ಗುಡಿಯ ಬಾಗಿಲೇಕೆ ಮುಚ್ಚಿದೆ ಎಂದು ಭಾಗ್ಯಳು ಕೇಳಿದಳು.

"ಎಲ್ಲಾ ಗುಡಿಯ ಬಾಗಿಲುಗಳೂ ಅದೇ ರೀತಿ ಮುಚ್ಚಿದ್ದವೆಂದು ಕಾಣುತ್ತದೆ. ಆದರೆ ನಮ್ಮ ಹಾಗೆ ಆಸಕ್ತಿಗೊಂಡವರು ಬಾಗಿಲುಗಳನ್ನು ತೆಗೆದು ಅದರಲ್ಲೇನಿದೆ ಎಂದು ನೋಡಿರಬೇಕು. ಭದ್ರವಾದ ಸಮಾಧಿಯೊಂದನ್ನು ತೋರಿಸೋಣವೆಂದೇ ನಿಮ್ಮನ್ನು ಅಷ್ಟು ದೂರ ಕರೆದುಕೊಂಡು ಹೋಗಿದ್ದುದು''

"ಬಾಗಿಲು ತೆಗೆಯದಿರುವ ಸಮಾಧಿಯಲ್ಲಿ ಏನಿರುತ್ತದೆಯೋ ?''

"ಏನಿರುವುದಕ್ಕೆ ಸಾಧ್ಯ. ಎಂದೋ ಅಲ್ಲಿರಿಸಿದ್ದ ಹೆಣದ ಅಸ್ತಿಪಂಜರ ವಿರಬಹುದು. ನಾನು ಮೊದಲೇ ಹೇಳಿದೆನಲ್ಲಾ ಗುಡಾಣದಂತಹ ಮಡಿಕೆ ಕುಡಿಕೆಗಳು ಅವುಗಳಿರಬಹುದು"

"ಪಾತ್ರೆ ಪಡಗಳನ್ನು ಹೆಣವನ್ನೂ ಕೋಣೆಯಲ್ಲಿಟ್ಟಂತೆ ಇಡುತ್ತಿದ್ದರೋ ಅಥವಾ ಆ ಗುಡಿಗಳಲ್ಲಿ ಅವುಗಳನ್ನು ಹೂಳುತ್ತಿದ್ದರೋ?"

"ಅದನ್ನು ನಾನು ಹೇಗೆ ಹೇಳಲಿ. ಬಹುಮಟ್ಟಿಗೆ ಕೋಣೆಯಲ್ಲಿಟ್ಟಂತೆಯೇ ಇಡುತ್ತಿದ್ದರೆಂದು ಹೇಳಬಹುದು. ಯಾಕೆಂದರೆ ಅವರುಗಳು ನಿರ್ಮಿಸಿದಾಗ ಇವು ನಾವು ಈಗ ನೋಡಿದ ಹಾಗೆಯೇ ಇರಲಿಲ್ಲ. ಅದರ ಮೇಲ್ಛಾವಣಿಯು ಭೂ ಮಟ್ಟದಲ್ಲಿ ಅಥವಾ ಅದಕ್ಕೆ ಕೆಳಮಟ್ಟದಲ್ಲಿದ್ದಿರಬೇಕು. ಅನೇಕ ಕಾಲದಿಂದ ಗಾಳಿಯು ಬೀಸಿ, ಮಳೆಯ ನೀರು ಹರಿದು ಅವುಗಳ ಮೇಲೆ ಇದ್ದ ಮಣ್ಣು ಹೋಗಿ ಗುಡಿಗಳು ಎದ್ದು ನಿಂತಿವೆ. ಅವು ಅತ್ಯಂತ ಪುರಾತನವೆನ್ನುವುದಕ್ಕೆ ಹಾಗೆ ಮಣ್ಣು ಅಲ್ಲಿಂದ ಕದಲಿರುವುದೂ ಒಂದು ಸಾಕ್ಷಿ. ಇನ್ನು ಮುಂದೆ ಕೆಲವು ಗುಡಿಗಳಿವೆ. ಅಲ್ಲಿ ನೆಲವು ಕಲ್ಲು ತುಂಡುಗಳಿಂದಲೂ ಗಟ್ಟಿಯಾಗಿ ಮಣ್ಣಿನಿಂದಲೂ ಕೂಡಿದೆ. ಅದರಿಂದ ಗುಡಿಗಳು ಭೂಮಿಯಲ್ಲಿಯೇ ಇವೆ. ಚಾವಣಿಯ ಕಲ್ಲುಗಳು ಮಾತ್ರ ಕಣ್ಣಿಗೆ ಕಾಣುತ್ತದೆ."

ಹೋಗುತ್ತಿದ್ದ ಭಾಗ್ಯಳು ಅಲ್ಲಿಯೇ ನಿಂತುಬಿಟ್ಟು "ಅವುಗಳನ್ನು ನೋಡಿಕೊಂಡು ಹೋಗೋಣ" ಎಂದಳು.

"ಅದಾಗುವುದಿಲ್ಲ. ನಡೆಯಿರಿ. ಅವುಗಳನ್ನು ನೋಡಬೇಕಾದರೆ ಇನ್ನೂ ನಾಲ್ಕು ಮೈಲಿಗಳಷ್ಟು ದೂರ ನಡೆಯಬೇಕು. ಆದರೆ ಹೋಗಿಬರುವುದಕ್ಕೆ ಎಂಟು ಮೈಲಿಗಳಾಗುತ್ತವೆ. ಮನೆಗೆ ತಲುಪುವ ವೇಳೆಗೆ ರಾತ್ರಿಯಾಗಿ ಹೋಗುತ್ತದೆ. ಈಗ ನಾವು ನೋಡಿರುವುದಕ್ಕಿಂತ ಹೆಚ್ಚಾಗಿ ಅಲ್ಲೇನೂ ಇಲ್ಲ"

ದಾರಿಯಲ್ಲಿ ಹೋಗುತ್ತಾ ಭಾಗ್ಯಳು "ನಾಲ್ಕೈದು ಸಾವಿರ ವರ್ಷದ ಹಿಂದಿನ ಜನಗಳೆಂದರೆ ಅವರು ಹೇಗಿದ್ದರೋ? ನಮಗಿಂತ ಎತ್ತರವಾಗಿದ್ದರೋ, ಕುಳ್ಳಾಗಿದ್ದರೋ? ದೃಢಕಾಯರಾಗಿದ್ದರೋ, ಕೃಶಾಂಗರಾಗಿದ್ದರೋ? ಆ ಗುಡಿಗಳಲ್ಲಿ ಸಿಕ್ಕಬಹುದಾದ ಅಸ್ತಿಪಂಜರಗಳನ್ನು ನೋಡಿ ಅಂದಿನ ಜನಗಳು ಹೇಗಿದ್ದರೆಂದು ಯಾರೂ ಊಹಿಸಿಲ್ಲವೇ?" ಎಂದರು.

"ನನಗೆ ಗೊತ್ತಿರುವಂತೆ ಯಾರೂ ಅದನ್ನು ಗಮನಿಸಿದಂತೆ ಕಂಡುಬ

ರುವುದಿಲ್ಲ. ಎಲ್ಲಿಯೋ ಸಿಂಧೂ ನದಿಯ ತೀರದಲ್ಲಿಯೋ, ಗಂಗಾ ನದಿಯ ತೀರದಲ್ಲಿಯೋ ಇಂತಹದೊಂದು ಕುರುಹು ಕಂಡರೆ ಎಲ್ಲರೂ ಆಸಕ್ತಿಯಿಂದ ನೋಡುತ್ತಾರೆ. ನಮ್ಮೂರಿನ ಪಕ್ಕದ ಕಾಡಿನಲ್ಲಿ ಎಂತಹದಿದ್ದರೂ ಅದು ಯಾರ ಕಣ್ಣಿಗೂ ಕಂಡುಬರುವುದಿಲ್ಲ. ಹಿತ್ತಿಲ ಗಿಡ ಮದ್ದಲ್ಲ-ಎಂಬ ಗಾದೆಯನ್ನು ಕೇಳಿಲ್ಲವೇ ?"

"ಚಪ್ಪಡಿಯನ್ನು ಬೇಕಾದ ಅಳತೆಗೆ ಕತ್ತರಿಸುವುದನ್ನು ಹೇಗೋ ಮಾಡಬಹುದು ಆದರೆ ಕಲ್ಲಿನಿಂದಲೇ ಕಲ್ಲು ಕುಟ್ಟಿ ಮಧ್ಯದಲ್ಲಿ ರಂಧ್ರ ಮಾಡುವುದಾದರೆ ಕಷ್ಟ. ಕಲ್ಲು ಚಪ್ಪಡಿಯ ಮೇಲೆ ಒಂದು ಕಡೆ ವರ್ತುಲಾಕಾರದಲ್ಲಿ ಬೆಂಕಿಯನ್ನು ಹಾಕುವುದು. ಹಾಗೆಯೇ ಅದೇ ಅಳತೆಯನ್ನಿಟ್ಟುಕೊಂಡು ಮತ್ತೊಂದು ಕಡೆ ವರ್ತುಲಾಕಾರದಲ್ಲಿ ಹಾಗೆಯೇ ಮಾಡುವುದು. ಹೀಗೆ ಮಾಡಿ ದೊಡ್ಡ ಕಲ್ಲಿನಿಂದ ಹೊಡೆದರೆ ಬೆಂದ ಸ್ಥಳವು ಬಿಟ್ಟುಹೋಗಿ ಮಧ್ಯದಲ್ಲಿ ತೂತಾಗುತ್ತದೆ"

"ಶಿಲಾಯುಗದವರ ಶಿಲ್ಪ ಕಲೆಯೂ ನಿಮಗೆ ಗೊತ್ತಿದೆ"

ರಾಜಣ್ಣ ನಗುತ್ತಾ "ಹಾಗಲ್ಲ. ಅದು ಕೇವಲ ಊಹೆ" ಎಂದ.

ಅವರು ಮಾಗಡಿಗೆ ಹೋಗಬೇಕಾಗಿದ್ದರೆ ಸಾವನದುರ್ಗದ ಮೇಲೆಯೇ ಹೋಗಬೇಕಾಗಿತ್ತು. ಹಾಗೇ ಬರುತ್ತಿದ್ದರು.

ಗಂಟೆಗಳು ಹಾರಿಹಾರಿ ಮುಂದೆ ಹೋಗಿದ್ದವು. ಬಿಸಿಲಿನ ತಾಪವು ವಿಪರೀತವಾಗಿದ್ದಿತು. ಮೂರು ಮಂದಿಯೂ ಹಸಿದಿದ್ದರು. ಜಯಾಳು ಬರಿಗಾಲಿನಲ್ಲಿ ಬಂದಿದ್ದಳು. ಎರಡು ಮೂರು ಕಡೆ ಕಾಲಿಗೆ ಮುಳ್ಳುಗಳು ಚುಚ್ಚಿಕೊಂಡಿದ್ದುದು ಇನ್ನೂ ನೋಯುತ್ತಿದ್ದಿತು. ಭಾಗ್ಯಳೇನೋ ಚಪ್ಪಲಿ ಹಾಕಿಕೊಂಡು ಬಂದಿದ್ದಳು. ಆದರೂ ಕಾಡು ಹಾದಿಯಲ್ಲಿ ಸರಾಗವಾಗಿ ಚಪ್ಪಲಿಗಳನ್ನು ಹಾಕಿಕೊಂಡು ನಡೆಯಲು ಅವಳಿಗೆ ಆಗುತ್ತಿರಲಿಲ್ಲ. ಅಕ್ಕಪಕ್ಕದ ಲಾಂಟಾನ ಮುಳ್ಳುಗಳಿಂದ ಸಿಕ್ಕಿ ಗಾಳಿಗೆ ಹಾರುವ ಸೀರೆಯ ಕೊನೆಗಳು ಹರಿಯದಂತೆ ಆ ಹುಡುಗಿಯರು ಎಚ್ಚರವಾಗಿರಬೇಕಾಗಿತ್ತು. ಉತ್ಸಾಹದಿಂದ ನಾಲ್ಕಾರು ಮೈಲಿಗಳನ್ನು ನಡೆದಿದ್ದ ಅವರು ಹಿಂತಿರುಗಿ ಬರುವಾಗ ಹೆಜ್ಜೆ ಹೆಜ್ಜೆಗೂ ಬುಸುಗುಟ್ಟುತ್ತಿದ್ದರು.

ರಾಜಣ್ಣನೂ ಆಯಾಸಗೊಂಡಿದ್ದ.

ಸಾವನದುರ್ಗದ ಬಳಿಗೆ ಬಂದಾಗ ರಾಜಣ್ಣ "ಅಂತೂ ಇಲ್ಲಿಯವರೆ ವಿಗೆ ಬಂದೆವು. ಇನ್ನೇನು ಊರಿಗೆ ಬಂದಂತೆಯೇ" ಎಂದ.

ಇನ್ನೂ ಊರಿಗೆ ಹೋಗಲು ಮೂರು ನಾಲ್ಕು ಮೈಲಿಗಳನ್ನು ನಡೆಯ ಬೇಕೆಂಬುದು ಜಯ, ಭಾಗ್ಯರಿಗೆ ಗೊತ್ತಿತ್ತು.

ಭಾಗ್ಯಳು "ಇನ್ನೇನು ಊರು ಬಂದಂತಾಯಿತೇ? ಊರು ಸೇರಿಕೊ ಳ್ಳಬೇಕಾದರೆ ಇನ್ನೂ ನಾಲ್ಕು ಮೈಲಿಗಳು ನಡೆಯಬೇಕು. ಸ್ವಲ್ಪ ಹೊತ್ತು ಕುಳಿತು ಸುದಾರಿಸಿಕೊಂಡು ಹೋಗೋಣವೆಂದಳು.

ಅವರು ಮರವೊಂದರ ನೆರಳಿನಲ್ಲಿದ್ದ ಹಾಸು ಬಂಡೆಯ ಮೇಲೆ ಕುಳಿತು ಕೊಂಡರು.

ಆಗ ರಾಜಣ್ಣನಿಗೆ ಏನೋ ತೋರಿ ಹೇಳಿದ.

"ಈ ದುರ್ಗಕ್ಕೆ ಮೊದಲು ಸಾವಂತನ ದುರ್ಗವೆಂದು ಹೆಸರಿತ್ತೆಂದೂ ಅನಂತರ ಅದೇ ಸಾವನ ದುರ್ಗವೆಂದು ಬದಲಾಯಿಸಲ್ಪಟ್ಟಿವೆ ಎಂದೂ ಹೇಳು ತ್ತಾರೆ. ನಾನೂ ಚರಿತ್ರೆಯಲ್ಲಿ ಹಾಗೆಯೇ ಓದಿದ್ದೇನೆ. ಈಗ ನನಗೊಂದು ಹೊಸ ಆಲೋಚನೆಯು ತೋರುತ್ತದೆ"!

"ಅದೇನು ಹೊಸ ಆಲೋಚನೆಯೋ?"

ಆ ಮಾತು ಹೇಳುವಾಗ ಭಾಗ್ಯಳ ಮುಖದಲ್ಲಿ ಸಣ್ಣ ತುಂಟು ನಗು ವೊಂದು ಸುಳಿಯುತಿತ್ತು. ಆದರೆ ಅದನ್ನು ರಾಜಣ್ಣ ಗುರ್ತಿಸಲಿಲ್ಲ. ಹೇಳು ತ್ತಿದ್ದ ವಿಷಯದಲ್ಲಿಯೇ ಅವನ ಮನಸ್ಸು ಆಸಕ್ತವಾಗಿತ್ತು. ತಾನು ಹೇಳು ತ್ತಿದ್ದ ವಿಷಯವನ್ನೇ ಮುಂದುವರಿಸಿದ.

"ಈ ಕೋಟೆಯನ್ನು ನೋಡಿರಿ. ಕೆಳಗೆ ಅಲ್ಲಲ್ಲಿ ಶಿಥಿಲವಾದ ಮಣ್ಣಿನ ಗೋಡೆಗಳು ಕಂಡುಬರುತ್ತವೆ. ಕಲ್ಲಿನ ಪರಿಷ್ಕಾರವಾದ ಕೋಟೆಯನ್ನು ಕಟ್ಟುವ ಮೊದಲೇ ಮಣ್ಣಿನ ಕೋಟೆಯನ್ನು ಕಟ್ಟಿದ್ದರೋ ಏನೋ? ಒಂದು ವೇಳೆ ಇದನ್ನು ಸಾವಂತರಾಯನೇ ಕಟ್ಟಿದ್ದರೆ ಅವನ ಕಾಲಕ್ಕಿಂತ ಮೊದಲು ನಿರ್ಮಾಣವಾದುದು ಈ ಮಣ್ಣಿನ ಕೋಟೆ. ಯಾವ ಹೆಸರಿನಿಂದ ಕರೆಯು ತ್ತಿದ್ದರೋ ಸಾವಂತರಾಯನ ಕಾಲಕ್ಕಿಂತಲೂ ಮೊದಲು ಇದು ಕೋಟೆ ಅಥವಾ ದುರ್ಗವಾಗಿಯೇ ಇರಬೇಕು"

ಅವನು ಹೇಳುತ್ತಿದ್ದ ಮಾತುಗಳಲ್ಲಿ ಜಯಳಿಗೆ ಆಸಕ್ತಿಯಿರಲಿಲ್ಲ.

ಆದರೂ ಕೇಳುತ್ತಿದ್ದಳು. ಆದರೆ ಭಾಗ್ಯಳ ಸ್ಥಿತಿಯು ಅದಲ್ಲ. ಅವಳು ಕಾಲೇಜು ಹಂತದವರೆವಿಗೆ ಹತ್ತಿದ್ದಳು. ಅವಳಿಗೆ ಅದು ಕುತೂಹಲಕರವಾಗಿದ್ದಿತು. ಅದೂ ಅಲ್ಲದೇ ರಾಜಣ್ಣ ಹೇಳುವ ಎಲ್ಲಾ ಮಾತುಗಳಲ್ಲಿಯೂ ಅವಳಿಗೆ ಸ್ವಾರಸ್ಯವು ಕಂಡುಬರುತ್ತಿದ್ದಿತು.

"ಈ ದುರ್ಗದ ಸುತ್ತಲೂ ಅನೇಕಾನೇಕ ಸಮಾಧಿಗಳಿರುವುದಕ್ಕೂ ಇದನ್ನು ಸಾವನದುರ್ಗವೆಂದು ಕರೆಯುತ್ತಿದ್ದುದಕ್ಕೂ ಏನೋ ಸಂಬಂಧವಿರಬೇಕು. ಸಾವನದುರ್ಗವೆಂಬ ಶಬ್ದವೇ ಮರಣದ ಅರ್ಥವನ್ನು ಸೂಚಿಸುತ್ತದೆ. ತಾವು ಸಮಾಧಿಗಳನ್ನು ಮಾಡುತ್ತಿದ್ದ ಈ ಸ್ಥಳವನ್ನು ಒಂದು ಕಾಲದ ಜನರು ಮರಣದ ಸೂಚ್ಯಾರ್ಥದಲ್ಲಿಯೇ ಕರೆದಿರಬೇಕು. ಅದಿಲ್ಲದಿದ್ದರೆ ಅವರ ಕಾಲಾನಂತರದಲ್ಲಿ ಈ ಸಮಾಧಿಗಳನ್ನು ನೋಡಿದ ಜನ ಮರಣ ಸೂಚ್ಯಾರ್ಥದಲ್ಲಿ ಇದನ್ನು ಕರೆದಿರಬೇಕು. ಅದನ್ನು ಬದಲಾಯಿಸಿ ಸಾವಂತರಾಯನು ಇದಕ್ಕೆ ತನ್ನ ಹೆಸರನ್ನು ಇಟ್ಟುಕೊಂಡ. ಅವನ ಮತ್ತು ಆ ವಂಶಜರ ಆಳ್ವಿಕೆಯು ಕೇವಲ ೫೦–೬೦ ವರ್ಷಗಳು ಮಾತ್ರ. ಅನಂತರ ಈ ಸ್ಥಳವನ್ನು ಇಮ್ಮಡಿ ಕೆಂಪೇಗೌಡ ಆಕ್ರಮಿಸಿದ. ಆ ವೇಳೆಗೆ ಈ ದುರ್ಗಕ್ಕಿದ್ದ ಮೊದಲಿನ ಹೆಸರು ಜನರಿಗೆ ಮರೆತಿರಲಿಲ್ಲವೆಂದು ಕಂಡುಬರುತ್ತದೆ. ಕೆಂಪೇಗೌಡ ಅದಕ್ಕೆ ಪುನಃ ಮೊದಲಿನ ಹೆಸರನ್ನೇ ಇಟ್ಟ."

"ಹಾಗಾದರ ಕೆಂಪೇಗೌಡ ದೊಡ್ಡ ಮನುಷ್ಯನೆಂದು ಕಾಣುತ್ತದೆ"

"ನಿಸ್ಸಂದೇಹವಾಗಿ. ಇಲ್ಲದಿದ್ದರೆ ಸಾವಂತರಾಯನಂತೆ ತನ್ನ ಹೆಸರಿನ ಮೇಲೆಯೇ ಅವನೀ ಕೋಟೆಯನ್ನು ಕರೆಯಬಹುದಾಗಿತ್ತು. ಅಥವಾ ತನಗೆ ಪ್ರಿಯರಾದವರ ಹೆಸರನ್ನಾದರೂ ಇಡಬಹುದಾಗಿತ್ತು. ಹಾಗೆ ಮಾಡದೇ ಅವನು ಈ ದುರ್ಗಕ್ಕೆ ಮೊದಲಿದ್ದ ಹೆಸರನ್ನೇ ಇಟ್ಟುದು ಖಂಡಿತವಾಗಿ ಕೆಂಪೇಗೌಡನ ಉದಾರ ಮನೋಭಾವವನ್ನೂ, ಘನತೆಯನ್ನೂ ತೋರಿಸುತ್ತದೆ"

ಅವರುಗಳು ವಿಶ್ರಾಂತಿಗೆಂದೇ ಆ ಮರದ ನೆರಳಿನಲ್ಲಿ ಕುಳಿತುಕೊಂಡಿದ್ದರು. ಆದರೆ ಪೂರ್ಣವಾಗಿ ವಿಶ್ರಾಂತಿ ಪಡೆಯುವ ಸ್ಥಿತಿಯಲ್ಲಿರಲಿಲ್ಲ. ಇನ್ನೂ ಬಲು ದೂರ ಹೋಗಬೇಕಾಗಿತ್ತು. ಆಗಲೇ ಮಧ್ಯಾನ್ಹವಾಗಿತ್ತು. ಎದ್ದು ಹೊರಟರು.

ದಾರಿಯಲ್ಲಿ ಹೋಗುತ್ತಾ ಭಾಗ್ಯಳು "ಅಂದರೆ ಒಂದು ಕಾಲದಲ್ಲಿ ಈ

ಪ್ರದೇಶವು ಕೆಲವರು ಮಾಡಿಕೊಂಡಿದ್ದ ಸ್ಮಶಾನ ಅಲ್ಲವೇ ?'' ಎಂದಳು.

''ಹುಂ ಒಂದು ವಿಧವಾಗಿ ಸ್ಮಶಾನವೇ ಹೌದು''

''ನಾವು ಈಗ ಮೂರು ನಾಲ್ಕು ಮೈಲಿಗಳ ದೂರ ನಡೆದುಕೊಂಡು ಹೋಗಿದ್ದೆವು. ಇನ್ನೂ ಮೂರು ನಾಲ್ಕು ಮೈಲಿಗಳ ದೂರದಲ್ಲಿಯೂ ಸಮಾಧಿಗಳಿವೆ ಎನ್ನುತ್ತೀರಿ. ಇದು ಸಾವನದುರ್ಗದ ಒಂದು ಕಡೆಯ ಮಾತಾಯಿತು. ಇತರ ಕಡೆಗಳಲ್ಲಿಯೂ ಇಂತಹ ಗುಡಿಗಳಿವೆಯೋ ಏನೋ ? ಜನ ಇಷ್ಟು ದೊಡ್ಡ ಪ್ರದೇಶವನ್ನು ಸಮಾಧಿಯಾಗಿ ಆರಿಸಿಕೊಳ್ಳಬೇಕಾದರೆ ಆ ಜನದ ಸಂಖ್ಯೆ ಎಷ್ಟು ದೊಡ್ಡದಾಗಿರಬೇಕು ?''

''ಹುಂ, ಆ ಜನ ವಿಪುಲ ಸಂಖ್ಯೆಯಲ್ಲಿಯೇ ಇದ್ದಿರಬೇಕು. ಕಾಲ ಗರ್ಭದಲ್ಲಿ ಅಡಗಿಹೋಗಿರುವ ಆ ಜನದ ಕತೆಯನ್ನು ಯಾರು ಬಲ್ಲರು ?''

ಅವರುಗಳು ಸಾವನದುರ್ಗದ ಸುತ್ತಮುತ್ತಲಲ್ಲಿರುವ ಗುಡಿಗಳ ಮತ್ತು ಕಾಲ ಗರ್ಭದಲ್ಲಿ ಅಡಗಿಹೋಗಿರುವ ಜನಗಳ ವಿಷಯವನ್ನು ಮಾತನಾಡುತ್ತಲೇ ಬಂದರು.

ಮನೇ ಸೇರುವ ವೇಳೆಗೆ ಮೂರು ಗಂಟೆಯು ಸಮಯವಾಗಿತ್ತು.

ಗುಂಡೂರಾಯರೂ ವೆಂಕಟೇಶಯ್ಯನವರೂ ಬೀದಿಯ ಜಗುಲಿಯ ಮೇಲೆಯೇ ಇವರುಗಳಿಗಾಗಿ ಕಾಯುತ್ತಾ ಕುಳಿತಿದ್ದರು.

ಬಂದವರುಗಳನ್ನು ಕಂಡು ದೀರ್ಘವಾದ ನಿಶ್ವಾಸವನ್ನು ಬಿಟ್ಟು ವೆಂಕಟೇಶಯ್ಯನವರು "ಯಾಕಪ್ಪಾ. ಇಷ್ಟು ಹೊತ್ತು ಮಾಡಿಬಿಟ್ಟಿರಿ" ಎಂದು ಕೇಳಿದರು.

ಇಷ್ಟು ಹೊತ್ತು ಮಾಡಿಕೊಂಡು ಬಂದುದು ಬಲು ತಪ್ಪಾಯಿತೆಂದು ರಾಜಣ್ಣನಿಗೆ ಗೊತ್ತಾಗಿತ್ತು. ಆದರೂ ಏನಾದರೂ ಹೇಳಿ ಮುಗಿಯಬೇಕಲ್ಲ.

''ಆ ಗುಡಿಗಳು ದುರ್ಗಕ್ಕೆ ಬಹಳ ದೂರದಲ್ಲಿವೆ. ಅವುಗಳನ್ನು ನೋಡಿಕೊಂಡು ಬರಬೇಕಾದರೆ ಬಹಳ ಹೊತ್ತಾಗಿ ಹೋಯಿತು''

''ಗುಂಡಣ್ಣ ಚಡಪಡಿಸಲಾರಂಭಿಸಿದ. ಹೊತ್ತಾಗುತ್ತಾ ಬಂದ ಹಾಗೆ ನನಗೂ ಗಾಬರಿಯೇ ಆಯಿತು. ಹುಡುಕಿಕೊಂಡು ಬರೋಣವೆಂದು ನಾವೆ ಹೊರಟದ್ದೆವು. ಇನ್ನೈದು ನಿಮಿಷ ನೋಡಿಕೊಂಡು ಹೊರಡೋಣವೆಂದು

ಇಲ್ಲಿ ಕುಳಿತೆವು. ಹೋಗಲಿ, ಅಂತೂ ಬಂದಿರಲ್ಲ, ಕೈಕಾಲು ತೊಳೆದು ಕೊಂಡು ಊಟ ಮಾಡಿರಿ''

ಊಟಕ್ಕಾಗಿ ಮೂರು ಮಂದಿಯೂ ಒಳಗೆ ಹೋದರು.

''ನೋಡಿದೆಯಾ. ಗುಂಡಣ್ಣ. ಹುಡುಗರು ಬಂದ ಮೇಲೆಯೇ ಊಟ ಮಾಡೋಣವೆಂದೆಯಲ್ಲಾ. ತಾಕೋತಾಕಾಗಿ ಮೂರು ಗಂಟೆಗೆ ಬಂದರು. ಇವರಿಗಾಗಿ ಕಾಯುತ್ತಾ ಕುಳಿತಿದ್ದಿದ್ದರೆ ಎಷ್ಟು ಹೊತ್ತಾಗುತಿತ್ತು. ಅದಕ್ಕೇ ನಾನು ನಿನಗೆ ಊಟ ಮಾಡಿಸಿದ್ದು"

"ಸರಿಯಪ್ಪ. ನಿನ್ನಷ್ಟು ಯಮಗುಂಡಿಗೆ ನನಗಿಲ್ಲವಲ್ಲ"

"ಇದರಲ್ಲಿ ಗುಂಡಿಗೆಯೇನು ಬಂದಿತು? ಹಗಲು ಹೊತ್ತು. ಅದರಲ್ಲಿಯೂ ಗಂಡಸು ಜೊತೆಯಲ್ಲಿ ಹೋಗಿದ್ದಾನೆ. ಹೆದರುವ ಕಾರಣವೇ ಇರಲಿಲ್ಲ''

ಅದಕ್ಕೆ ಗುಂಡೂರಾಯರೇನೂ ಮಾತನಾಡಲಿಲ್ಲ,

ವೆಂಕಟೇಶಯ್ಯನವರು "ಬಾ. ಈಗಲಾದರೂ ಹಾಯಾಗಿ ಮಲಗಿ ನಿದ್ದೆ ಮಾಡೋಣ" ಎಂದು ಗೆಳೆಯನನ್ನು ಕರೆದುಕೊಂಡು ಒಳಗೆ ಹೋದರು.

ಮನೆಯಲ್ಲಿ ಊಟಗಳೆಲ್ಲಾ ಮುಗಿಯುವ ವೇಳೆಗೆ ಮೂರೂಮುಕ್ಕಾಲು ಗಂಟೆಯಾಯಿತು. ಅದರಿಂದ ಮಾಮೂಲಾಗಿ ಬರುತ್ತಿದ್ದ ಹಾಗೆ ನಾಲ್ಕು ಗಂಟೆಗೆ ಕಾಫೀ ಬರಲಿಲ್ಲ.

ಅದು ಬರುವುದು ಐದೂವರೆ ಗಂಟೆಯಾಯಿತು.

ಕಾಫಿಯನ್ನು ಕುಡಿಯುತ್ತಾ ಗುಂಡೂರಾಯರು ''ನಾಳೇ ಬೆಳಗಾಗಿನ ಬಸ್ಸಿಗೆ ಹೇಳಿಬಿಡಪ್ಪ. ಸಾವನದುರ್ಗವನ್ನೂ ನೋಡಿಯಾಯಿತಲ್ಲ" ಎಂದರು.

''ನಾಳೆಯ ದಿನ ಸೀತಾ ನಿಮಗೊಂದು ಸಣ್ಣ ಔತಣವನ್ನು ಮಾಡಬೇಕೆಂದಿದ್ದಾಳೆ. ಊಟ ಮಾಡಿಕೊಂಡು ಮಧ್ಯಾಹ್ನದ ಬಸ್ಸಿಗೆ ಹೊರಡಿರಿ''

''ಆಗುವುದಿಲ್ಲಪ್ಪ. ನೀನು ಒಪ್ಪಿದರೂ ಒಪ್ಪದಿದ್ದರೂ ನಾಳೆ ಬೆಳಗಾಗ ಹಾಸಿಗೆಗಳನ್ನು ಕಟ್ಟಿಕೊಂಡು ನಾವು ಹೊರಟುಬಿಡುತ್ತೇವೆ''

''ಅದು ಹೇಗೆ ಹೊರಡುತ್ತೀಯೋ ಹೊರಡು, ನೋಡೋಣ. ವೆಂಕಟೇಶಯ್ಯ ಎಂದರೆ ಈ ಊರಿನಲ್ಲಿ ತಲೆಗೆ ಬಟ್ಟೆಯಿಲ್ಲದವನು ಎಂದಿದ್ದೀಯೇನು? ಬಸ್ ಸರ್ವೀಸ್‌ನವರೆಲ್ಲಾ ನಮ್ಮ ಊರಿನವರು. ನಿಮ್ಮನ್ನಾರನ್ನೂ ಕರೆದು ಕೊಂಡು ಹೋಗಕೂಡದೆಂದು ಹೇಳಿಬರುತ್ತೇನೆ. ನನ್ನ ಮಾತು ಕೇಳಿಕೊಂಡು

ನಾಳೀ ಮಧ್ಯಾನ್ಹದ ಬಸ್ಸಿಗೆ ಹೋದೆಯೋ ಸರಿ. ಇಲ್ಲದಿದ್ದರೆ ತಪ್ಪೊಪ್ಪಿಕೊಂಡು ಇನ್ನೊಂದು ವಾರ ಬಿಟ್ಟುಕೊಂಡು ಹೋಗಬೇಕಾಗುತ್ತದೆ''

ವೆಂಕಟೇಶಯ್ಯನವರು ಹಾಗೆಯೇ ಮಾಡುವಂತಹ ಆಸಾಮಿಯೆಂದುಕೊಂಡ ಗುಂಡೂರಾಯರು ಅದಕ್ಕೆ ಒಪ್ಪಿಕೊಂಡರು.

ಮಾರನೆಯ ದಿನ ಬೆಳಗಾಗ ಹತ್ತು ಗಂಟೆಯ ವೇಳೆಯಲ್ಲಿ ರಾಜಣ್ಣ ಸೂಕ್ಷ್ಮವಾಗಿ ಹೇಳಿದ.

''ವೆಂಕಟೇಶಯ್ಯನವರೇ ! ನಾನೂ ಈ ಹೊತ್ತೇ ಪ್ರಯಾಣ ಮಾಡುತ್ತೇನೆ. ಅಪ್ಪಣೆಯಾಗಬೇಕು"

ಆತ ನಗುತ್ತಾ ''ನೀನೇಕೆ ಅವರ ಜೊತೆ ಹತ್ತಬೇಕು. ನಿನಗೇನು ಅವಸರ ?'' ಎಂದರು.

"ಅವರ ಜೊತೆ ಹತ್ತಲಿಲ್ಲ. ಅವಸರವೆಂದರೆ ಏನು ? ಈಗಾಗಲೇ ನಾನು ಬಂದು ಒಂದು ತಿಂಗಳಾಗುತ್ತಾ ಬಂದಿತು. ಈ ರಜಾದಲ್ಲಿ ನಾಲ್ಕು ದಿನ ಸಹ ಊರಿನಲ್ಲಿರಲಿಲ್ಲ. ಅಲ್ಲಿ ಹೋಗಿ ಎರಡು ದಿನವಾದರೂ ಇರಬೇಕು. ಇನ್ನು ಬೆಂಗಳೂರಿಗೆ ಹೋಗಿ ಬಂದು ರೂಂ ನೋಡಿಕೊಳ್ಳಬೇಕು. ಈಗಿನ ಕಾಲದಲ್ಲಿ ಮನೆಯಾಗಲೀ, ರೂಮಾಗಲೀ ಬಾಡಿಗೆಗೆ ಸಿಕ್ಕುವುದು ಎಷ್ಟು ಕಷ್ಟವೆಂಬುದು ನಿಮಗೆ ಗೊತ್ತೇ ಇದೆ. ಈ ವರ್ಷ ಒಂದು ಹಾಸ್ಟೆಲ್ ಷುರು ಮಾಡಬೇಕೆಂದು ನಮ್ಮ ಕಾಲೇಜಿನವರಿಗಿದೆಯಂತೆ. ಅದೇನಾದರೂ ಆದರೆ ದೊಡ್ಡ ತಾಪತ್ರಯ ತಪ್ಪಿದಂತಾಗುತ್ತದೆ"

ರಾಜಣ್ಣನ ಪ್ರಯಾಣದಲ್ಲಿ ಆರಂಭವಾದ ಮಾತು ಮತ್ತಾವುದೋ ಕಡೆಗೆ ತಿರುಗಿತು.

"ಯಾವುದೂ ನಿರ್ಧರವಾಗದೇ ಇದುವರೆವಿಗೆ ಇದ್ದ ಕೋಣೆಯನ್ನೇಕೆ ಬಿಟ್ಟೆ. ಎರಡು ತಿಂಗಳ ಬಾಡಿಗೆ ಭಾರವಾಗಿತ್ತೇ ?"

''ನಾನು ಬಿಡಲಿಲ್ಲ. ಅವರಾಗಿ ಬಿಡಿಸಿದರು. ನಾನಿರುವ ಮನೆಯ ಹುಡುಗನಿಗೆ ಮದುವೆಯಾಗಿದೆ, ಹುಡುಗಿ ಮನೆಗೆ ಬರುತ್ತಾಳೆ. ಜಾಗವಿಲ್ಲ. ಕೋಣೆಯನ್ನು ಬಿಟ್ಟುಕೊಡಬೇಕು–ಎಂದರೆ ಹೇಗೆ ಬಿಡದೇ ಇರುವುದು ?''

''ಒಳ್ಳೆಯದೇ ಆಯಿತೆನ್ನು. ಬಿಡಲೇಬೇಕಾದ ರೂಂನ ಜೊತೆಗೆ ನವ ದಂಪತಿಗಳಿಗೆ ಸ್ಥಳ ಮಾಡಿಕೊಟ್ಟ ಪುಣ್ಯವು ಸಹ ಬಂದಿತು"

ಆ ಮಾತು ಹೇಳಿ ವೆಂಕಟೇಶಯ್ಯನವರು ನಗುತ್ತಾ ಹೊರಟುಹೋದರು.

ಮೌನಕ್ಕೆ ಒಪ್ಪಿಗೆಯೆಂದೇ ಅರ್ಥವೆಂದುಕೊಂಡು ರಾಜಣ್ಣ ಹಾಸಿಗೆ ಬಟ್ಟೆಗಳನ್ನು ಕಟ್ಟಿದ.

ಆ ದಿನ ಮಧ್ಯಾನ್ಹ ಸೀತಮ್ಮನವರು ಸೊಗಸಾದ ಊಟವನ್ನೇ ಮಾಡಿದ್ದರು. ಬೀಗರಿಗೆ ಮಾಡಿದ್ದ ಊಟದಷ್ಟೇ ಭರ್ಜರಿಯಾಗಿತ್ತು.

ಮಧ್ಯಾನ್ಹ ಸ್ವಲ್ಪ ಬೇಗನೇ ಕಾಫೀ ಕುಡಿದುಕೊಂಡು, ಬಸ್ ಸ್ಟಾಂಡ್‌ಗೆ ಹೋದರು, ಬಸ್ ಸ್ಟಾಂಡ್ ಮನೆಗೆ ಹತ್ತಿರವಾಗಿಯೇ ಇತ್ತು. ವೆಂಕಟೇಶಯ್ಯನವರೂ ಅವರ ಕುಟುಂಬ ಎಲ್ಲರೂ ಅವರನ್ನು ಬಸ್ ಹತ್ತಿಸುವುದಕ್ಕೆ ಹೋದರು.

ವೆಂಕಟೇಶಯ್ಯನವರು ಬಸ್‌ನವರಿಗೆ ಬೆಳಗಾಗಲೇ ಹೇಳಿ ಕಳಿಸಿದ್ದರಿಂದ ಸರಿಯಾದ ಸೀಟುಗಳು ಸಿಕ್ಕಿದವು.

ಬಸ್ ಹೊರಡುವ ಮೊದಲು ವೆಂಕಟೇಶಯ್ಯನವರು "ಗುಂಡಣ್ಣ. ಬೆಂಗಳೂರು ಸೇರುವ ವೇಳೆಗೆ ಸಂಜೆಯಾಗುತ್ತದೆ. ಅಷ್ಟು ಹೊತ್ತಿನಲ್ಲಿ ರಾಜಣ್ಣನಿಗೆ ಚನ್ನಪಟ್ಟಣಕ್ಕೆ ರೈಲಾಗಲೀ ಬಸ್ ಆಗಲೀ ಸಿಕ್ಕುವುದಿಲ್ಲ. ಯಾವುದಾದರೂ ಹೋಟಲಿಗೆ ಹೋಗಬೇಕಾಗುತ್ತದೆ. ಆದರಿಂದ ಅವನನ್ನು ಮನೆಗೆ ಕರೆದುಕೊಂಡುಹೋಗು. ರಾತ್ರಿ ಮಲಗಿದ್ದು ಬೆಳಗಾನ ಊರಿಗೆ ಹೋಗಲಿ'' ಎಂದರು.

''ಮಹರಾಯನಾಗಿ ಬರಲೀನಪ್ಪ, ನಾನು ಬೇಡವೆನ್ನುತ್ತೇನೆಯೇ?"

"ನೀನು ಬೇಡವೆನ್ನುವುದಿಲ್ಲ. ಅವನಿಗೆ ಸಂಕೋಚ. ಸ್ವಲ್ಪ ಉಪಚಾರ ಹೇಳಿ ಕರೆದುಕೊಂಡು ಹೋಗು''

ಗುಂಡೂರಾಯರು ಸಮ್ಮತಿಯನ್ನು ಸೂಚಿಸಿದರು.

ಗುಂಡೂರಾಯರ ಮನೆಯಲ್ಲಿ ಹೋಗಿರಲು ರಾಜಣ್ಣನಿಗೆ ಎಷ್ಟು ಸಂಕೋಚವಿತ್ತೋ ಈಗ ವೆಂಕಟೇಶಯ್ಯನವರು ಹೇಳಿದ ಮಾತು ಅದಕ್ಕಿಂತಲೂ ಸಂಕೋಚವನ್ನುಂಟು ಮಾಡಿತು.

೮

"ಹುಡುಗ ಬಹಳ ಒಳ್ಳೆಯವನು. ಅದರಿಂದ ಹೇಳುತ್ತೇನೆ. ಎಲ್ಲೋ ರೂಂ ಮಾಡಿಕೊಂಡು ಯಾಕೆ ಹೋಗಬೇಕು. ನಮ್ಮಮನೆಯ ಬೀದಿಯ ಕೋಣೆಯನ್ನು ಯಾರೂ ಉಪಯೋಗಿಸುತ್ತಿಲ್ಲ. ನಿಮ್ಮ ರಾಜಣ್ಣ ಇಲ್ಲಿಯೇ ಯಾಕೆ ಇರಬಾರದು ?

ಗುಂಡೂರಾಯರು ಹೇಳಿದ ಮಾತನ್ನು ಕೇಳಿ ವೆಂಕಟೇಶಯ್ಯನವರಿಗೆ ಬಹಳ ಆಶ್ಚರ್ಯವಾಯಿತು.

ಆಶ್ಚರ್ಯವುಂಟಾಗಲು ಸರಿಯಾದ ಕಾರಣವೂ ಇತ್ತು. ಜರೂರೆಂದು ಕಾಗದ ಬರೆದು ಮಾಗಡಿಯಿಂದ ಕರೆಸಿಕೊಂಡು ಬಂದ ಕೂಡಲೇ ಈ ಮಾತ ಹೇಳುವುದೇ ? ಇದು ಅಷ್ಟು ಜರೂರು ವಿಷಯವೇ ?

ಅದನ್ನು ಅರ್ಥ ಮಾಡಿಕೊಳ್ಳುವುದು ವೆಂಕಟೇಶಯ್ಯನವರಿಗೆ ಕಷ್ಟವಾಗಲಿಲ್ಲ. ಆದರೂ ಅರ್ಥವಾಗದವರಂತೆ ಕೇಳಿದರು.

"ಈ ವಿಷಯ ಹೇಳುವುದಕ್ಕಾಗಿ ನನ್ನನ್ನು ಕರೆಸಿದೆಯಾ ?"

"ಅದೇನಿಲ್ಲ. ನಿನ್ನೊಂದಿಗೆ ಮಾತನಾಡಬೇಕಾದ ವಿಷಯಗಳೆಷ್ಟೋ ಇವೆ. ಆದರೆ ಇದೂ ಒಂದು ವಿಷಯವಿತ್ತು. ಒಳ್ಳೆಯ ಹುಡುಗ. ರೂಂ ಸಿಕ್ಕದೇ ತಾಪತ್ರಯಪಡುತ್ತಿದ್ದರೆ ನೋಡಿಕೊಂಡಿರುವುದು ಹೇಗೆ ?"

"ಅವನು ತಾಪತ್ರಯಪಡುತ್ತಿದ್ದಾನೆಂದು ಹೇಗೆ ಗೊತ್ತಾಯಿತಯ್ಯ"

"ಮೊನ್ನೆ ಮಾರ್ಕೆಟ್ಟಿನ ಬಳಿ ಸಿಕ್ಕಿದ್ದರು. ಕೈ ಮುಗಿದರು. ಅವರ ಯೋಗಕ್ಷೇಮ ವಿಚಾರಿಸಿದೆ. ಮಾತನಾಡಿಸುತ್ತಾ ಮನೆಯವರೆವಿಗೆ ಕರೆದುಕೊಂಡು ಬಂದೆ. ಇನ್ನೂ ಸರಿಯಾದ ರೂಂ ಸಿಗಲಿಲ್ಲ. ಅದಕ್ಕಾಗಿಯೇ ಪರದಾಡುತ್ತಿದ್ದಾನೆ. ಬೆಳಗಾಗ ಬೆಂಗಳೂರಿಗೆ ಬಂದು ಸಾಯಂಕಾಲದ ಗಾಡಿಗೆ ಚನ್ನಪಟ್ಟಣಕ್ಕೆ ಹೋಗುತ್ತಿದ್ದೇನೆ–ಎಂದು ಹೇಳಿದ"

"ನಿನ್ನ ಮನೆಯ ಬೀದೀ ಕೋಣೆಯನ್ನು ಕೊಡುವುದಾಗಿ ನೀನೇ ಹೇಳಬೇಕಾಗಿತ್ತು"

"ಹೇಳಬಹುದಾಗಿತ್ತು. ಆದರೆ ನನ್ನದೂ ಅವನದೂ ಇನ್ನೂ ಹೊಸ ಪರಿಚಯ. ನಾನು ಹೇಳಿದರೆ ಅವನಿಗೆ ಸಂಕೋಚವಾಗಬಹುದು. ನಿನ್ನಿಂದಲೇ ಹೇಳಿಸಬೇಕೆಂದು ತೋರಿತು. ಅದರಿಂದ ನಿನ್ನೊಂದಿಗೆ ಹೇಳಿದೆ"

"ಅವರ ಕಾಲೇಜಿನವರು ಹಾಸ್ಟಲನ್ನೋ ಇನ್ನೇನನ್ನೋ ಮಾಡುತ್ತಾರೆಂದು ಹೇಳಿದನಲ್ಲ''

"ಅದೇನೂ ಮಾಡಿದಂತೆ ಇಲ್ಲ"

"ಹುಂ. ನೀನು ಹೇಳುವುದೂ ಒಂದು ರೀತಿ ಸರಿ. ನಮಗೆ ಬೇಕಾದವನು ಯಾವುದಾದರೂ ತಾಪತ್ರಯದಲ್ಲಿ ಸಿಕ್ಕಿಹಾಕಿಕೊಂಡಿರುವಾಗ ನಾವು ನೋಡಿಕೊಂಡಿರುವುದು ತರವಲ್ಲ. ನಮ್ಮ ಕೈಲಾಗುವಷ್ಟಾದರೂ ಮಾಡದಿದ್ದರೆ ಹೇಗೆ ?"

"ಅಷ್ಟೇನಪ್ಪಾ. ಅದೇ ಭಾವನೆಯಿಂದ ಯೋಚನೆ ಮಾಡುತ್ತಿದ್ದೆ. ನೀನು ಇದ್ದರೆ ಸರಿಹೋಗುತ್ತದೆಯೆಂದು"

''ನೀನು ಹೇಳುವುದೆಲ್ಲಾ ಸರಿಯಾಗಿದೆ. ಅವನಿಗೆ ಹೇಳಿಸಲು ನನ್ನನ್ನು ಹೊಂಚಿದ್ದೂ ಸರಿಯಾಗಿದೆ. ಆದರೆ ಈ ಊರಿನಲ್ಲಿ ಅವನನ್ನು ಎಲ್ಲಿ ಹುಡುಕಿಕೊಂಡು ಬರಲಿ-ಹೇಳು"

"ದಿನವೂ ಅವರೂರಿಗೆ ಹೋಗಿ ಬರುತ್ತಿರುವುದಾಗಿ ಹೇಳಿದ. ಊರಿಗೆ ಕಾಗದ ಹಾಕಿದರೆ ನಿನ್ನನ್ನು ಬಂದು ನೋಡಬಹುದು ಆದರೆ ಈ ವಿಷಯವಾಗಿ ನಾವು ಇಷ್ಟೊಂದು ಅಭಿನಿವೇಶವನ್ನು ತೋರಿಸುವುದು ಸರಿಯೋ ಎಂದು ಸಹ ಒಂದೊಂದು ಬಾರಿ ಅನ್ನಿಸುತ್ತದೆ''

"ಅದಕ್ಕೇನಂತೆ. ಯಾರಿಗಾದರೂ ಸಹಾಯ ಮಾಡಬೇಕು ಎಂದಿರುವಾಗ ಆ ಭಾವನೆಯನ್ನು ಮನಸ್ಸಿನಲ್ಲಿಯೇ ಇಟ್ಟುಕೊಂಡು ಕುಳಿತುಕೊಂಡಿದ್ದರೆ ಏನು ಪ್ರಯೋಜನ ? ಯಾವಾಗ ಸಹಾಯ ಮಾಡುತ್ತೇವೆಂದು ನಿರ್ಧರಿಸಿದೆವೋ ಆಗ ಅದಕ್ಕೆ ಬೇಕಾದುದೆಲ್ಲವನ್ನೂ ಮಾಡಲೇಬೇಕು"

ಆ ದಿನವೇ ವೆಂಕಟೇಶಯ್ಯನವರು ಚನ್ನಪಟ್ಟಣಕ್ಕೆ ಕಾಗದ ಬರೆದರು. ಮಾರನೆ ದಿನ ಸಂಜೆಯ ಒಳಗಾಗಿ ರಾಜಣ್ಣ ಬಂದು ನೋಡಿದ ಅವನನ್ನು ಸಮೀಪದಲ್ಲಿ ಕೂರಿಸಿಕೊಂಡು ವೆಂಕಟೇಶಯ್ಯನವರು ಯೋಗಕ್ಷೇಮವನ್ನೆಲ್ಲಾ ಮಾಡಿದರು. ಅವನ ತಾಯಿತಂದೆಗಳ ವಿಷಯವನ್ನೂ, ಊರಿನ ಸಮಾಚಾರನ್ನು ವಿಚಾರಿಸಿದರು.

"ನಿನ್ನ ಸ್ನೇಹಿತನಿಂದಲೇನಾದರೂ ಕಾಗದ ಬಂದಿತೇನಪ್ಪಾ"

"ಇಲ್ಲ. ಈಚೆಗೇನೂ ಬರಲಿಲ್ಲ. ಇಷ್ಟರಲ್ಲಿಯೇ ಓದುವುದಕ್ಕಾಗಿ ಇಲ್ಲಿಗೇ ಬಂದು ಬಿಡುತ್ತಾನೆ. ಅದರಿಂದ ಬರೆಯಲಿಲ್ಲವೋ ಏನೋ ?"

ಹೀಗೆ ಆ ಮಾತು ಈ ಮಾತುಗಳನ್ನು ಸ್ವಲ್ಪಹೊತ್ತು ಆಡುತ್ತಿದ್ದರು. ವಿಶಾಲಾಕ್ಷಮ್ಮನವರಿಗೆ ಹೇಳಿ ಕಾಫೀ ತರಿಸಿಕೊಟ್ಟರು,

ಅವನು ಹೋಗುತ್ತೇನೆಂದಾಗ "ಸರಿಯಪ್ಪ, ಬೆಂಗಳೂರಿಗೆ ಯಾವುದೋ ಕೆಲಸದ ಮೇಲೆ ಬಂದಿದ್ದೇ. ನೀನು ಚನ್ನಪಟ್ಟಣದಿಂದ ಬರುತ್ತಿರುತ್ತೀ ಅಂತ ನಮ್ಮ ಗುಂಡಣ್ಣ ಹೇಳಿದ. ಅದರಿಂದಲೇ ಬೆಂಗಳೂರು ಕಡೆ ಬಂದರೆ ಒಂದು ಬಾರಿ ಇಲ್ಲಿ ಬಂದು ಹೋಗು-ಅಂತ ಬರೆದಿದ್ದದ್ದು" ಎಂದರು.

ವೆಂಕಟೇಶಯ್ಯನವರು ಈ ಮಾತೇ ಎತ್ತದೇ ಇದ್ದುದು ಗುಂಡೂರಾಯರಿಗೆ ಆಶ್ಚರ್ಯವಾಯಿತು. ಅವನು "ಹೊರಡುತ್ತೇನೆ"—ಎಂದಾಗಲೂ "ಸರಿಯಪ್ಪ" ಎಂದು ಭರತವಾಕ್ಯವನ್ನು ಹೇಳಿಬಿಟ್ಟಿದ್ದರು. ಇವನನ್ನು ಯಾವ ಉದ್ದೇಶದಿಂದ ಕರೆಸಿದರೋ ಅದ ನೆರವೇರದೇ ವಾಪ್ಸು ಕಳಿಸಿಬಿಡುತ್ತಿದ್ದಾರೆಯಲ್ಲಾ—ಎನ್ನಿಸಿತು. ವಯಸ್ಸಾಯಿತು, ಮುದುಕನಿಗೆ ತಮ್ಮ ಹಾಗೆಯೇ ಮರವಿರಬೇಕು—ಎಂದುಕೊಂಡರು ಎಷ್ಟೇ ಮರವಿದ್ದರೂ ಮುಖ್ಯವಾದ ಉದ್ದೇಶವನ್ನೇ ಮರೆತುಬಿಡುವುದೇ ? ತಮಗೂ ಮರವಿದೆ, ಆದರೆ ಈತನಂತೆ ಅರುಳುಮರುಳು ಇನ್ನೂ ಬಂದಿಲ್ಲ.

ಗುಂಡೂರಾಯರು ಈ ರೀತಿಯಾಗಿ ಯೋಚಿಸುತ್ತಿರುವಾಗಲೇ ಏನೋ ತೋಚಿಕೊಂಡು ಹೇಳುವಂತೆ ವೆಂಕಟೇಶಯ್ಯನವರು ಹೇಳಿದರು.

"ಅಂದ ಹಾಗೆ, ನೀನು ರೂಂ ಹುಡುಕುತ್ತಿದ್ದೆಯಲ್ಲಾ ಅದು ಸಿಕ್ಕಿತೇ ರಾಜಣ್ಣ"

"ಇನ್ನೂ ಸಿಕ್ಕಲಿಲ್ಲ. ಅದೇ ತಾಪತ್ರಯದಲ್ಲಿದ್ದೇನೆ"

"ನೀನು ಹೋದಬಾರಿ ಸಿಕ್ಕಿದಾಗ ರೂಂ ಹುಡುಕುತ್ತಿದ್ದೆ - ಎಂದು ಗುಂಡಣ್ಣ ಹೇಳಿದ"

"ನಿಜ. ಆದರೆ ಎಲ್ಲಾ ಅನುಲವಾಗಿರುವ ಜಾಗ ಸಿಕ್ಕಬೇಕಲ್ಲ"

"ಅನುಕೂಲ ಎಂದರೆ ಅಡಿಗೆಗಿಡಿಗೆ ಮಾಡಿಕೊಳ್ಳುವ ಯೋಚನೆ ಏನಾದರೂ ಇದೆಯೇನು ? ಹೋದ ವರ್ಷ ನಾನು ನೋಡಿದಾಗ ನೀನು ಅಡಿಗೆ ಮಾಡಿಕೊಳ್ಳುತ್ತಿದ್ದ ಹಾಗೆ ಕಂಡುಬರಲಿಲ್ಲ"

"ಇಲ್ಲ. ಊಟ ಸ್ನಾನ ಎಲ್ಲವನ್ನೂ ಹೋಟಲಿನಲ್ಲಿ ಮಾಡಿಕೊಳ್ಳುತ್ತೇನೆ. ಆದರೆ ಕೈ ಕಾಲು ತೊಳೆದುಕೊಳುವುದಕ್ಕೂ, ಅವಶ್ಯಕತೆ ಏರ್ಪಟ್ಟರೆ ಒಂದೆರಡು ಬಟ್ಟೆಗಳನ್ನು ಹಿಂಡಿಕೊಳ್ಳುವುದಕ್ಕೂ ಅವಕಾಶವಿರಬೇಕಲ್ಲ"

"ನಿನಗೆ ಎಲ್ಲಿಯೂ ಒಂದು ರೂಮೇ ಸಿಕ್ಕದೇ ಇದ್ದರೆ ನನಗೆ ಒಂದು ಆಲೋಚನೆಯಿದೆ. ಎಲ್ಲಿಯಾದರೂ ಒಂದು ರೂಂ ಗೊತ್ತು ಮಾಡಿಕೊಡುವುದು ನನ್ನ ಜವಾಬ್ದಾರಿ''

"ನೀವೊಂದು ರೂಂ ಗೊತ್ತು ಮಾಡಿಕೊಡುವುದು ಸಾಧ್ಯವಾದರೆ ಮಾಡಿಕೊಟ್ಟುಬಿಡಿ. ನಾನೇಕೆ ರೂಂಗಾಗಿ ಹುಡುಕಿಕೊಂಡು ಅಲೆಯಬೇಕು"

"ಅದೂ ಸರಿಯೇ ಎನ್ನು. ಗುಂಡಣ್ಣನಿಗೆ ಹೇಳಿ ನಾನು ಈ ಮನೆಯ ಬೀದಿಯ ರೂಂ ಕೊಡಿಸಿಕೊಡಲೇನು ?"

ವೆಂಕಟೇಶಯ್ಯನವರು ಸೂಚಿಸಬಹುದಾದುದು ಆ ಕೋಣೆಯೆಂದು ರಾಜಣ್ಣ ಸರ್ವಥಾ ಭಾವಿಸಿರಲಿಲ್ಲ. ಉಳುಕಿಬಿದ್ದ ಹಾಗಾಗಿ ಕ್ಷಣಕಾಲ ಉತ್ತರವನ್ನೇ ಕೊಡಲಿಲ್ಲ.

"ಯಾಕೆ, ಇದರಲ್ಲಿ ನಿನಗೇನಾದರೂ ಆಕ್ಷೇಪಣೆಯಿದೆಯೇನು ?"

"ಆಕ್ಷೇಪಣೆಯೇನೂ ಇಲ್ಲ. ಎಲ್ಲಿಯಾದರೂ ಒಂದು ಕಡೆ ಇದ್ದುಕೊಂಡು ಈ ವರ್ಷವನ್ನು ಕಳೆಯಬೇಕಾಗಿರುವಾಗ ಇಲ್ಲಿಯೇ ಇದ್ದರೂ ಆಯಿತು. ಆದರೆ ಅವರು ಬಾಡಿಗೆಯನ್ನು ತೆಗೆದುಕೊಳ್ಳಲು ಒಪ್ಪಿಕೊಳ್ಳಬೇಕು''

"ಗುಂಡಣ್ಣನು ನನ್ನ ಸ್ನೇಹಿತನಾದರೂ ಶುದ್ಧ ಜಿಪುಣ, ಶುದ್ಧ ಜಿಪುಣ. ಬಾಡಿಗೆಯಿಲ್ಲದೇ ಅವನೇಕೆ ರೂಂ ಕೊಡುತ್ತಾನೆ ? ನೀನು ಅಂತಹ ಆಸೆಯನ್ನು ಇಟ್ಟುಕೊಳ್ಳಬೇಡಪ್ಪ"

ಅವರು ಹೇಳುವ ಮಾತನ್ನು ಗಂಭೀರವಾಗಿ ಹೇಳಿದರೂ ಅದನ್ನು ಕೇಳಿದ ರಾಜಣ್ಣನಿಗೆ ನಗು ಬಂದುಬಿಟ್ಟಿತು.

"ಯಾಕೆ ನಗುತ್ತೀಯೇ, ರಾಜಣ್ಣ''

"ನೀವು ಹೇಳುವ ತರಹಕ್ಕೆ ನಗು ಬರುತ್ತದೆ"

"ಹುಂ. ನೋಡು, ರಾಜಣ್ಣ. ಇವರು ಹೇಳುವುದೆಲ್ಲವೂ ಇದೇ ರೀತಿ. ಕೆಲವು ದಿನಗಳು ಮಾತ್ರ ಇರುವುದಾದರೆ ಬಿಡು, ಆರು ತಿಂಗಳು ವರ್ಷ ರೂಂ ಕೊಡುವಾಗ ಯಾರಾದರೂ ಆಗಲಿ, ಬಾಡಿಗೆ ತೆಗೆದುಕೊಳ್ಳುವುದು ಸಹಜ, ಅದೇ ರೀತಿಯಾಗಿ ನಾನೂ ಈ ಕೋಣೆಗೆ ಬಾಡಿಗೆ ತೆಗೆದು

ಕೊಳ್ಳಬಹುದು. ಆದರೆ ಅವನು ಹೇಳುವ ತರಹ ನೋಡು. ನಾವೆಲ್ಲರೂ ಜಿಪುಣಾಗ್ರೇಸರರಿದ್ದ ಹಾಗೆ. ದಾನಶೂರಕರ್ಣ ಸಾಯುತ್ತಾ ಇವನ ಮನೆಯ ಮುಂದೆಯೇ ಹಾದು ಹೋದಹಾಗೆ” ಎಂದು ಹೇಳಿ ವೆಂಕಟೇಶಯ್ಯನವರನ್ನು ಉದ್ದೇಶಮಾಡಿ “ಈಗೇನು ಈ ಕೋಣೆಯಿಂದ ನನಗೇನೂ ಬರುತ್ತಿಲ್ಲ. ಸದ್ಯ ದಲ್ಲಿ ಬಂದು ಏನೂ ಆಗಬೇಕಾಗಿಲ್ಲ. ರಾಜಣ್ಣ ಇಲ್ಲಿಯೇ ಇರಲಿ, ನನ ಗೇನೂ ಬಾಡಿಗೆಯೇ ಬೇಡ” ಎಂದರು.

“ಅದು ಬೇಡಪ್ಪ. ಆ ಮೇಲೆ ನೀನು ಒಳಗೊಳಗೇ ಕೊರಗಿ ಕಂಗೆಟ್ಟು ಹೋಗುತ್ತೀಯೆ”

ಆ ಮುದುಕರಿಬ್ಬರೂ ತಮ್ಮ ತಮ್ಮಲ್ಲೇ ಜಗಳವಾಡುತ್ತಾ ರಾಜಣ್ಣ ಇನ್ನೆಲ್ಲಿಯೂ ರೂಂಗೆ ಹುಡುಕಿಕೊಂಡು ತಿರುಗಬೇಕಾಗಿಲ್ಲವೆಂದೂ, ಅವನು ಆ ಮನೆಯ ಬೀದಿಯ ಕೋಣೆಯಲ್ಲಿಯೇ ಇರಬೇಕೆಂದೂ ತೀರ್ಮಾನ ಮಾಡಿದರು.

ಕಡೆಯಲ್ಲಿ ವೆಂಕಟೇಶಯ್ಯನವರು “ನಾವು ನಾವೇ ಮಾತನಾಡುತ್ತಿದ್ದರೆ ಹೇಗೆ ? ನೀನು ಏನು ಹೇಳುತ್ತೀಯೆ ?” ಎಂದರು.

“ನೀವು ಹೇಳಿದಂತೆ. ನಾನು ಹೇಳುವುದೇನೂ ಇಲ್ಲ”

“ಹಾಗಾದರೆ ಇನ್ನೆಲ್ಲಿಯೂ ಹೋಗಿ ರೂಂಗಾಗಿ ತಾಪತ್ರಯ ಪಡ ಬೇಡ. ಬೀದೀ ಕೋಣೆಯಲ್ಲಿ ಇದ್ದುಬಿಡು”

“ಆಗಲೀ———”

“ಇನ್ನು ಆಗಲೀ ಹೋಗಲಿಗಳಿಲ್ಲ ಕಬ್ಬಿಣ ಕಾದಿರುವಾಗಲೇ ಬಡಿಗೆ ಪೆಟ್ಟು ಹಾಕಬೇಕು. ಗುಂಡಣ್ಣ ಒಪ್ಪಿಕೊಂಡಿರುವಾಗಲೇ ಇದು ನಡೆದು ಹೋಗಲಿ. ಈ ರಾತ್ರಿಯೇ ಕೋಣೆ ಖಾಲೀ ಮಾಡಿಸುತ್ತೇನೆ. ನಾಳೇ ಸಾಯಂಕಾಲ ನಾನು ಊರಿಗೆ ಹೋಗಬೇಕೆಂದಿದ್ದೇನೆ. ಅಷ್ಟರಲ್ಲಿ ನೀನು ನಿನ್ನ ಸಾಮಾನುಗಳನ್ನು ತಂದಿಟ್ಟುಬಿಡು”

ತಾನು ಬರುವುದರೊಳಗಾಗಿ ಬಾಡಿಗೆ ಎಷ್ಟೆಂಬುದನ್ನೂ ಖಚಿತ ಮಾಡಿಕೊಳ್ಳಬೇಕೆಂದು ರಾಜಣ್ಣನಿಗಿತ್ತು. ಆದರೆ ಆ ಮಾತೆತ್ತುವುದಕ್ಕೆ ಅವಕಾಶವೇ ಸಿಕ್ಕಲಿಲ್ಲ. ಇಷ್ಟೊಂದು ಆಪ್ತರಾದವರಲ್ಲಿ ಇದ್ದಕ್ಕಿದ್ದ ಹಾಗೆಯೇ ಆ ವಿಷಯ ಎತ್ತುವುದು ಸೂಕ್ತವಲ್ಲವೆಂದುಕೊಂಡವನು ಸೊಂಚುಕಾಯುತ್ತಿದ್ದ.

ಆಗ ವೆಂಕಟೇಶಯ್ಯನವರು "ಸರಿ. ಹೇಳು ಗುಂಡಣ್ಣ. ಏನು ಬಾಡಿಗೆ ಕೊಡಬೇಕು ?" ಎಂದರು

ಗುಂಡೂರಾಯರಿಗೆ ಕೊರಳು ಹಿಡಿದುಕೊಂಡ ಹಾಗಾಯಿತು.

"ಎಲ್ಲವನ್ನೂ ನೀನೇ ಮಾತನಾಡಿ ಬಿಡುತ್ತಿದ್ದೀಯಲ್ಲಾ. ಅದನ್ನೂ ನೀನೇ ಹೇಳು"

"ಆ ಮೇಲೆ ನೀನು ಒಳಗೊಳಗೇ——''

"ನೋಡಿದೆಯಾ, ಪುನಃ ಮೊದಲಿಗೇ ಬರುತ್ತಿದ್ದೀಯಲ್ಲಾ——''

"ರಾಜಣ್ಣ. ತಿಂಗಳಿಗೆ ಹತ್ತು ರೂಪಾಯಿ ಬಾಡಿಗೆ ಕೊಟ್ಟುಬಿಡು. ಆಗಬಹುದೋ ?''

ಅವನು "ಹುಂ" ಅಂದ.

ಗುಂಡೂರಾಯರೂ ವೆಂಕಟೇಶಯ್ಯನವರು ಹೇಳಿದಕ್ಕೆ ಒಪ್ಪಿಕೊಂಡರು.

ಸ್ವಲ್ಪಹೊತ್ತು ಮಾತನಾಡುತ್ತಿದ್ದು ರಾಜಣ್ಣ ಹೊರಟು ಹೋದ.

ಹೊರಡುವ ಮುಂಚೆ ವೆಂಕಟೇಶಯ್ಯನವರು "ಇವೇ ರಾತ್ರಿ ಕೋಣೆ ಖಾಲೀ ಮಾಡಿಸಿಬಿಡುತ್ತೇನೆ. ನಾಳೇ ನಾನು ಹೊರಡುವುದರೊಳಗಾಗಿ ನೀನು ಸಾಮಾನು ತಂದಿಟ್ಟು ಬೀಗ ಹಾಕಿಕೋ'' ಎಂದು ಹೇಳಿದರು.

ಅದಕ್ಕೆ ರಾಜಣ್ಣ ಒಪ್ಪಿಕೊಂಡ.

ಸಾಯಂಕಾಲ ಇಬ್ಬರು ಮುದುಕರೂ ಕೃಷ್ಣರಾವ್ ಪಾರ್ಕ್ ಕಡೆ ವಾಕಿಂಗ್ ಹೊರಟರು.

ಅಷ್ಟುದೂರ ಹೋದನಂತರ ವೆಂಕಟೇಶಯ್ಯನವರು "ಏನಪ್ಪಾ. ನಿನ್ನ ಕೆಲಸ ಸಾಂಗೋಪಾಂಗವಾಗಿ ನೆರವೇರಿತೋ ?" ಎಂದರು.

"ಯಾವ ಕೆಲಸ ?''

"ಅದೇ ನಿನ್ನ ಮನೆಯ ಬೀದೀಕೋಣೆಯನ್ನು ರಾಜಣ್ಣನಿಗೆ ಬಾಡಿಗೆಗೆ ಕೊಡಿಸುವ ವಿಷಯ"

"ನಿನಗೆ ವಯಸ್ಸಾದರೂ ಬುದ್ಧಿ ಬರಲಿಲ್ಲವಯ್ಯ. ದಿನದಿನಕ್ಕೆ ಹುಡುಗನಾಗುತ್ತಿದ್ದೇನೆ ಎಂದುಕೊಳ್ಳುತ್ತಿದ್ದಿಯ. ಸ್ವಲ್ಪ ಘನ ಗಂಭೀರ ಕಲಿತುಕೋ"

"ನೀನು ನನ್ನನ್ನು ಕರೆಸಿದ್ದು ಅದಕ್ಕೇ ಅಲ್ಲವೇನು ?''

"ವಾಸ್ತವವಾಗಿ ಹೇಳುವುದಾದರೆ ಅದಕ್ಕಲ್ಲ. ನಿನಗೆ ಬೇಕಾದ ಹುಡುಗ

ರೂಮಿಗಾಗಿ ಪತರಗುಟ್ಟುತ್ತಿದ್ದಾನೆಯಲ್ಲಾ ಎಂಬ ಯೋಚನೆಯಿಂದ ಆ ಮಾತು ಹೇಳಿದೆ''

''ಆ ಯೋಚನೆ ನೆರವೇರಿತಲ್ಲ. ಇನ್ನು ನನ್ನನ್ನು ಕರೆಸಿದ ಮುಖ್ಯವಾದ ಕೆಲಸವೇನು ಹೇಳು''

''ಅದೇ ಹೇಳುತ್ತೇನೆ, ಬಾಯ್ಯ''

ಕೃಷ್ಣರಾವ್ ಪಾರ್ಕು ಹೆಂಗಸರು ಮಕ್ಕಳಿಗಾಗಿ ಎಂದು ದೊಡ್ಡದಾಗಿ ಬೋರ್ಡಿದ್ದರೂ ಅಲ್ಲಿ ಗಂಡಸರೂ ಕುಳಿತುಕೊಂಡಿದ್ದರು. ಅಲ್ಲಿ ಒಂದು ಕಡೆ ಹುಲ್ಲಿನ ಮೇಲೆ ಈ ಇಬ್ಬರು ಮುದುಕರೂ ಹೋಗಿ ಕುಳಿತುಕೊಂಡರು.

ಕುಳಿತುಕೊಂಡ ಸ್ವಲ್ಪ ಹೊತ್ತಿನನಂತರ ಗುಂಡೂರಾಯರು "ನಿನ್ನ ಮಗಳ ಮದುವೆಯಾಯಿತು. ಈಗ ನೀನು ಯಾವ ಗಲಾಟೆಗಳೂ ಇಲ್ಲದೇ ಪುರಸತ್ತಾಗಿದ್ದೀಯೆ ? ಅಲ್ಲವೇ" ಎಂದರು.

"ಹೌದು. ನೀನು ಹಾಕಿದ ಪೀಠಿಕೆಯು ಸರಿಯಾಗಿದೆ. ಮುಂದೆ ಉಪಾಖ್ಯಾನವನ್ನು ಹೇಳುವವನಾಗು''

"ಮಾತು ಮಾತಿಗೂ ನೀನು ತಮಾಷೆ ಮಾಡುತಿದ್ದರೆ ನಾನು ಮಾತನಾಡಿ ಮುಗಿಸುವುದು ಹೇಗೆ ?"

''ಇಲ್ಲ. ನೀನು ಹೇಳುವುದನ್ನು ಕೇಳುತ್ತೇನೆ, ಹೇಳು''

''ಈಗ ನೀನು ಪುರಸತ್ತಾಗಿದ್ದೀಯ. ನಮ್ಮ ಭಾಗ್ಯಳ ಮದುವೆ ಪ್ರಯತ್ನಕ್ಕೆ ಸ್ವಲ್ಪ ಓಡಿಯಾಡಬೇಕಲ್ಲ. ನೀನು ಓಡಿಯಾಡಿದರೆ ಏನಾದರೂ ಆಗುತ್ತದೆ. ನಾನು ಓಡಿಯಾಡುವುದಂತೂ ಸಾಧ್ಯವೇ ಇಲ್ಲ. ನನಗೆ ಈ ಓಡಾಟಗಳನ್ನೇ ಮಾಡಿ ತಿಳಿಯದು''

''ಹೇಳಿದ್ದೇನಲ್ಲಾ. ಬಹುಮಟ್ಟಿಗೆ ಶ್ರಾವಣಮಾಸದಲ್ಲಿ ಅವಳಿಗೆ ಮದುವೆಯಾಗುತ್ತದೆಂದು''

''ಸರಿಯಪ್ಪ. ಶ್ರಾವಣಮಾಸದಲ್ಲಿ ಅಲ್ಲದಿದ್ದರೆ ಕಾರ್ತೀಕಮಾಸದಲ್ಲಿ ಆಗಲಿ. ಅದಕ್ಕೇನೂ ಆಕ್ಷೇಪಣೆಯಿಲ್ಲ. ಆಗ ಆಗಬೇಕೆಂದರೂ ಈಗಿನಿಂದಲೇ ಓಡಿಯಾಡಬೇಕಲ್ಲ"

''ಒಂದು ತಿಂಗಳು ತಡಿ. ಆವಳಿಗೆ ಗುರು ಬಲ ಬಂದೊದಗಬೇಕು– ಎಂದು ಹೇಳಲಿಲ್ಲವೇ ?"

"ಎಲ್ಲಿಯಾದರೂ ತಾರೆಗಳನ್ನೂ ನಕ್ಷತ್ರಗಳನ್ನೂ ನೋಡಿಕೊಂಡು ಕೆಲಸ ಮಾಡುತ್ತಾರೇನಯ್ಯಾ ? ಹಾಗೇ ಇಟ್ಟುಕೊಂಡರೂ ನೀನು ಹೇಳಿದ ಒಂದು ತಿಂಗಳು ಈಗಾಗಲೇ ಮುಗಿಯುತ್ತಾ ಬಂದಿದೆ"

"ಅಶ್ವತ್ಥ ಪ್ರದಕ್ಷಿಣೆಮಾಡಿ ಯಾವಳೋ ಹೊಟ್ಟೆಮುಟ್ಟಿ ನೋಡಿ ಕೊಂಡಳಂತೆ. ಸ್ವಲ್ಪ ತಡಿಯಯ್ಯಾ"

"ನಾನು ಹೇಳಿದ್ದನ್ನು ನೀನು ಸರಿಯಾಗಿ ಅರ್ಥ ಮಾಡಿಕೊಳ್ಳಲಿಲ್ಲ"

ಹಾಗೆ ಹೇಳಿದರೇ ವಿನಾ ಗುಂಡೂರಾಯರು ಮುಂದೆ ಮಾತನಾಡಿಸುವ ಸುಳಿವು ಕಂಡುಬರಲಿಲ್ಲ. ಮಾತನ್ನು ಅಷ್ಟಕ್ಕೇ ನಿಲ್ಲಿಸಿದರು.

"ಹೇಳುವುದನ್ನು ಸ್ಪಷ್ಟವಾಗಿ ಮಾತನಾಡಿದರೆ ತಾನೇ ಅರ್ಥಮಾಡಿ ಕೊಳ್ಳುವುದು ?"

"ಹೇಳುತ್ತೇನೆ. ಅಷ್ಟರಲ್ಲಿಯೇ ಅವಸರಪಡುತ್ತೀಯಲ್ಲಾ. ನಿಮ್ಮ ರಾಜಣ್ಣನಿದ್ದಾನೆಯಲ್ಲಾ. ಅವನೊಂದಿಗೆ ಯಾಕೆ ಮಾತನಾಡಬಾರದು ಅಂತ"

"ಮಾತನಾಡುವುದು ಸಾಧ್ಯವಾಗಿದ್ದರೆ ಅಂದೇ ಮಾತನಾಡುತ್ತಿದ್ದೆ ನಲ್ಲಾ. ಆ ವಿಷಯ ನಿನಗೆ ಮೊದಲೇ ಹೇಳಿದ್ದೇನೆ. ತಾನು ಲಾಯರೀ ಪರೀಕ್ಷೆ ಪಾಸುಮಾಡಿ ಪ್ರಾಕ್ಟೀಸು, ಮೊದಲು ಮಾಡುವವರೆವಿಗೆ ಅಂದರೆ ಇನ್ನೆರಡು ವರ್ಷಗಳು ಅವನು ಮದುವೆ ಮಾಡಿಕೊಳ್ಳುವುದಿಲ್ಲವೆಂದು ಖಚಿತವಾಗಿ ಹೇಳಿದ್ದಾನೆ–ಎಂದು ನಾನು ಮೊದಲೇ ತಿಳಿಸಲಿಲ್ಲವೇ ?"

"ತಿಳಿಸಿದೆ. ಆದರೂ ಒಂದು ಬಾರಿ ಕೇಳಿ ನೋಡೋಣವೆಂದು"

"ಇಲ್ಲಪ್ಪ. ಈಗಲೇ ಅವನೊಂದಿಗೆ ಏನೂ ಮಾತನಾಡುವಂತಿಲ್ಲ"

"ಹಾಗಲ್ಲ ವೆಂಕಟೇಶ. ನಾನು ನೋಡುತ್ತಿದ್ದೇನಲ್ಲಾ. ಆ ಹುಡುಗನಿಗೆ ನಿನ್ನ ಮಾತು ಎಂದರೆ ವೇದವಾಕ್ಯವಿದ್ದ ಹಾಗೆ. ನೀನು ಸ್ವಲ್ಪ ಒತ್ತಾಯ ಮಾಡಿ ಹೇಳಿದರೆ ಅವನು ಒಪ್ಪಿಕೊಳ್ಳುತ್ತಾನೆ"

"ನೀನು ಸುಮ್ಮನೆ ಹೇಳಿದ್ದೇ ಹೇಳಬೇಡ, ಗುಂಡಣ್ಣ. ಅವನು ಒಳ್ಳೆಯ ವರನೆಂಬುದು ನನಗೆ ಗೊತ್ತು. ಸಮಯ ಬಂದರೆ ನಾನೇ ಮಾತನಾಡಿ ಸಾಧ್ಯವಾದರೆ ಅವನನ್ನು ಗೊತ್ತು ಮಾಡುತ್ತೇನೆ. ಈಗಲೇ ಅವಸರಪಟ್ಟರೆ ಕೆಲಸ ಕೆಟ್ಟುಹೋಗುತ್ತದೆ. ನಾನು ಖಚಿತವಾಗಿ ಹೇಳುತ್ತೇನೆ. ನೀನೂ ಅಷ್ಟೇ. ಅವನ ಬಳಿ ಆ ವಿಷಯ ಪ್ರಸ್ತಾಪಿಸಬೇಡ"

ವೆಂಕಟೇಶಯ್ಯನವರು ಅಷ್ಟು ಖಡಾಖಂಡಿಯಾಗಿ ಹೇಳಿದ ಮೇಲೆ ಮಾತು ಮುಂದುವರಿಸುವುದು ಪ್ರಯೋಜನವಿಲ್ಲವೆಂದು ಗುಂಡೂರಾಯರು ಸುಮ್ಮನಾದರು. ಆದರೆ ತಮ್ಮ ಗೆಳೆಯ ಹೇಳಿದ ಮಾತು ಅವರಿಗೆ ಸರಿಕಾಣ ಲಿಲ್ಲ. ಆತ ಸ್ವಲ್ಪ ಒತ್ತಾಯ ಮಾಡಿದರೆ ತಮ್ಮ ಕೆಲಸ ಕೈಗೂಡುವುದೆಂದು ಅವರಿಗೆ ದೃಢವಾದ ನಂಬಿಕೆಯಿದ್ದಿತು. ಕುದುರೆಯನ್ನು ಬೇಕಾದರೆ ನೀರಿನ ವರೆವಿಗೂ ತೆಗೆದುಕೊಂಡು ಹೋಗಬಹುದು. ಅದು ನೀರು ಕುಡಿಯುವಂತೆ ಮಾಡುವುದು ಸಾಧ್ಯವೇ ? ಹಾಗೆಯೇ ವೇಂಕಟೇಶಯ್ಯನಿಗೆ ಹೇಳಬಹುದು. ಒತ್ತಾಯ ಮಾಡಬಹುದು. ಆದರೆ ಅವನಿಂದ ಕೆಲಸ ಮಾಡಿಸುವುದು ಸಾಧ್ಯವೇ ?

ಒಟ್ಟಿನಲ್ಲಿ ಹೇಳುವುದಾದರೆ ವೆಂಕಟೇಶಯ್ಯನವರ ವಿಷಯದಲ್ಲಿ ಗುಂಡೂ ರಾಯರಿಗೆ ತುಸು ಅಸಮಾಧಾನವಾಯಿತು. ತೋರಿಸಿಕೊಳ್ಳದೇ ಮುಚ್ಚಿಟ್ಟು ಕೊಳ್ಳಲು ಗುಂಡೂರಾಯರು ಎಷ್ಟೋ ಪ್ರಯತ್ನಮಾಡಿದರು.

ತಮಗೆ ಅಸಮಾಧಾನವಾಗಿದೆ ಎಂಬುದನ್ನು ಪತ್ತೆಕೊಡದಿರುವುದ ಕ್ಕಾಗಿ ಏನೋ ಮಾತನಾಡಲು ಹೋದರು. ಆದರೆ ಅವೆಲ್ಲವೂ ನಟನೆಯಂತೆ ಭಾಸವಾಯಿತು. ನಟನೆಯನ್ನಾದರೂ ಬಲುಹೊತ್ತು ಮಾಡುವುದು ಅವ ರಿಂದಾಗಲಿಲ್ಲ. ಮಾತು ನಿಲ್ಲಿಸಿದರು.

ಗೆಳೆಯ ಮಾತನಾಡದೇ ಕುಳಿತನಂತರ ವೆಂಕಟೇಶಯ್ಯ ಮಾತನಾಡಿಸಿ ನೋಡಿದರು. ಆತ ಹೇಳುತ್ತಿದ್ದುದಕ್ಕೆಲ್ಲಾ ಗುಂಡೂರಾಯರು "ಹುಂ" ಎನ್ನುತ್ತಿದ್ದಾರೇ ವಿನಾ ಆ ಮಾತುಗಳಲ್ಲಿ ಅವರಿಗಾವ ಬಗೆಯ ಆಸಕ್ತಿಯೂ ಇರಲಿಲ್ಲ.

ತಾವು ರಾಜಣ್ಣನೊಂದಿಗೆ ಮದುವೆ ಪ್ರಸ್ತಾಪ ಮಾಡಲು ಆಗುವುದಿಲ್ಲ ವೆಂದು ಹೇಳಿದ್ದರಿಂದ ತಮ್ಮ ಸ್ನೇಹಿತನಿಗೆ ಅಸಮಾಧಾನವಾಗಿದೆ ಎಂಬು ದನ್ನು ತಿಳಿದುಕೊಳ್ಳಲು ಸೂಕ್ಷ್ಮಮತಿಗಳಾದ ವೆಂಕಟೇಶಯ್ಯನವರು ಅರ್ಥ ಮಾಡಿಕೊಳ್ಳಲು ಕಷ್ಟವಾಗಲಿಲ್ಲ.

ಹೀಗೆ ಇಲ್ಲಿಯೇ ಕುಳಿತಿರುವುದಕ್ಕಿಂತ ಮನೆಗಾದರೂ ಹೋದರೆ ಗೆಳೆ ಯನ ಮನಸ್ಸು ಸರಿಹೋಗಬಹುದೇನೋ ಎಂದುಕೊಂಡರು ವೆಂಕಟೇಶಯ್ಯ ನವರು. ಅದೂ ಅಲ್ಲದೇ ಕತ್ತಲಾಗಲು ಆರಂಭವಾಗಿತ್ತು. ಬೀದಿಯ ದೀಪಗಳು ಹತ್ತಿಕೊಂಡಿದ್ದವು.

"ಸರಿ, ಇಲ್ಲಿ ಕುಳಿತೇನು ಮಾಡುವುದು, ನಡಿಯಪ್ಪ. ಮನೆಯ ಕಡೆಗೆ ಹೋಗೋಣ"

ಮರುಮಾತನಾಡದೇ ಗುಂಡೂರಾಯರು ಮೇಲೆದ್ದರು. ನೆಲವನ್ನೇ ನೋಡುತ್ತಾ ಹೋಗುವ ಕುರಿಯಂತೆ ತಲೆ ತಗ್ಗಿಸಿಕೊಂಡು ನಡೆಯಲಾರಂಭಿಸಿದರು.

ರಾಜಣ್ಣನ ಸಂಬಂಧವಾದ ಮಾತನ್ನು ಗುಂಡೂರಾಯರು ಎತ್ತಿದ್ದರಷ್ಟೇ. ಆ ಮಾತು ಮುಗಿದ ಕೂಡಲೇ ಒಂದು ವಿಷಯವನ್ನು ಹೇಳಬೇಕೆಂದು ವೆಂಕಟೇಶಯ್ಯನವರ ಮನಸ್ಸಿಗೆ ಬಂದಿತು. ಆದರೆ ಅದನ್ನು ಆಗಲೇ ಹೇಳುವುದು ಸೂಕ್ತವಲ್ಲವೆಂದೂ ಅನಂತರ ಯಾವಾಗಲಾದರೂ ಹೇಳೋಣವೆಂದೂ ಸುಮ್ಮನಾಗಿದ್ದರು. ಆ ಮೇಲೆ ಪರಿಸ್ಥಿತಿಯು ಬಿಗಡಾಯಿಸಿಕೊಂಡು ಬಂದಿತ್ತು. ಕೃಷ್ಣರಾವ್ ಪಾರ್ಕಿನಲ್ಲಿ ಕುಳಿತಿದ್ದಷ್ಟು ಹೊತ್ತೂ ಅವಕಾಶವಾಗಿರಲಿಲ್ಲ. ಈಗ ನಡೆದುಕೊಂಡು ಮನೆಗೆ ಹೋಗುವಾಗಲೂ ಹೇಳುವುದಕ್ಕೆ ಸರಿಯಾದ ಅವಕಾಶ ಸಿಕ್ಕಿರಲಿಲ್ಲ.

ಆದರೆ ಅದನ್ನು ಹೇಳಿಯೇ ಮುಗಿಸಿಬಿಡಬೇಕೆಂದು ಅವರ ಮನಸ್ಸಿಗೆ ತೋರಿತು. ಪುನಃ ಒಂದು ಬಾರಿ ಯೋಚಿಸಿದರು. ಇಲ್ಲ. ಯಾವ ವಿಷಯವನ್ನೇ ಆಗಲೀ ಮುಚ್ಚಿಟ್ಟುಕೊಂಡಿರುವುದು ಪ್ರಯೋಜನವಿಲ್ಲ. ಮುಂದೆ ಒಂದಾದನಂತರ ಒಂದು ಅಸಂಗತವಾಗುವುದಕ್ಕಿಂತಲೂ ಈಗಲೇ ಯಾವುದಾದರೊಂದು ತೀರ್ಮಾನ ಮಾಡಿಬಿಡುವುದು ಉತ್ತಮವೆಂಬ ನಿರ್ಧಾರಕ್ಕೆ ಬಂದರು. ಇನ್ನೂ ಒಂದು ವಿಷಯ ತೋರಿತು. ಗುಂಡೂರಾಯರ ಸ್ವಭಾವ ವಿಚಿತ್ರವಾದುದು. ಎತ್ತು ಈಯಿತು—ಎಂದರೆ ಕೊಟ್ಟಿಗೆಯಲ್ಲಿ ಕಟ್ಟು ಎನ್ನುವ ಜಾತಿಯ ಮನುಷ್ಯ. ತಾವು ಹೇಳಿದ್ದಕ್ಕೆ "ಆಗಲಿ. ಹಾಗೆಯೇ ಮಾಡು" ಎಂದು ಬಿಟ್ಟರೆ ! ಅನಂತರ ತಾವು ಈ ವಿಷಯವನ್ನು ರಾಜಣ್ಣನಿಗೆ ಹೇಳುವುದು ಹೇಗೆ ? ಅದರಿಂದ ಆಡಬೇಕೆಂದಿದ್ದ ಮಾತನ್ನು ಆಡಲು ಹಿಂಜರಿದರು.

ಉಹೂಂ. ಅದೆಲ್ಲಾ ಪ್ರಯೋಜನವಿಲ್ಲ. ಹೇಳುವುದನ್ನು ಹೇಳಿಯೇ ಬಿಡಬೇಕು.

ಗುಂಡೂರಾಯರ ಮನೆಯು ಇದ್ದ ಬೀದಿಗೆ ತಿರುಗಿದರು. ಇನ್ನು

ಮನೆಯೂ ಬಂದುಬಿಡುತ್ತದೆ. ಅಲ್ಲಿ ಹೇಳುವುದು ಸಾಧ್ಯವಿಲ್ಲ. ಇಲ್ಲಿಯೇ ಹೇಳಿಬಿಡಬೇಕು.

"ನೀನೇನೂ ತಿಳಿದುಕೊಳ್ಳದಿದ್ದರೆ ನಿನಗೆ ಒಂದು ಮಾತು ಹೇಳ ಬೇಕಾಗಿದೆ, ಗುಂಡಣ್ಣಾ"

ನಿರಾಸಕ್ತಿಯಿಂದಲೇ ಗುಂಡೂರಾಯರು "ಹೇಳಪ್ಪಾ" ಎಂದರು.

"ರಾಜಣ್ಣ ನಿಮ್ಮ ಮನೆಯ ಬೀದಿಯ ಕೋಣೆಯಲ್ಲಿರುವುದು ನಿನಗೆ ಇಷ್ಟವಿಲ್ಲದಿದ್ದರೆ ಇಲ್ಲಿ ಆಗುವುದಿಲ್ಲವೆಂದು ಹೇಳಿಬಿಡುತ್ತೇನೆ, ಅದಕ್ಕೆ ನೀನೇನೂ ಸಂಕೋಚ ಪಟ್ಟುಕೊಳ್ಳಬೇಕಾಗಿಲ್ಲ"

"ಅದೇನಿಲ್ಲ. ಆ ವಿಷಯ ಬೇರೇ. ಈ ವಿಷಯ ಬೇರೆ. ಇಷ್ಟಕ್ಕೂ ಅವನೇನು ಸುಮ್ಮನೆ ಇರುತ್ತಾನೆಯೇ? ಬಾಡಿಗೆ ಕೊಡುತ್ತಾನೆ. ಇರಲಿ, ಬಿಡು"

ವೆಂಕಟೇಶಯ್ಯನವರ ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು. ಹೋಗಲಿ, ನಾಳೆ ಬರುವ ರಾಜಣ್ಣನಿಗೆ ಇಲ್ಲವೆಂದು ಹೇಳಬೇಕಾಗಿಲ್ಲವಲ್ಲ ಎಂದು ಸಂತೋಷಪಟ್ಟುಕೊಂಡರು.

ಮಾರನೆಯ ದಿನ ಬೆಳಗಾಗ ಹತ್ತೂವರೆ ಹನ್ನೊಂದು ಗಂಟೆಯವೇಳೆಗೆ ಗುಂಡೂರಾಯರ ಮನೆಯ ಮುಂದೆ ಜಟಕಾ ಬಂದು ನಿಂತಿತು. ಅದರಿಂದ ರಾಜಣ್ಣ ಇಳಿದ. ಅವನು ಇಳಿದ ನಂತರ ಜಟಕಾ ಸಾಬಿ ಬಂದು ಹಾಸಿಗೆ ಪೆಟ್ಟಿಗೆಗಳನ್ನು ತಂದು ಜಗುಲಿಯ ಮೇಲಿರಿಸಿದ. ಎರಡನೆಯ ಪೆಟ್ಟಿಗೆಯನ್ನು ತರುವುದು ಸಾಬಿಗೆ ಸ್ವಲ್ಪ ಪ್ರಯಾಸವಾಯಿತು, ಅದರಲ್ಲಿ ಅವನು ಓದುವ ಪುಸ್ತಕಗಳಿದ್ದವೋ ಏನೋ?

ರಾಜಣ್ಣನನ್ನು ಕಾಣುತ್ತಲೇ ವೆಂಕಟೇಶಯ್ಯನವರು ಎದ್ದು ಬೀದಿಯ ಕೋಣೆಗೆ ಹೋಗಿ ಜಗುಲಿಯ ಕಡೆಯ ಬಾಗಿಲು ತೆಗೆದು ಸಾಮಾನುಗಳನ್ನು ಒಳಗೇ ತಂದಿಡುವಂತೆ ಸಾಬಿಗೆ ಹೇಳಿದರು.

ತಾವು ಹೇಳಿದಂತೆ ಹಿಂದಿನ ದಿನ ರಾತ್ರಿಯೇ ಗುಂಡೂರಾಯರು ಅದನ್ನು ಖಾಲೀ ಮಾಡಿದ್ದರು.

ರಾಜಣ್ಣನು ಗಾಡಿಯವನಿಗೆ ಬಾಡಿಗೇ ಕೊಟ್ಟು ಕೋಣೆಗೆ ಬಂದ. ಬಾಗಿಲಿನ ಬಳಿ ಜಟಕಾದವನು ಹಾಸಿಗೆಯನ್ನು ಪೆಟ್ಟಿಗೆಗಳನ್ನು ಇಟ್ಟಿದ್ದ.

ಆ ಕೋಣೆಯಲ್ಲಿ ಹೆಚ್ಚೇನೂ ಬದಲಾವಣೆಯಾಗಿರಲಿಲ್ಲ. ಎರಡು ಕಿಟಕಿಗಳಿಗೂ. ಒಂದು ಬಾಗಿಲಿಗೂ ಮೊದಲು ಹಾಕಿದ್ದ ಕರ್ಟನ್‌ಗಳು ಹಾಗೆಯೇ ಇದ್ದವು. ನೆಲದ ಮೇಲೆ ಕಡಕೊಳದ ಬಣ್ಣದ ಚಾಪೆ ಯಥಾಸ್ಥಿತಿಯಲ್ಲಿದ್ದಿತು. ಟೇಬಲ್ಲೂ, ಅದರ ಮೇಲೆ ಟೇಬಲ್ ಕ್ಲಾತೂ, ಟೇಬಲ್ ಲ್ಯಾಂಪೂ ಇದ್ದವು.

"ಸರಿ. ತಂದು ಸಾಮಾನುಗಳನ್ನು ಇಟ್ಟಿದ್ದಾಯಿತು. ಇನ್ನು ಯಾವುದಾದರೂ ಹೋಟಲಿಗೆ ಹೋಗಿ ಊಟ ಮಾಡಿಕೊಂಡು ಬರೋಣ" ಎಂದು ಅವನು ಯೋಚಿಸುತ್ತಿದ್ದ ಹಾಗೆಯೇ ವೆಂಕಟೇಶಯ್ಯನವರು ಹೇಳಿದರು.

"ರಾಜಣ್ಣ. ಸ್ನಾನವಾಗದೇ ಇದ್ದರೆ ಬೇಗ ಮಾಡಿ ಮುಗಿಸು. ಊಟ ಮಾಡೋಣ. ನೀನು ಬರುತ್ತೀ ಅಂತಲೇ ಊಟಕ್ಕೆ ಕಾದಿದ್ದೇನೆ"

ಅವನಿಗೆ ಏನು ಹೇಳಬೇಕೋ ತೋರಲಿಲ್ಲ. ಅವರ ಮುಖವನ್ನು ನೋಡಿದ.

"ಹಾಗೇಕೆ ನೋಡುತ್ತೀಯೆ. ಗೃಹಸ್ಥರ ಮನೆಗೆ ಮಧ್ಯಾನ್ಹದ ಹೊತ್ತು ಬಂದು ಊಟಕ್ಕೆ ಹೋಟಲಿಗೆ ಹೋಗುವುದೆಂದರೇನು ? ಕಳಿಸುವುದು ನಮಗಾದರೂ ಚೆನ್ನಾಗಿರುತ್ತದೆಯೇ ? ಏಳು. ಸ್ನಾನ ಮಾಡು"

ವಿಧಿಯಿಲ್ಲದೇ ರಾಜಣ್ಣ "ಬೆಳಗಾಗ ಹೊರಡುವಾಗಲೇ ಸ್ನಾನ ಮಾಡಿದ್ದೇನೆ" ಎಂದ,

"ಸರಿ. ಕೈ ಕಾಲು ತೊಳೆದುಕೋ"

ಆ ಮಾತು ಹೇಳಿಬಿಟ್ಟು ವೆಂಕಟೇಶಯ್ಯ ಒಳಗಡೆಗೆ ಹೊರಟುಹೋದರು.

ಒಳಗೆ ಹೋಗಿ ಊಟ ಮಾಡುವುದಕ್ಕೆ ಸಂಕೋಚ. ಹಟದಿಂದ ಹೋಟಲಿಗೆ ಹೊರಟುಹೋದರೆ ವೆಂಕಟೇಶಯ್ಯನವರೂ, ಗುಂಡೂರಾಯರೂ ಏನೆಂದುಕೊಳ್ಳುತ್ತಾರೆಯೋ ಎಂಬ ಯೋಚನೆ. ಆ ಸಂಧಿಗ್ದತೆಯಿಂದಲೇ ತೊಳಲುತ್ತಾ ನಿಂತಿದ್ದ

ಪುನಃ ವೆಂಕಟೇಶಯ್ಯನವರು ಕೂಗಿದ ಶಬ್ದ ಕೇಳಿತು.

"ರಾಜಣ್ಣಾ— — —"

ಇನ್ನು ಬೇರೆಯ ವಿಧಿಯೇ ಇಲ್ಲ, ಈ ದಿನ ಯಾವುದೋ ಒಂದು ರೀತಿ ಆಗಲಿ–ಎಂದುಕೊಂಡ.

ರಾಜಣ್ಣ ದಟ್ಟಿ ಉಟ್ಟು, ಷರಟು ಧರಿಸಿ ಕೋಟು ಹಾಕಿಕೊಂಡಿದ್ದ. ಕೋಟು ತೆಗೆದು ಹಾಸಿಗೆಯ ಮೇಲಿಟ್ಟ. ಪೆಟ್ಟಿಗೆಯಿಂದ ಬಣ್ಣದ ಟರ್ಕಿ ಟವಲು ತೆಗೆದು ಭುಜದ ಮೇಲೆ ಹಾಕಿಕೊಂಡು ಜಗುಲಿಯ ಕಡೆ ಬಾಗಿಲಿಗೆ ಚಿಲುಕ ಹಾಕಿ ಒಳಗೆ ಹೋದ.

ಹಜಾರದಲ್ಲಿಯೇ ಕಾಯುತ್ತಿದ್ದ ವೆಂಕಟೇಶಯ್ಯನವರು "ಬೇಗ ಕೈ ಕಾಲು ತೊಳೆದುಕೋ. ಬಚ್ಚಲು ಮನೆಯು ಎಲ್ಲಿದೆ ಎಂಬುದನ್ನು ಬಲ್ಲೆ ತಾನೇ?" ಎಂದರು.

ಸಂಕೋಚದಿಂದ "ಹುಂ" ಎಂದ.

ರಾಜಣ್ಣನನ್ನು ಬಚ್ಚಲು ಮನೆಗೆ ಕಳುಹಿಸಿ ಅವರು ನಡು ಮನೆಗೆ ಹೋದರು.

ನಡುಮನೆಗೆ ರಾಜಣ್ಣ ಹೋಗುವ ವೇಳೆಗೆ ಗಂಡಸರಿಗೆ ಸಾಲಾಗಿ ಮೂರು ಎಲೆಗಳನ್ನು ಹಾಕಿತ್ತು. ವೆಂಕಟೇಶಯ್ಯನವರೂ, ಗುಂಡೂರಾಯರೂ ಕುಳಿತು ಅವನಿಗಾಗಿ ಕಾಯುತ್ತಿದ್ದರು.

ಪ್ರತ್ಯೇಕವಾಗಿ ಹಾಕಿದ್ದ ಎಲೆಯಲ್ಲಿ ಭಾಗ್ಯ ಕುಳಿತುಕೊಂಡಿದ್ದಳು.

ಆ ದಿನ ಮಧ್ಯಾಹ್ನ ಮೂರು ಗಂಟೆಯ ವೇಳೆಗೆ ಕಾಫಿಯಾಯಿತು. ಆದಾದ ಮೇಲೆ ವೆಂಕಟೇಶಯ್ಯನವರು ಊರಿಗೆ ಹೊರಡಲು ಅನುವಾಗತೊಡಗಿದರು.

ಬಸ್ಸಿಗೆ ಹೋಗುವ ಮೊದಲು ಬೀದಿಯ ಕೋಣೆಗೆ ಹೋಗಿ ರಾಜಣ್ಣನನ್ನು ಕಂಡು "ಏನಪ್ಪಾ. ನಾನಿನ್ನು ಊರಿಗೆ ಹೊರಡಲೋ" ,ಎಂದರು.

ರಾಜಣ್ಣ ಅವರನ್ನು ಕಂಡ ಕೂಡಲೇ ಎದ್ದು ನಿಂತುಕೊಂಡಿದ್ದವನು "ಹೋಗಿ ಬನ್ನಿ. ಅಂತೂ ನಿಮ್ಮಿಂದ ದೊಡ್ಡ ಉಪಕಾರವಾಯಿತು" ಎಂದ.

"ಏನಪ್ಪಾ. ಅಂತಹ ಉಪಕಾರ?"

"ರೂಂ ಕೊಡಿಸಿದ್ದು — —"

"ಅಯ್ಯೋ! ದೊಡ್ಡ ಉಪಕಾರ, ದೊಡ್ಡ ಉಪಕಾರ. ನಮ್ಮವರು ತಮ್ಮವರು ಎಂದರೆ ಅಷ್ಟಾದರೂ ಮಾಡಬೇಡವೇ?"

ಹೊರಡುವುದರಲ್ಲಿದ್ದವರನ್ನು "ನಿಂತುಕೊಳ್ಳಿ" ಎಂದು ಹೇಳಿ, ಪೆಟ್ಟಿಗೆಯಿಂದ ಹತ್ತು ರೂಪಾಯಿನ ನೋಟು ತೆಗೆದು ಅವರ ಕೈಗೆ ಕೊಡುತ್ತಾ "ನನಗೆ ಇದನ್ನು ಗುಂಡರಾಯರ ಬಳಿ ಕೊಡಲು ಸಂಕೋಚವಾಗುತ್ತದೆ. ಅದರಿಂದ ದಯಮಾಡಿ ನೀವೇ ಕೊಟ್ಟುಬಿಡಿ" ಎಂದು ಹೇಳಿದ.

ವೆಂಕಟೇಶಯ್ಯನವರು ಅದನ್ನು ತೆಗೆದುಕೊಳ್ಳದೇ "ನಿನ್ನಲ್ಲಿಯೇ ಇರಲಿ, ಹೇಳುತ್ತೇನೆ'' ಎಂದರು.

ಅವನು ಕಕ್ಕಾಬಿಕ್ಕಿಯಾಗಿ ನೋಡುತ್ತಾ "ಅಂದರೆ ?'' ಎಂದ.

"ಅಂದರೆ ಇದುವರೆವಿಗೆ ಅವನು ಯಾರಿಗೂ ಹೀಗೆ ಬಾಡಿಗೆಗೆ ರೂಂ ಕೊಟ್ಟಿರಲಿಲ್ಲ. ನನಗಾಗಿ ಕೊಟ್ಟಿದ್ದಾನೆ. ಅಂತಹದರಲ್ಲಿ ಈಗಲೇ ಮುಖದ ಮೇಲೆ ಹೊಡೆದಂತೆ ಹತ್ತು ರೂಪಾಯಿ ತೆಗೆದುಕೊಡುವುದು ಚೆನ್ನಾಗಿರುವುದಿಲ್ಲ. ಈ ಹಣ ನನ್ನ ಬಳಿಯಲ್ಲಿಯೇ ಇರಲಿ. ನೀನೂ ಕೊಡುವುದಕ್ಕೆ ಹೋಗಬೇಡ. ಸಮಯ ನೋಡಿಕೊಂಡು ನಾನೇ ನಿನ್ನ ಬಳಿ ತೆಗೆದುಕೊಂಡು ಅವನಿಗೆ ಕೊಡುತ್ತೇನೆ."

ಗತ್ಯಂತರವಿಲ್ಲದೇ ರಾಜಣ್ಣ ಅದನ್ನು ತನ್ನ ಬಳಿಯೇ ಇಟ್ಟುಕೊಂಡ.

"ಹೋಗಿಬರುತ್ತೇನೆ'' ಎಂದು ಹೇಳಲು ವೆಂಕಟೇಶಯ್ಯನವರು ಒಳಗೆ ಹೋದರು.

ಹೊರಡುವಾಗ ಗುಂಡೂರಾಯರನ್ನು ಪ್ರತ್ಯೇಕವಾಗಿ ಕರೆದು "ಆ ರಾಜಣ್ಣ ಕೋಣೆಯ ಬಾಡಿಗೆಯನ್ನು ಅಡ್ವಾನ್ಸಾಗಿ ಕೊಡುವುದಕ್ಕೆ ಬಂದ. "ಈಗ ಬೇಡ. ನಿನ್ನ ಬಳಿಯೇ ಇಟ್ಟುಕೋ" ಎಂದು ಹೇಳಿದೆ. ಅವನು ನಿನ್ನ ಬಳಿ ಕೊಡುವುದಕ್ಕೆ ಬಂದರೆ "ಈಗೇನು ಬೇಡ. ವೆಂಕಟೇಶಯ್ಯನವರು ಬರಲಿ, ಎಂದು ಹೇಳಿಬಿಡು'' ಎಂದರು.

ಹಿಂದಿನ ದಿನ ಸಾಯಂಕಾಲ ಕೃಷ್ಣರಾವ್ ಪಾರ್ಕಿನಲ್ಲಿ ಮಾತನಾಡಿದಾಗ ಗುಂಡೂರಾಯರಿಗೆ ಅಸಮಾಧಾನವಾಗಿದ್ದಿತಷ್ಟೇ. ಮನೆಗೆ ಬಂದ ಮೇಲೂ ಸಮಾಧಾನವಾಗಲಿಲ್ಲ. ಊಟ ಮಾಡಿ ಮಲಗಿ ಬೆಳಗಾಗ ಎದ್ದ ಮೇಲೆಯೂ ಸರಿಹೋಗಲಿಲ್ಲ. ಈ ಮಧ್ಯಾಹ್ನ ಕಾಫೀ ಕುಡಿಯುವಾಗಲೂ ಅದೇ ರೀತಿಯಾಗಿದ್ದರು.

ಸ್ಪರ್ಶಮಣಿ ಎಂದೊಂದು ಇರುತ್ತದೆಯಂತೆ ಅದು ಯಾವುದಕ್ಕೆ ತಗುಲಿದರೂ ಕೂಡಲೇ ಚಿನ್ನವಾಗಿ ಹೋಗುವುದಂತೆ.

ಹಾಗೆ ವೆಂಕಟೇಶಯ್ಯನವರು ಆ ಮಾತು ಹೇಳಿದ ಕೂಡಲೇ ಮಂಜು ಕರಗಿಹೋಗುವಂತೆ ಅಸಮಾಧಾನವು ಮಾಯವಾಯಿತು, ಗುಂಡೂರಾಯರ ಮುಖದಲ್ಲಿ ಸ್ವಾಭಾವಿಕವಾಗಿರುತ್ತಿದ್ದ ನಗುವು ಕಾಣಿಸಿಕೊಂಡಿತು.

"ಹಾಗಾದರೆ ಇನ್ನೂ ಅವನ ಆಸೆಯಿದೆಯೇನಯ್ಯಾ"

"ಅವನೂ ಒಬ್ಬ ವರ. ಆಸೆ ಯಾವತ್ತೂ ಇದ್ದೇ ಇದೆ. ಆದರೆ ಸದ್ಯದಲ್ಲಿ ಆ ವಿಷಯವನ್ನು ಪ್ರಸ್ತಾಪಿಸಬೇಡ"

"ಸದ್ಯದಲ್ಲಿ ಬೇಡಪ್ಪ. ಶ್ರಾವಣ ಮಾಸದ ಹೊತ್ತಿಗಾದರೂ ಮಾಡಬಹುದಲ್ಲ"

"ಅದನ್ನು ನನಗೆ ಬಿಟ್ಟುಬಿಡು ಎಂದರೆ ಕೇಳುವುದಿಲ್ಲವಲ್ಲ"

"ನೀನು ಹೇಳಿದ ಹಾಗೆಯೇ ಆಗಲಯ್ಯ"

ಆ ಮಾತನ್ನು ಹೇಳುವಾಗ ಗುಂಡೂರಾಯರಿಗೆ ಅಸಮಾಧಾನವೇನೂ ಇರಲಿಲ್ಲ.

## ೬

ಆ ದಿನ ಸಾಯಂಕಾಲ ರಾಜಣ್ಣ ಹೊರಗೆ ಹೋಗುವುದನ್ನು ಯಾವ ರೀತಿ ಕಂಡುಕೊಂಡರೋ ಆಗ ವಿಶಾಲಾಕ್ಷಮ್ಮ ಕರೆದು ಹೇಳಿದರು.

"ರಾತ್ರೀ ಇನ್ನೆಲ್ಲಿಯೂ ಊಟಕ್ಕೆ ಹೋಗಬೇಡಪ್ಪ. ಇಲ್ಲಿಗೇ ಬಂದುಬಿಡು. ನೀನು ಇಲ್ಲಿಯೇ ಊಟ ಮಾಡುತ್ತೀ ಎಂದು ಬೇಳೇ ಹಾಕಿಬಿಟ್ಟಿದ್ದೇನೆ"

ಮದುವೆಯ ಮನೆಯಲ್ಲಿ ಹೆಚ್ಚು ಪರಿಚಯವಾದನಂತರ ವಿಶಾಲಾಕ್ಷಮ್ಮನವರೂ, ಗುಂಡೂರಾಯರೂ ಅವನನ್ನು ಏಕ ವಚನದಲ್ಲಿಯೇ ಕರೆಯುವುದು ರೂಢಿಯಾಗಿತ್ತು.

ಸಂಜೆ ರಾಜಣ್ಣ ಬೀದಿಯ ಕೋಣೆಯಲ್ಲಿಯೇ ಕುಳಿತಿದ್ದ. ಏನು ಮಾಡುವುದಕ್ಕೂ ತೋರದೇ ಸುಮ್ಮನೆ ಕುಳಿತುಕೊಂಡಿದ್ದ. ಗುಂಡೂರಾಯರು ವಾಕಿಂಗ್ ಹೊರಟುದನ್ನು ನೋಡಿದ್ದ. ಒಳ ಕೋಣೆಯಿಂದ ವೀಣಾವಾದನವು ಕೇಳಿಬರುತಿತ್ತು. ಭಾಗ್ಯ ಪರೀಕ್ಷೆಗಾಗಿ ಅಭ್ಯಾಸ ಮಾಡುತ್ತಾ ಒಳಗಿದ್ದಾಳೆ. ಕರೆದಾಗ ವಿಶಾಲಾಕ್ಷಮ್ಮನವರು ಹಜಾರದಲ್ಲಿ ನಿಂತಿದ್ದರು. ಕರೆದ ಕೂಡಲೇ ಇವನು ಒಳಗೆ ಹೋಗಿದ್ದ

ಹಜಾರದಲ್ಲಿ ನಿಂತಿದ್ದವರು ವಿಶಾಲಾಕ್ಷಮ್ಮನವರು ರಾಜಣ್ಣ ಇಬ್ಬರೇ. ಸಂಕೋಚವನ್ನು ಬದಿಗೊತ್ತಿ, ಇದ್ದುದರಲ್ಲಿ ಧೈರ್ಯವನ್ನು ತಂದು

ಕೊಂಡು "ಒಂದು ದಿನ ಎರಡು ದಿನವಾಗಿದ್ದರೆ, ಒಂದೆರಡು ವಾರಗಳಾಗಿದ್ದರೆ ನಾನು ನಿಮ್ಮ ಮಾತಿಗೆ ಎದುರು ಹೇಳುತ್ತಿರಲಿಲ್ಲ. ನಾನು ಸುಮಾರು ಎಂಟು ತಿಂಗಳುಗಳ ಕಾಲ ಇಲ್ಲಿರಬೇಕಾಗುತ್ತದೆ. ಅದರಿಂದ— —" ಎಂದು ಹೇಳಿದ.

"ಅದರಿಂದ ಅಷ್ಟು ದಿನವೂ ಇಲ್ಲಿ ಊಟ ಮಾಡಿಕೊಂಡಿರುವುದಕ್ಕಾಗುವುದಿಲ್ಲ ಹೋಟಲಿಗೆ ಹೋಗುತ್ತೇನೆ–ಎಂದುತಾನೇ ನೀನು ಹೇಳುತ್ತಿರುವುದು· ನಿನ್ನ ಇಷ್ಟ ಹೇಗಿದೆಯೋ ಹಾಗೆ ಮಾಡು. ಆದರೆ ಹೊಸ ತಿಂಗಳು ಹುಟ್ಟುವುದಕ್ಕೆ ಇನ್ನೂ ಆರೇಳು ದಿನಗಳಿವೆ. ತಿಂಗಳ ಕಡೆಯಲ್ಲಿ ಹೋದರೆ ಹೋಟಲಿನಲ್ಲಿ ಲೆಕ್ಕ ಸಿಗುವುದು ಹೇಗೆ— —"

ಅವರು ಆ ಮಾತು ಹೇಳುತ್ತಿರುವಂತೆಯೇ ಲೆಕ್ಕ ಸಿಗಲು ಅನುಕೂಲವಾಗುವಂತೆ ಹೋಟಲಿನವರು ಟಿಕೆಟ್ ಪುಸ್ತಕಗಳನ್ನು ಮಾಡಿದ್ದಾರೆ–ಎಂದವನ ಮನಸ್ಸಿಗೆ ಬಂದಿತು. ಆದರಾ ಮಾತನ್ನು ಬಾಯಿ ಬಿಟ್ಟು ಹೇಳಲಿಲ್ಲ.

ವಿಶಾಲಾಕ್ಷಮ್ಮನವರು ಮಾತು ಮುಗಿಸಿರಲಿಲ್ಲ. ಅವರ ಮಾತು ಮುಂದುವರಿಯಿತು.

"ಅದೂ ಅಲ್ಲದೇ ನೀನು ಈ ದಿನ ತಾನೇ ಬಂದಿದ್ದೀಯೆ. ನಾವು ನಿನಗೆ ರೂಂ ಬಾಡಿಗೆಗೆ ಕೊಟ್ಟಿರುವುದೇನೋ ನಿಜ. ಹಾಗಿದ್ದರೂ ಗುರುತು ಪರಿಚಯವಿಲ್ಲದವರ ಮನೆಯಲ್ಲಿ ರೂಂ ತೆಗೆದುಕೊಂಡ ಹಾಗೆ ನೀನು ಬರುತ್ತಿದ್ದಂತೆಯೇ ಹೋಟಲಿಗೆ ಹೋಗುವುದು ಚೆನ್ನಾಗಿರುವುದಿಲ್ಲ. ಮೊದಲನೆಯ ತಾರೀಖಿನವರೆವಿಗೆ ನೀನು ಇದ್ದುಬಿಡು. ಆ ಮೇಲೆ ನಿನಗೆ ಹೇಗೆ ಅನುಕೂಲವೋ ಹಾಗೆ ಮಾಡಿಕೋ"

"ನಾನು ಹೇಳುವುದು— — —"

"ನೀನು ಹೇಳುವುದೂ ಬೇಡ. ಕೇಳುವುದೂ ಬೇಡ. ಮೊದಲನೇ ತಾರೀಖಿನವರೆವಿಗೆ ಇಲ್ಲಿಯೇ ಊಟ ಮಾಡು"

ಆಕೆ ಹೇಳಿದುದು ಒಂದು ವಿಧವಾಗಿ ಆಜ್ಞೆ ಮಾಡಿದಂತೆ ಇದ್ದಿತು. ಅಷ್ಟು ಒತ್ತಾಯ ಮಾಡಿ ಹೇಳಿದನಂತರ ಕಡ್ಡಿ ಎರಡು ತುಂಡು ಮಾಡಿದಂತೆ ಅದನ್ನು ಮೀರುವುದು ರಾಜಣ್ಣನಿಗೆ ಸೂಕ್ತವಾಗಿ ಕಂಡುಬರಲಿಲ್ಲ.

ಅಂದು ರಾತ್ರಿಯಿಂದಲೇ ಹೋಟಲಿಗೆ ಊಟಕ್ಕೆ ಹೋಗಲೇಬೇಕೆಂದುಕೊಂಡಿದ್ದವನಿಗೆ ಅದು ಸಾಧ್ಯವಾಗಲಿಲ್ಲ.

ಗುಂಡೂರಾಯರ ಮನೆಯಲ್ಲಿರುವುದು ಸಂಕೋಚವಾಗುತ್ತಿದ್ದರೂ ರಾಜಣ್ಣನಿಗೆ ಅದು ಅನುಕೂಲವಾಗಿಯೇ ಇದ್ದಿತು. ಅವರ ಮನೆ ತನ್ನ ಮನೆಯಂತೆಯೇ ಇದ್ದಿತು.

ಬೆಳಗಾಗ ಅಷ್ಟು ಹೊತ್ತಿಗೇ ಕಾಫೀ ಸಿದ್ಧವಾಗಿರುತಿತ್ತು. ಕಾಫೀ ಕುಡಿದು ಓದುತ್ತಾ ಕುಳಿತಿದ್ದ. ಎಂಟು ಎಂಟೂವರೆಯ ವೇಳೆಗೆ ವಿಶಾಲಾಕ್ಷಮ್ಮನವರೋ ಅಥವಾ ಭಾಗ್ಯಳೋ ಬಂದು ಸ್ನಾನಕ್ಕೇಳಬೇಕೆಂದು ಹೇಳುತ್ತಿದ್ದರು. ಅವನು ಸ್ನಾನ ಮಾಡಿಕೊಂಡು ನಡುಮನೆಯನ್ನು ದಾಟಿಹೋಗುವ ಹೊತ್ತಿಗೆ ಸರಿಯಾಗಿ ವಿಶಾಲಾಕ್ಷಮ್ಮನವರು ಪುನಃ ಅರ್ಧ ಕಪ್ಪು ಕಾಫೀ ಕೊಡುತ್ತಿದ್ದರು. ಗುಂಡೂರಾಯರು ಆಫೀಸಿಗೆ ಹೋಗುತ್ತಿದ್ದುದರಿಂದ ಅವರಿಗೆ ಬೇಗನೆ ಊಟ ಮಾಡಿ ಅಭ್ಯಾಸವಾಗಿತ್ತು. ಅದರಿಂದ ಅವರ ಮನೆಯಲ್ಲಿ ಬೇಗನೇ ಅಡಿಗೆಯಾಗುತ್ತಿದ್ದಿತು. ಭಾಗ್ಯಳು ಕಾಲೇಜಿಗೆ ಹೋಗುತ್ತಿದ್ದುದರಿಂದ ರಾಜಣ್ಣನಿಗೂ ಹತ್ತು ಗಂಟೆಯ ವೇಳೆಗಾಗಲೇ ಅವಳ ಜೊತೆಯಲ್ಲಿಯೇ ಊಟವಾಗುತಿತ್ತು. ಸಂಜೆ ಕಾಲೇಜಿನಿಂದ ಬರುವ ವೇಳೆಗೆ ಕಾಫೀ ತಿಂಡಿಗಳು ಬರುತ್ತಿದ್ದವು. ರಾತ್ರಿ ಎಂಟು ಗಂಟೆಯ ಹೊತ್ತಿಗಾಗಲೇ ಊಟವಾಗುತಿತ್ತು.

ಇವರ ಮನೆಯಲ್ಲಿಯೇ ಇರುವುದು ಅಸಂಭವವಾದರೂ ಸಹ ಇಲ್ಲಿ ಬಹಳ ಅನುಕೂಲವಾಗಿರುವಂತೆ ರಾಜಣ್ಣನಿಗೆ ಎಷ್ಟೋ ಬಾರಿ ತೋರುತಿತ್ತು.

ಹೀಗೆಯೇ ಆರೇಳು ದಿನಗಳು ಆರೇಳು ನಿಮಿಷಗಳಂತೆ ಹಾರಿಹೋದುವು.

ಆ ದಿನ ಹತ್ತು ಗಂಟೆಯಾಗಿತ್ತು. ಕಾಲೇಜುಗಳಿಗೆ ಹೋಗುವ ಹುಡುಗರಿಗಾಗಿ ವಿಶಾಲಾಕ್ಷಮ್ಮನವರು ನಡುಮನೆಯಲ್ಲಿ ಎರಡು ತಟ್ಟೆಗಳನ್ನು ಹಾಕಿದ್ದರು. ಬಡಿಸುವುದಕ್ಕೆ ಬಂದವರು ನೋಡುತ್ತಾರೆ. ಭಾಗ್ಯ ಒಂದು ತಟ್ಟೆಯ ಮುಂದೆ ಕುಳಿತಿದ್ದಾಳೆ. ಮತ್ತೊಂದು ತಟ್ಟೆಯ ಮುಂದೆ ಯಾರೂ ಇಲ್ಲ.

ಆಕೆಗೆ ಆಶ್ಚರ್ಯವಾಯಿತು. ಬೆಳಗಾಗ ಸಂಜೆ ತಟ್ಟೆ ಹಾಕಿದ ಮೇಲೆ ಬೀದೀ ಬಾಗಿಲಿನಲ್ಲಿ ನಿಂತು ಕೋಣೆಯ ಕಡೆಗೆ ಮುಖ ಮಾಡಿಕೊಂಡು "ರಾಜಣ್ಣ" ಎಂದು ಕೂಗಿ ಒಳಗೆ ಬರುತ್ತಿದ್ದರು. ಕೋಣೆಯಲ್ಲಿಯೇ ಇದ್ದರೂ

ಅದು ಊಟದ ಕರೆಯೆಂದು ಅವನಿಗೆ ಗೊತ್ತಾಗುತ್ತಿತ್ತು. ಅವನೂ ಬಂದು ಬಿಡುತ್ತಿದ್ದ,

ಹಾಗೆಯೇ ಈ ದಿನವೂ ಕರೆದಿದ್ದರು. ಆದರೆ ರಾಜಣ್ಣ ಬಂದಿರಲಿಲ್ಲ.

ವಿಶಾಲಾಕ್ಷಮ್ಮನವರಿಗೆ ಅಚ್ಚರಿಯಾಗಿ "ಭಾಗ್ಯ. ರಾಜಣ್ಣ ಯಾಕೆ ಬರಲಿಲ್ಲವೋ ನೋಡು'' ಎಂದರು.

ಭಾಗ್ಯ ಎದ್ದು ಹೋಗಿ ನೋಡಿಕೊಂಡು ಬಂದು ಹೇಳಿದಳು.

''ಅವರಿಲ್ಲಮ್ಮ, ಬೀದಿಯ ಕೋಣೆಗೆ ಬೀಗ ಹಾಕಿದೆ"

ತಟ್ಟನೆ ಆಕೆಯ ಮನಸ್ಸಿಗೇನೋ ಬಂದಿತು.

ಮಗಳ ತಟ್ಟೆಯಲ್ಲಿ ಅನ್ನ ವಿಡುತ್ತಾ "ಈ ಹೊತ್ತು ಯಾವ ತಾರೀಖೇ"? ಎಂದರು.

''ಮೊದಲನೆಯ ತಾರೀಖು— —"

"ಸರಿ— —''

.ರಾಜಣ್ಣನಿಗೂ ವಿಶಾಲಾಕ್ಷಮ್ಮನವರಿಗೂ ನಡೆದ ಮಾತುಕತೆಗಳು ಭಾಗ್ಯಳಿಗೆ ಗೊತ್ತಿರಲಿಲ್ಲ.

ಬಿಸಿಯ ಅನ್ನದ ಮೇಲೆ ಕೈ ಬೆರಳಾಡಿಸಿ ಆರಿಸುತ್ತಾ ''ಅದೇನಮ್ಮಾ ಸರಿ ಎಂದರೆ ?" ಎಂದಳು.

ಆಕೆ ಮಾತನಾಡದೇ ಒಳಗೆ ಹೊರಟುಹೋದರು. ಪುನಃ ಸಾರು ಬಡಿಸುವಾಗ ಮಗಳು ಮೊದಲು ಕೇಳಿದ ಪ್ರಶ್ನೆಯನ್ನೇ ಕೇಳಿದಳು.

''ಏನೂ ಇಲ್ಲವೇ! ಯಾವ ತಾರೀಖು ಎಂದು ಕೇಳಿದೆ, ಅಷ್ಟೇ''

''ಅಷ್ಟೇ ಆಗಿದ್ದರೆ ಸರಿ ಎಂದೇಕೆ ಅನ್ನುತ್ತಿದ್ದೆಯಮ್ಮ''

''ಏನೋ ಅಂದೆ. ಕಾಲೇಜಿಗೆ ಹೊತ್ತಾಗುತ್ತದೆ ಬೇಗ ಊಟಮಾಡಿ ಹೋಗು"

ಭಾಗ್ಯಳಿಗೂ ಅವಸರವಾಗಿಯೇ ಇತ್ತು. ಹನ್ನೊಂದನೆಯ ನಂಬರು ಬಸ್ಸಿಗೆ ಕ್ಯೂ ನಿಲ್ಲುವ ಅನುಭವ ಅವಳಿಗೆ ಚೆನ್ನಾಗಿತ್ತು. ಆ ಅವಸರದಲ್ಲಿ ಅವಳು ಮುಂದೇನೂ ಪ್ರಶ್ನೆ ಮಾಡಲಿಲ್ಲ.

ಮುಖಕ್ಕೆ ಮತ್ತೊಮ್ಮೆ ಪೌಡರ್ ಹಾಕಿಕೊಂಡು ಮಗಳು ಹೊರಟು ಹೋದ ಮೇಲೆ ವಿಶಾಲಾಕ್ಷಮ್ಮನವರು ಗಂಡನನ್ನು ಕುರಿತು ''ಈ ದಿನ

ಮೊದಲನೆಯ ತಾರೀಖೆಂಬುದು ನಿನ್ನೆ ಜ್ಞಾಪಕಕ್ಕೆ ಬರಲಿಲ್ಲ. ಮೊದಲನೆಯ ತಾರೀಖಿನವರೆವಿಗೆ ಊಟ ಮಾಡು ಎಂದು ಹೇಳಿದೆನಲ್ಲಾ-ಎಂದು ರಾಜಣ್ಣ ಈ ದಿನ ಹೋಟಲಿಗೆ ಹೊರಟುಹೋದನೆಂದು ಕಂಡುಬರುತ್ತದೆ. ನಾನು ತಟ್ಟೆಗಳನ್ನು ಹಾಕಿ ದಿನವೂ ಕರೆಯುವಂತೆ ಕರೆದು ಒಳಗೆ ಬರುತ್ತೇನೆ. ನನಗೆ ಗೊತ್ತೇ ಆಗಲಿಲ್ಲ. ನಾನು ಕರೆಯುವ ವೇಳೆಗೆ ಅವನು ಹೋಟಲಿಗೆ ಹೋಗಿದ್ದ" ಎಂದರು.

ಅದಕ್ಕೆ ಗುಂಡೂರಾಯರು ಮಾತನಾಡಲಿಲ್ಲ.

ಗಂಡ ಏನಾದರೂ ಮಾತನಾಡುತ್ತಾರೆಯೆನೋ ಎಂದು ಆಕೆ ಗಳಿಗೆ ಕಾಲ ತಡೆದು ನೋಡಿದರು. ಆತ ಏನೂ ಮಾತನಾಡದಿರಲು ಒಳಗೆ ಹೊರಟುಹೋದರು.

ಊಟ ಅವಸರವಾಗುತ್ತದೆಂದು ಗುಂಡೂರಾಯರು ಹುಡುಗರ ಜೊತೆಯಲ್ಲಿ ಕುಳಿತು ಊಟ ಮಾಡುತ್ತಿರಲಿಲ್ಲ. ದಿನವೂ ಅವರು ಊಟಕ್ಕೇಳುತ್ತಿದ್ದುದು ಹನ್ನೊಂದು ಗಂಟೆಯ ವೇಳೆಗೆ. ಇನ್ನೂ ವೇಳೆಯಾಗಿಲ್ಲವೆಂದು ಹಜಾರದಲ್ಲಿಯೇ ಕುಳಿತುಕೊಂಡಿದ್ದರು.

ಹತ್ತೂವರೆಯ ವೇಳೆಗೆ ಅವರಿಗೊಂದು ಕಾಗದ ಬಂದಿತು. ಓದಿ ನೋಡಿದರು. ಸಮಾಧಾನವಾಯಿತು.

"ಲೇ.... —" ಎಂದು ಹೆಂಡತಿಯನ್ನು ಕರೆದರು.

ವಿಶಾಲಾಕ್ಷಮ್ಮ ಬಂದು ನಿಂತರು.

"ಮಾಗಡಿಯಿಂದ ವೆಂಕಟೇಶ ಕಾಗದ ಬರೆದಿದ್ದಾನೆ"

"ಏನೆಂದು ಬರೆದಿದ್ದಾರೆ ?"

"ಹೇಳುವುದರೊಳಗಾಗಿ ಆತುರಪಡುತ್ತೀಯಲ್ಲಾ. ಹೀಗೆ ಮೊದಲನೆಯ ತಾರೀಖಿನಿಂದ ರಾಜಣ್ಣ ಹೋಟಲಿನಲ್ಲಿ ಊಟ ಮಾಡುವುದಾಗಿ ಹೇಳುತ್ತಾನೆ. ಅವನಿಗೆ ಪ್ರತ್ಯೇಕವಾಗಿ ಅಡಿಗೆ ಮಾಡಬೇಕಾಗಿಲ್ಲ. ನಾಲ್ಕು ಜನದೊಂದಿಗೆ ಅವನಿಗೂ ಒಂದು ತುತ್ತು. ಇಲ್ಲಿಯೇ ಊಟ ಮಾಡಿಕೊಂಡಿರಲಿ-ಎಂದು ನಮ್ಮ ಅಭಿಮತ. ನಿನ್ನ ಇಷ್ಟವು ಹೇಗಿದೆಯೋ ಹಾಗಾಗಲೀ ಎಂದು ಬರೆದಿದ್ದೆ"

"ಆ ಮೇಲೆ- - -"

"ಹೇಳುತ್ತಿದ್ದೇನೆ"

"ಹೇಳುತ್ತಿದ್ದೀರಿ. ಹೇಳುವುದನ್ನು ನಿಲ್ಲಿಸಿಬಿಟ್ಟಿರಲ್ಲಾ ಎಂದು ಕೇಳಿದೆ"

"ಕೇಳಿದರೇನು ತಪ್ಪಾಗಲಿಲ್ಲ. ಏಳು ತಿಂಗಳಿಗೇ ಹುಟ್ಟಿದವಳಂತೆ ಆಡುತ್ತೀಯಲ್ಲಾ–ಎಂದು ಅಷ್ಟೇ. ಇಲ್ಲಿಯೇ ಊಟ ಮಾಡಿಕೊಂಡಿರಬೇಕೆಂದು ರಾಜಣ್ಣನಿಗೆ ಅವನು ಕಾಗದ ಬರೆದಿದ್ದಾನೆ"

"ಅವರು ಕಾಗದ ಬರೆದರೆಂದು ರಾಜಣ್ಣ ಒಪ್ಪಿಕೊಳ್ಳುತ್ತಾನೆಯೇ?"

"ಒಪ್ಪಿಕೊಳ್ಳದೇ ಏನು, ಅವನು ಹೇಳಿದುದೇ ಇವನಿಗೆ ವೇದವಾಕ್ಯ"

"ಹಾಗಾದರೆ– – –"

"ಅದೇ ಈಗ ಬಂದಿರುವುದು. ವೆಂಕಟೇಶಯ್ಯ ಹೇಳಿಬಿಟ್ಟರೆ ರಾಜಣ್ಣ ಈ ದಿನ ಭಾಗ್ಯಳನ್ನು ಮದುವೆ ಮಾಡಿಕೊಳ್ಳುತ್ತಾನೆ"

"ನೀವೇಕೆ ವೆಂಕಟೇಶಯ್ಯನವರಿಗೆ ಹೇಳಿ ಮಾತನಾಡಿಸಲಿಲ್ಲ?"

"ಇದಕ್ಕೇ ಹೆಂಗಸರಿಗೆ ಬುದ್ಧಿಯಿಲ್ಲವೆಂದು ಹೇಳುವುದು. ವಯಸ್ಸಿಗೆ ಬಂದಿರುವ ಮಗಳನ್ನು ಮನೆಯಲ್ಲಿಟ್ಟುಕೊಂಡು ನಾನು ಹೇಳದೇ ಇರುತ್ತೇನೆಯೇ? ಹೇಳಿದೆ, ಒತ್ತಾಯ ಮಾಡಿದೆ. ಆದರೆ ವೆಂಕಟೇಶಯ್ಯ ನನ್ನ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ"

ವಿಶಾಲಾಕ್ಷಮ್ಮನವರು ಈಗ ವಾಸ್ತವವಾಗಿ ಆಶ್ಚರ್ಯಗೊಂಡರು.

"ನೀವು ಹೇಳಿದರೂ ವೆಂಕಟೇಶಯ್ಯನವರು ಕೇಳಲಿಲ್ಲ ಎಂದರೆ ನಂಬುವುದಕ್ಕೇ ಕಷ್ಟವಾಗುತ್ತದೆ"

"ಗಂಡನಾದವನು ಎದುರಿಗೆ ಕುಳಿತು ಹೇಳುತ್ತಿದ್ದರೆ ನಂಬುವುದಕ್ಕೆ ಕಷ್ಟವಾಗುತ್ತದೆ–ಎನ್ನುತ್ತೀಯಲ್ಲಾ. ನಾನು ಹೇಳುವುದಿರಲಿ, ನಮ್ಮಪ್ಪ ಎದ್ದು ಬಂದು ಹೇಳಿದರೂ ಅವನು ಕಿವಿಯ ಮೇಲೆ ಹಾಕಿಕೊಳ್ಳುವುದಿಲ್ಲ. ಒಂದೇ ಹಟವನ್ನು ಹಿಡಿದು ಕುಳಿತಿದ್ದಾನೆ"

"ಅದೇಕೆ ಹಾಗೆ ಹಟಹಿಡಿದಿದ್ದಾರೆ–ಎಂದೇ ನಾನು ಕೇಳುತ್ತಿರುವುದು"

"ಆ ದಿನ ವೆಂಕಟೇಶ ಹೇಳಲಿಲ್ಲವೇನೇ? ತನ್ನ ಮಗಳು ಜಯಳಿಗೆ ಕೇಳಲು ಹೋದಾಗ ಇನ್ನು ಎರಡು ವರ್ಷ ಮದುವೆಯಾಗುವುದಿಲ್ಲ ಎಂದು ರಾಜಣ್ಣ ಹೇಳಿದನೆಂದು. ಅದನ್ನೇ ಹೇಳಿಕೊಂಡು ಕುಳಿತಿದ್ದಾನೆ ವೆಂಕಟೇಶ"

"ಯಾರೇನು ಮಾಡುವುದಕ್ಕಾಗುತ್ತದೆ? ನಮ್ಮ ಹುಡುಗಿಗೆ ಲಗ್ನ ಬಲವಿಲ್ಲದಿರುವಾಗ. ನನಗಂತೂ ಇವಳಿಗೆ ಮದುವೆಯಾಗುತ್ತದೆಯೋ ಇಲ್ಲವೋ ಎನ್ನಿಸಿಬಿಟ್ಟಿದೆ. ಅದಕ್ಕೆ ತಕ್ಕ ಹಾಗೇ ದೇವರು ಅವಳಿಗೂ ಬುದ್ಧಿ ಕೊಟ್ಟಿದ್ದಾನೆ. ತನಗೆ ಮದುವೆಯೇ ಬೇಡವೆಂದು ಕುಳಿತಿದ್ದಾಳವಳು"

ಅದಕ್ಕೆ ಗುಂಡೂರಾಯರು ಏನೂ ಹೇಳಲಿಲ್ಲ. ಯಾವ ಮಾತಿಗೆ ಏನೂ ಹೇಳುವುದಕ್ಕೆ ಆಗುವುದಿಲ್ಲವೋ ಅದಕ್ಕೆ ಏನು ತಾನೇ ಹೇಳುವುದಕ್ಕಾಗುತ್ತದೆ?

ಸಾಯಂಕಾಲ ಮನೆಗೆ ಬಂದ ರಾಜಣ್ಣನನ್ನು ಕರೆದು ಭಾಗ್ಯ ಕಾಫೀ ತಿಂಡಿಗಳನ್ನು ಕೊಟ್ಟಳು. ಆದರೆ "ಬೆಳಗಾಗ ಊಟ ಮಾಡಿಕೊಳ್ಳದೇ ಯಾಕೆ ಹೋದೆ?" ಎಂದು ಕೇಳಲಿಲ್ಲ.

"ನಿಮ್ಮ ತಾಯಿಯವರೆಲ್ಲಿ ಕಾಣಲಿಲ್ಲವಲ್ಲ"

"ಅವರು ಸಾವಿತ್ರಮ್ಮನವರೊಡನೆ ಮಾತನಾಡಲು ಪಕ್ಕದ ಮನೆಗೆ ಹೋಗಿದ್ದಾರೆ.

ತಟ್ಟೆಯಲ್ಲಿ ತಿಂಡಿಯನ್ನು ತಂದು ಭಾಗ್ಯ ಮುಂದಿಟ್ಟಳು.

ಏನೋ ಮೊದಲೇ ವಿಶಾಲಾಕ್ಷಮ್ಮನವರು ಹೇಳಿದಂತೆ ನಾಲ್ಕು ದಿನ ಊಟ ಮಾಡಿಕೊಂಡಿದ್ದುದ್ದು ಸರಿ. ಕೇವಲ ರೂಂ ಬಾಡಿಗೆಗೆ ತೆಗೆದುಕೊಂಡಿರುವ ತಾನು ದಿನವೂ ಇವರ ಮನೆಯಲ್ಲಿ ಕಾಫೀತಿಂಡಿ ಗಿಟ್ಟಿಸುವುದು ಸರಿಯೇನು? ಇವರು ಯಾಕೆ ತನ್ನನ್ನು ಈ ರೀತಿಯಾಗಿ ಬಲಾತ್ಕಾರ ಮಾಡುತ್ತಿದ್ದಾರೆ?

ಅವಲಕ್ಕಿಯನ್ನು ಬೇಯಿಸಿ ಅದಕ್ಕೆ ಉಪ್ಪುಕಾರ ಹಾಕಿದ್ದರು, ಅದೇ ಆ ದಿನದ ತಿಂಡಿ. ರುಚಿಯಾಗಿತ್ತು. ತಟ್ಟೆಯ ತುಂಬಾ ಕೊಟ್ಟಿದ್ದಳು. ಅದನ್ನು ತಿನ್ನುತ್ತಿರುವಾಗ ರಾಜಣ್ಣನ ಮನಸ್ಸಿಗೆ ಒಂದು ಆಲೋಚನೆಯು ಹೊಳೆಯಿತು.

ಏನಾದರೂ ಉಪಾಯ ಮಾಡಿ ತನಗೆ ಭಾಗ್ಯಳನ್ನು ಕೊಟ್ಟು ಮದುವೆ ಮಾಡಲು ಈ ಉಪಾಯ ಮಾಡುತ್ತಿದ್ದಾರೆಯೇ?

ಅದೇ ಸಮಯದಲ್ಲಿ ಫಳಫಳನೆ ಬೆಳಗುತ್ತಿದ್ದ ಸ್ಟೇನ್‌ಲೆಸ್ ಸ್ಟೀಲ್ ಪಾತ್ರೆಯಲ್ಲಿ ಭಾಗ್ಯ ಕುಡಿಯುವುದಕ್ಕೆ ನೀರು ತಂದಿಟ್ಟಳು.

ರಾಜಣ್ಣ ಅವಳ ಕಡೆಗೆ ನೋಡಿದ. ಅವಳೂ ಅವನನ್ನು ನೋಡು ತ್ತಿದ್ದಳು. ನಾಲ್ಕು ಕಣ್ಣುಗಳೂ ಕೂಡಿದವು. ಕ್ಷಣಕಾಲ ಅವು ಹಾಗೆಯೇ ಇದ್ದವು. ರಾಜಣ್ಣ ಪ್ರಯಾಸಪೂರ್ವಕವಾಗಿ ತನ್ನ ದೃಷ್ಟಿಯನ್ನು ಹಿಂದೆ ಳೆದುಕೊಂಡ. ಅವಳು ಹೊರಟುಹೋದಳು.

ತಾನು ಹಾಗೆ ನೋಡಿದ್ದರಿಂದ ಅವಳೇನಾದರೂ ಅನ್ಯಥಾ ಭಾವಿಸಿ ದಳೋ ?

ತಾನು ಮಾಡಿದ ಕೆಲಸಕ್ಕೆ ಅವನಿಗೆ ನಾಚಿಕೆಯಾಯಿತು. ಮಾಡ ಬಾರದ ಕೆಲಸವನ್ನು ಮಾಡಿದಂತೆ ಭಾಸವಾಯಿತು. ಜಯಳ ಮದುವೆ ಕಾಲದಲ್ಲಿ ಎಲ್ಲರೂ ಇದ್ದುದರಿಂದ ಪರಿಚಯವಾಗಿದೆ. ಗುಂಡೂರಾಯರೂ ವಿಶಾಲಾಕ್ಷಮ್ಮನವರೂ ಇನ್ನೂ ಅದೇ ವಿಶ್ವಾಸವನ್ನಿಟ್ಟುಕೊಂಡು ತನ್ನನ್ನು ಮಗನಂತೆ ನೋಡಿಕೊಳ್ಳುತ್ತಿದ್ದಾರೆ. ಭಾಗ್ಯಳೂ ಅಷ್ಟೇ. ಮದುವೆಯಲ್ಲಿ ಇಬ್ಬರೂ ಒಟ್ಟಿಗೆ ಓಡಿಯಾಡುತ್ತಿದ್ದ ಬಳಕೆಯ ಮೇಲೆ ಆಗೊಂದು ಈಗೊಂ ಮಾತನಾಡುತ್ತಾಳೆ.

ಅಂತಹವರ ಮಗಳನ್ನು ಕಾಮದೃಷ್ಟಿಯಿಂದ ನೋಡುವುದೇ ? ಬಯ ಕೆಯಿದೆಯೆಂದು ತನ್ನೊಡನೆ ಸಲಿಗೆಯಿಂದ ಇರುವ ಭಾಗ್ಯಳನ್ನು ತಾನು ಆ ದೃಷ್ಟಿಯಿಂದ ನೋಡುವುದೇ ?

ತನಗೇ ಕೊಟ್ಟು ಮದುವೆ ಮಾಡುವ ಉದ್ದೇಶ ಅವಳ ತಾಯಿತಂದೆ ಗಳಿಗಿದೆಯೇನೋ–ಎಂಬ ಭಾವನೆ ಮತ್ತೆ ಇಣಕಿ ನೋಡಿತು.

ಕೂಡಲೇ ಆ ಭಾವನೆಯನ್ನು ದಮನ ಮಾಡಿ ತನ್ನ ಮನಸ್ಸನ್ನು ಸರಿ ಮಾಡಿಕೊಂಡ.

ಛಿ ಛಿ, ಎಲ್ಲಿಯಾದರೂ ಉಂಟೆ ? ಅವರಿಗೆ ಆ ಭಾವನೆಯಿದ್ದ ಹಾ ಗಿಲ್ಲ. ಸ್ವಲ್ಪವಾದರೂ ಆ ಭಾವನೆ ಇದ್ದುದಾಗಿದ್ದರೆ ತನಗೆ ಪರಮಾಪ್ತರಾದ ವೆಂಕಟೇಶಯ್ಯನವರು ಸೂಕ್ಷ್ಮವಾಗಿಯಾದರೂ ಆ ವಿಷಯವನ್ನು ಪ್ರಸ್ತಾವಿ ಸದೇ ಇರುತ್ತಿರಲಿಲ್ಲ. ಇನ್ನೂ ಒಂದು ವಿಷಯವಿದೆ. ಹಾಗೇನಾದರೂ ಅವರ ಮನಸ್ಸಿನಲ್ಲಿದ್ದಿದ್ದರೆ ತಾನು ಬಾಡಿಗೆಗೆ ರೂಂ ಸಿಕ್ಕದೇ ಅಲೆದಾಡುತ್ತಿದ್ದಾಗ "ಬಂದು ನಮ್ಮ ಮನೆಯಲ್ಲಿಯೇ ಇರು'' ಎಂದು ಹೇಳುತ್ತಿದ್ದರು. ''ರೂಂ ಬಾಡಿಗೆ ತಿಂಗಳಿಗೆ ಹತ್ತು ರೂಪಾಯಿ ಕೊಡು'' ಎಂದು ಹೇಳುತ್ತಿರಲಿಲ್ಲ.

ಹಾಗಾದರೆ ಈ ರೀತಿ ಊಟ ತಿಂಡಿಗೆ ಉಪಚಾರ ಮಾಡುತ್ತಾರೆ ಯೇಕೆ?

ಅದು ಅವರ ಒಳ್ಳೆಯತನ, ಅಷ್ಟೇ.

ಹೀಗೇ ಅವನು ಯೋಚನೆ ಮಾಡುತ್ತಿದ್ದ. ಯಂತ್ರದಂತೆ ತಟ್ಟೆಯಲ್ಲಿದ್ದ ಅವಲಕ್ಕಿಯನ್ನು ತೆಗೆದು ಬಾಯಲ್ಲಿ ಇಟ್ಟುಕೊಳ್ಳುತ್ತಿದ್ದ. ಅದೂ ಮುಗಿದುಹೋಗಿತ್ತು.

ಆ ಸಮಯದಲ್ಲಿ ಅಡಿಗೆಯ ಮನೆಯ ಬಾಗಿಲಿನಲ್ಲಿ ನಿಂತುಕೊಂಡಿದ್ದ ಭಾಗ್ಯ ಹೇಳಿದಳು. ನಗುತ್ತಾ ಹೇಳಿದಳು.

"ತಂದಿಟ್ಟ ಕಾಫೀ ಆರಿಹೋಗುತ್ತಿದೆ, ಕುಡಿಯಿರಿ''

ಉಳುಕಿ ಬಿದ್ದ. ಮುಂದೆ ನೋಡಿ, ಅಲ್ಲಿದ್ದ ಕಾಫಿಯನ್ನು ತೆಗೆದು ಕುಡಿಯತೊಡಗಿದ,

"ಏನೋ ಯೋಚನೆ ಮಾಡುತ್ತಿದ್ದೀರೆಂದು ಕಾಣುತ್ತದೆ. ಅದಕ್ಕೇ ಮುಂದೆ ತಂದಿಟ್ಟ ಕಾಫಿಯು ನಿಮಗೆ ಕಂಡುಬರಲಿಲ್ಲ"

ಭಾಗ್ಯ ಎಷ್ಟು ಚತುರೆ. ತಾನೇನೋ ಯೋಚನೆ ಮಾಡುತ್ತಿದ್ದೇನೆಂಬುದನ್ನು ಕಂಡುಕೊಂಡಳು.

''ಯೋಚನೆಯೇನು ಬಂದಿತು. ಏನೂ ಇಲ್ಲ"

ಕಾಫೀ ಲೋಟವನ್ನು ಕೆಳಗಿಟ್ಟು ಕೈ ತೊಳೆದುಕೊಳ್ಳಲು ಹೋದ. ಹೋಗುವಾಗ ಅವನಿಗೆನ್ನಿಸಿತು, ತಾನು ಹಾಗೆ ನೋಡಿದ್ದರಿಂದ ಅವಳು ತಪ್ಪು ತಿಳಿದುಕೊಂಡಿಲ್ಲ. ಹಾಗೇನಾದರೂ ತಿಳಿದುಕೊಂಡಿದ್ದರೆ ಅವಳು ಮಾತನಾಡುತ್ತಿರಲಿಲ್ಲ.

ರಾಜಣ್ಣ ಕೈ ಒರೆಸಿಕೊಂಡು ಹೊರಗೆ ಬರುವ ವೇಳೆಗೆ ಗುಂಡೂರಾಯರು ಹಜಾರದ ಚಾಪೆಯ ಮೇಲೆ ಕುಳಿತುಕೊಂಡಿದ್ದರು.

ನೋಡಿದ ಕೂಡಲೇ ಅವನನ್ನು ಕರೆದು ''ರಾಜಣ್ಣ. ವೆಂಕಟೇಶಯ್ಯನವರು ನಿನಗೊಂದು ಕಾಗದವನ್ನು ಬರೆದಿದ್ದಾರೆ" ಎಂದರು.

ನಿಂತುಕೊಂಡೇ ಕೈ ನೀಡಿದ. ಆದರೆ ಅವರು ಅವನನ್ನು ಕುಳಿತುಕೊಳ್ಳುವಂತೆ ಹೇಳಿ, ಅನಂತರ ಜೇಬಿನಿಂದ ಕವರು ತೆಗೆದು, ಅದರಲ್ಲಿದ್ದ ಕಾಗದಗಳನ್ನು ನೋಡಿ, ಒಂದನ್ನು ಅವನ ಕೈಗೆ ಕೊಟ್ಟರು.

ರಾಜಣ್ಣ ಕಾಗದವನ್ನು ತೆಗೆದುಕೊಂಡು ಓದಿದ. ಅದರಲ್ಲಿ ಈ ರೀತಿ ಯಾಗಿತ್ತು.

“ಚಿ॥ ರಾ॥ ರಾಜಣ್ಣನಿಗೆ, ವೆಂಕಟೇಶಯ್ಯನು ಮಾಡುವ ಆಶೀರ್ವಾದ ಗಳು.

“ಅದಾಗಿ ಉಭಯ ಕುಶಲೋಪರಿ ಸಾಂಪ್ರತ. ನಾನು ಬೆಂಗಳೂರಿನಿಂದ ಬರುವಾಗ ಗುಂಡೂರಾಯರಲ್ಲಿಯೂ, ನಿನ್ನಲ್ಲಿಯೂ ಒಂದು ವಿಷಯವನ್ನು ಮಾತನಾಡಬೇಕೆಂಬ ಉದ್ದೇಶವಿತ್ತು. ಆಗಲೇ ವಿಷಯುವನ್ನು ಪ್ರಸ್ತಾಪವಾಡಲಿಲ್ಲ. ನಾನೂ ಗುಂಡೂರಾಯರೂ ಆಪ್ತ ಸ್ನೇಹಿತರೆಂದೂ. ಏಕದೇಹ ನ್ಯಾಯುವೆನ್ನುತ್ತಾರೆಯಲ್ಲಾ ಹಾಗೆಂದೂ ನಿನಗೆ ತಿಳಿದಿರಬಹುದು. ನನಗೆ ಒಬ್ಬ ಮಗನಿದ್ದಿದ್ದರೆ ಹೇಗೋ ನೀನೂ ಹಾಗೆಯೆ ಎಂಬುದಾಗಿ ನಾನು ಭಾವನೆ ಮಾಡಿಕೊಂಡಿದ್ದೇನೆ. ಅಂತಹದರಲ್ಲಿ ನೀನು ಹೋಟಲಿನಲ್ಲಿ ಊಟ ಮಾಡಿಕೊಂಡಿರುವುದು,ಸರಿಯುಲ್ಲ. ಪಟ್ಟಣವಾಸಿಯೂ ಆಧುನಿಕ ಯುವಕನೂ ಆದ ನಿನಗೆ ಅದು ಸರಿಯಾಗಿ ಕಾಣಬಹುದು, ಆದರೆ ಹಳ್ಳಿಗನೂ, ಸಂಪ್ರದಾಯಶರಣನೂ ಅದ ನನಗೆಅದು ಸರಿಯಾಗಿ ಕಾಣುವುದಿಲ್ಲ. ತಿಂಗಳು ಗಟ್ಟಲೇ ಅವರ ಮನೆಯಲ್ಲಿರುವುದು ಹೇಗೆಂದು ನೀನು ಭಾವಿಸುವುದಾದರೆ ಅವರ ಋಣವನ್ನು ಯಾವ ರೀತಿಯಾಗಿ ತೀರಿಸಬೇಕೆಂಬುದನ್ನು ನಾನೂ ನೀನೂ ಸೇರಿ ಆಲೋಚನೆ ಮಾಡೋಣ. ಇಲ್ಲಿ ಮನೆ ಕಡೆ ನನಗೆ ಸ್ವಲ್ಪ ಕೆಲಸವಿದೆ, ಅದನ್ನು ಮುಗಿಸಿಕೊಂಡವನೇ ಬೆಂಗಳೂರಿಗೆ ಬರುತ್ತೇನೆ. ಆಗ ನಾವು ಎಲ್ಲಾ ವಿಷಯುಗಳನ್ನೂ ಮಾತನಾಡೋಣ. ಈ ವಿವರವನ್ನು ಗುಂಡೂರಾಯರಿಗೂ ಬರೆದಿದ್ದೇನೆ. ಒಟ್ಟಿನಲ್ಲಿ ನೀನು ನನ್ನ ಮಾತು ತೆಗೆದುಹಾಕುವುದಿಲ್ಲವೆಂದು ನಂಬಿಕೊಂಡು ಈ ಕಾಗದ ಬರೆದಿದ್ದೇನೆ.

“ಬಾಕೀ ವಿಷಯ ಮೋಕ್ತಾ”

ಕಾಗಧವನ್ನು ಓದಿದನಂತರ ರಾಜಣ್ಣ ಏನಾದರೂ ಮಾತನಾಡುತ್ತಾನೆಯೇನೋ ಎಂದು ಗುಂಡೂರಾಯರು ಅವನ ಕಡೆಗೆ ನೋಡಿದರು. ಮಾತನಾಡಲಿಲ್ಲ. ಅವನ ಮುಖದಲ್ಲಿ ಯಾವುದಾದರೂ ಭಾವವು ಕಂಡುಬರುತ್ತದೆಯೇನೋ ಎಂದು ಸಹ ಈಕ್ಷಿಸಿದರು. ಅವನ ಮುಖದಲ್ಲಿ ಯಾವ ಭಾವವೂ ಕಂಡುಬರಲಿಲ್ಲ.

ರಾಜಣ್ಣ ಕಾಗದವನ್ನು ಜೇಬಿನಲ್ಲಿಟ್ಟುಕೊಂಡು ತನ್ನ ಕೋಣೆಗೆ ಹೊರಟುಹೋದ.

ಗುಂಡೂರಾಯರು ಕುತೂಹಲದಿಂದ ನಿರೀಕ್ಷಿಸುತ್ತಿದ್ದ ಪ್ರಶ್ನೆಗೆ ಉತ್ತರ ಸಿಕ್ಕಿದ್ದು ಆ ದಿನ ರಾತ್ರಿ ಎಂಟು ಗಂಟೆಯ ಸಮಯದಲ್ಲಿ.

ಹೊರಗಡೆ ಸುತ್ತುವುದಕ್ಕೆ ಹೋದ ರಾಜಣ್ಣ ಏಳೂವರೆಯ ಒಳಗಾಗಿ ಮನೆಗೆ ವಾಪ್ಸು ಬಂದುಬಿಟ್ಟ. ವಿಶಾಲಾಕ್ಷಮ್ಮನವರು ರಾತ್ರಿಯ ಊಟಕ್ಕೆ ತಟ್ಟೆಗಳನ್ನು ಹಾಕಿ ಕರೆಯುತ್ತಲೇ ಊಟಕ್ಕೆ ಬಂದು ಕುಳಿತುಕೊಂಡ.

ತಟ್ಟೆಗಳಲ್ಲಿ ಮೊದಲೇ ಮಾವಿನಕಾಯಿ ಉಪ್ಪಿನ ಕಾಯಿ ಬಡಿಸಿದ್ದರು.

ಬಿಸಿಬಿಸಿಯಾಗಿ ಹಬೆ ಬರುತ್ತಿದ್ದ ಅನ್ನವನ್ನು ತಟ್ಟೆಯಲ್ಲಿ ಹಾಕುತ್ತಾ ವಿಶಾಲಾಕ್ಷಮ್ಮನವರು "ರಾಜಣ್ಣ. ನ್ಯಾಯವಾಗಿ ನಿನಗೆ ಮಧ್ಯಾನ್ಹದ ಅನ್ನ ಸಾರುಗಳನ್ನು ಬಡಿಸಬೇಕು. ನೀನು ಊಟ ಮಾಡದೇ ಅಡಿಗೆ ಮಿಕ್ಕಿದೆ" ಎಂದರು.

ರಾಜಣ್ಣನು ನಗುತ್ತಾ "ಆಗಬಹುದು. ಅದನ್ನೇ ಬಡಿಸಿರಿ. ನನಗದು ಅಭ್ಯಾಸವಿದೆ" ಎಂದು ಹೇಳಿದ,

"ಅದು ಸರಿ. ಆದರೆ ಬೆಳಗಾಗ ಹೇಳದೇ ಕೇಳದೇ ನೀನು ಹೋಟಲಿಗೆ ಊಟಕ್ಕೆ ಹೋದೆಯೇಕೆ ?''

ಅದಕ್ಕೆ ಉತ್ತರ ಹೇಳಬೇಕೆಂದು ರಾಜಣ್ಣ ಆಲೋಚಿಸುತ್ತಿರುವಾಗಲೇ ಮೂರು ತಟ್ಟೆಗಳಿಗೂ ಅನ್ನ ಹಾಕಿ, ಆಕೆ ಒಳಗೆ ಹೊರಟುಹೋಗಿದ್ದರು.

ಆಕೆ ತುಪ್ಪದ ಬಟ್ಟಲನ್ನು ತೆಗೆದುಕೊಂಡು ಪುನಃ ಹೊರಗೆ ಬಂದಾಗ "ನೀವು ವೆಂಕಟೇಶಯ್ಯನವರಿಂದ ಈ ರೀತಿಯಾಗಿ ಕಾಗದ ಬರೆಸುತ್ತೀರೆಂದು ಗೊತ್ತಿದ್ದಿದ್ದರೆ ನಾನು ಹೋಗಿ ಹೋಟಲಿನಲ್ಲಿ ಟಿಕೆಟ್ ಪುಸ್ತಕವನ್ನೇ ತೆಗೆದು ಕೊಳ್ಳುತ್ತಿರಲಿಲ್ಲ. ಈಗ ಅದನ್ನು ಅವನಿಗೆ ವಾಪ್ಸು ಕೊಡುವುದು ಹೇಗೆಂದು ಯೋಚನೆ ಮಾಡುತ್ತಿದ್ದೇನೆ" ಎಂದ.

''ಇಲ್ಲಪ್ಪ, ಅವರು ವೆಂಕಟೇಶಯ್ಯನವರಿಗೆ ಬರೆದು ಕಾಗದ ತರಿಸಲಿಲ್ಲ. ನೀನು ನಮ್ಮ ಮನೆಯಲ್ಲಿರುವುದಾಗಿ ಹೇಳಿ ಹೋದ ದಿನ ರಾತ್ರಿಯೇ ಅವರು ನನ್ನನ್ನು ಕರೆದು "ರಾಜಣ್ಣ ನನಗೆ ಬಹಳ ಬೇಕಾದವನು. ಅವನು ಹೋಟಲಿನಲ್ಲಿ ಊಟ ಮಾಡುವುದು ಬೇಡ. ನಿಮ್ಮ ಮನೆಯಲ್ಲಿಯೇ ಊಟ

ಮಾಡಲಿ" ಎಂದು ಹೇಳಿದರು. ಅದರಿಂದಲೇ ಆ ದಿನ ನಾನು ಖಂಡಿತವಾಗಿ ನಿನಗೆ ಹೇಳಿದ್ದು"

ವಿಶಾಲಾಕ್ಷಮ್ಮನವರು ಹೇಳಿದ ಮಾತು ನಂಬುವುದೋ ಬಿಡುವುದೋ ರಾಜಣ್ಣನಿಗೆ ಅರ್ಥವಾಗಲಿಲ್ಲ.

## ೧೦

ಮನೆಯವನಂತೆಯೇ ರಾಜಣ್ಣ ಗುಂಡೂರಾಯರ ಮನೆಯಲ್ಲಿಯೇ ಇರತೊಡಗಿದ ಕಾಲೇಜಿಗೆ ಹೋಗಿಬರುವುದು, ಪಾಠಪ್ರವಚನಗಳೂ ಮಾಮೂಲಾಗಿ ನಡೆದುಕೊಂಡು ಹೋಗುತ್ತಿದ್ದವು.

ಆದರೆ ಸದಾ ಅವನ ಮನಸ್ಸಿನಲ್ಲಿ ಒಂದು ಆಲೋಚನೆಯು ಕಾಡಿಸುತಿತ್ತು. ಅದು ತೀರದ ಸಮಸ್ಯೆಯಾಗಿತ್ತು.

ಗುಂಡೂರಾಯರ ಮನೆಯಲ್ಲಿ ತನ್ನನ್ನೇಕೆ ಇಷ್ಟೊಂದು ಆದರದಿಂದ ನೋಡಿಕೊಳ್ಳುತ್ತಿದ್ದಾರೆ? ಭಾಗ್ಯಳನ್ನು ತನಗೆ ಕೊಟ್ಟು ಮದುವೆ ಮಾಡಬೇಕೆಂಬ ಉದ್ದೇಶ ಅವರ ಮನಸ್ಸಿನಲ್ಲಿದೆಯೇನು? ವೆಂಕಟೇಶಯ್ಯನವರು ಅವರ ಪತ್ರದಲ್ಲಿ ಒಂದು ಮಾತು ಬರೆದಿದ್ದರು. "ಅವರ ಋಣವನ್ನು ಯಾವ ರೀತಿಯಾಗಿ ತೀರಿಸುವುದೆಂಬುದನ್ನು ನಾನೂ ನೀನೂ ಸೇರಿ ಆಲೋಚನೆ ಮಾಡೋಣ" ಎಂದು ಬರೆದಿದ್ದರು. ಈ ರೀತಿ ಅನ್ನ ಹಾಕುತ್ತಿರುವುದೇ ಅವರು ತನ್ನ ಮೇಲೆ ಹೊರಿಸುತ್ತಿರುವ ಋಣವೇನು? ಅದನ್ನು ತೀರಿಸುವುದಕ್ಕಾಗಿ ತಾನು ಭಾಗ್ಯಳನ್ನು ಮದುವೆಯಾಗಬೇಕೇನು?

ಭಾಗ್ಯಳನ್ನು ಜೀವನದ ಸಂಗಾತಿಯಾಗಿ ಪರಿಗ್ರಹಿಸು ಎಂದು ಯಾರೂ ಹೇಳಿರಲಿಲ್ಲ. ಆದರೂ ಸಹ ಕಣ್ಣಿಗೆ ಹಬ್ಬವನ್ನುಂಟುಮಾಡುವ ಆ ಹುಡುಗಿಯನ್ನು ಅನುದಿನವೂ ನೋಡುತ್ತಿದ್ದ ರಾಜಣ್ಣನ ಮನಸ್ಸಿನಲ್ಲಿ ಆ ಆಲೋಚನೆಯು ಎಷ್ಟೋ ಬಾರಿ ಬಂದಿತ್ತು. ಭಾಗ್ಯಳನ್ನು ಜೀವನದ ಸಂಗಾತಿಯಾಗಿ ಆರಿಸಿಕೊಳ್ಳುವ ವಿಷಯದಲ್ಲಿ ಅವನಿಗೆ ಯಾವ ಅಭ್ಯಂತರವೂ ಇರಲಿಲ್ಲ.

ಆದರೆ— — —

ಆದರೆ–ಅದರಲ್ಲಿ ಒಂದು ಆದರೆ ಇತ್ತು.

ರಾಜಣ್ಣನಿಗೆ ಎಷ್ಟೋ ಹೆಣ್ಣುಗಳು ಬಂದಿದ್ದವು. ಅವುಗಳಲ್ಲಿ ತನ್ನ

ತಂದೆಗೆ ಆಪ್ತರಾದವರೂ, ಬಂಧುಗಳೂ ಸಹ ಹಲವಾರು ಮಂದಿ ಇದ್ದರು. ಆಗೆಲ್ಲಾ ಅವನು ತನ್ನ ತಂದೆಗೆ ಒಂದೇ ಮಾತು ಹೇಳಿದ್ದ. ತನ್ನ ಓದು ಮುಗಿದು, ತಾನು ವೃತ್ತಿಯನ್ನು ಅವಲಂಬಿಸುವವರೆವಿಗೆ ಮದುವೆ ಮಾಡಿಕೊಳ್ಳುವುದಿಲ್ಲವೆಂದು ಹೇಳಿದ್ದ.

ಪರೀಕ್ಷೆಯಲ್ಲಿ ಪಾಸುಮಾಡಿ ವೃತ್ತಿಯನ್ನು ಮೊದಲು ಮಾಡಿಯೇ ಮದುವೆ ಮಾಡಿಕೊಳ್ಳುವಂತಹ ಸ್ಥಿತಿಯಲ್ಲಿ ಆವನಿರಲಿಲ್ಲ. ಅದನ್ನು ಅವನ ತಂದೆಯೂ ಹೇಳಿದ್ದರು. ಆದರೆ ರಾಜಣ್ಣ ಒಪ್ಪಿರಲಿಲ್ಲ.

ಪ್ರಸಂಗಾಂತರದಿಂದ ತನ್ನನ್ನು ಬಂದು ನೋಡಿದ ಅನಂತರ ತನಗೆ ಪರಮಾಪ್ತರಾದ ವೆಂಕಟೇಶಯ್ಯನವರು ತಮ್ಮ ಮಗಳ ವಿಷಯವಾಗಿ ಪ್ರಸ್ತಾಪ ಮಾಡಿದಾಗಲೂ ರಾಜಣ್ಣ ಅದೇ ಮಾತು ಹೇಳಿದ್ದ.

ಹಾಗಿರುವಾಗ ಈಗ ಇದ್ದಕ್ಕಿದ್ದಂತೆಯೇ ಭಾಗ್ಯಳನ್ನು ಮದುವೆಮಾಡಿಕೊಳ್ಳುತ್ತೇನೆ-ಎಂದು ಹೇಳುವುದು ಹೇಗೆ? ಹಾಗೆ ಹೇಳಿದರೆ ತನ್ನ ತಂದೆ ಏನೆಂದುಕೊಳ್ಳುತ್ತಾರೆ. ತಂದೆಯಷ್ಟೇ ಗೌರವದಿಂದ ತಾನು ನಡೆದುಕೊಳ್ಳುತ್ತಿರುವ ವೆಂಕಟೇಶಯ್ಯನವರು ಏನು ಭಾವಿಸುತ್ತಾರೆ!

ಅದು ಸರಿಯಲ್ಲ.

ಭಾಗ್ಯಳನ್ನು ನೋಡಿ ಅವನ ಮನಸ್ಸು ಒಪ್ಪಿಕೊಂಡಿದೆ. ಅವಳ ನಡೆ ನುಡಿಗಳನ್ನು ನೋಡಿ ಆಕರ್ಷಿತನಾಗಿದ್ದಾನೆ. ಈ ನಿಮಿಷ ಬೇಕಾದರೂ ಭಾಗ್ಯಳನ್ನು ಮದುವೆಯಾಗಲು ಅವನು ತಯಾರಾಗಿದ್ದಾನೆ.

ಆದರೆ-ಆ ಆದರೆಯು ಆತಂಕಗೊಳಿಸುತ್ತಿದೆ.

ತಾನು ಇದುವರೆವಿಗೂ ಯಾವ ತರಗತಿಯಲ್ಲಿ ಫೇಲ್ ಆಗಿಲ್ಲ ಬಿ.ಎ. ಕಡೆಯ ವರ್ಷವೂ ಅಷ್ಟೇ. ಫಸ್ಟ್ ಲಾನಲ್ಲಿಯೂ ಅಷ್ಟೇ. ಪ್ರತಿ ವರ್ಷವೂ ಪಾಸುಮಾಡುತ್ತಾ ಬಂದಿದ್ದ.

ಪಾಸು ಮಾಡುವುದೆಂದರೆ ರಾಜಣ್ಣನಿಗೆ ನೀರು ಕುಡಿದಂತೆ.

ಈ ವರ್ಷವೂ ಪಾಸಾಗುತ್ತದೆ. ಸಂದೇಹವಿಲ್ಲ. ಅನಂತರ ವೃತ್ತಿಯನ್ನು ಆರಂಭಮಾಡುವುದು. ಅದೊಂದು ಸಮಸ್ಯೆಯೇ ಆಗಿರಲಿಲ್ಲ. ತಂದೆಯ ಆಫೀಸಿನಲ್ಲಿಯೇ ಜ್ಯೂನಿಯರ್ ಆಗುವುದು. ಎಷ್ಟೆಂದರೂ ಒಂದು ವರ್ಷ.

ಇನ್ನೊಂದು ವರ್ಷ ಗುಂಡೂರಾಯರು ತಡೆಯುವ ಹಾಗಿದ್ದರೆ ಅವನು ಖಂಡಿತವಾಗಿ ಭಾಗ್ಯಳನ್ನು ಮದುವೆ ಮಾಡಿಕೊಳ್ಳಲು ತಯಾರಾಗಿದ್ದ.

ಆದರೆ ಅವರು ಅಷ್ಟರಲ್ಲಿಯೇ ಆಗಬೇಕೆಂದು ಅವಸರ ಪಡಿಸಿದರೆ ತನಗೆ ಎಂತಹ ಸಂದಿಗ್ಧತೆ. ಇವರ ಮನೆಯಲ್ಲಿ ಊಟ ಮಾಡಿಕೊಂಡಿದ್ದು ಮದುವೆ ಮಾಡಿಕೋ ಎಂದಾಗ ಇಲ್ಲವೆಂದು ಹೇಳುವುದು ಹೇಗೆ ?

ಹೇಳಬಹುದು. ಹೇಳುವವರೂ ಪ್ರಪಂಚದಲ್ಲಿರುತ್ತಾರೆ. ಅದು ಕೃತಘ್ನತೆ. ಆದರೆ ತಾನು ಕೃತಘ್ನನಾಗುವುದು ಸಾಧ್ಯವಿಲ್ಲ.

ಭಾಗ್ಯಳನ್ನು ತನಗೆ ಕೊಡಬೇಕೆಂದು ಅವರು ಮನಸ್ಸಿನಲ್ಲಿಟ್ಟುಕೊಂಡು ತನ್ನನ್ನು ಆದರಿಸುತ್ತಿದ್ದರೆ ತಾನು ಅವರಿಗೆ ನಿರಾಸೆಯನ್ನುಂಟುಮಾಡಬಾರದು. ಹೇಗಾದರೂ ಈ ಮನೆಯನ್ನು ಬಿಟ್ಟು ಹೊರಟು ಹೋಗಬೇಕು.

ಆದರೆ ಅವರ ಮನಸ್ಸಿನಲ್ಲಿರುವುದನ್ನು ತಿಳಿದುಕೊಳ್ಳುವುದು ಹೇಗೆ ? ನಿಮ್ಮ ಹುಡುಗಿಯನ್ನು ನನಗೆ ಕೊಡಬೇಕೆಂದು ಮನಸ್ಸಿನಲ್ಲಿ ಆಸೆಯನ್ನು ಇಟ್ಟುಕೊಂಡಿದ್ದೀರಾ–ಎಂದು ಗುಂಡೂರಾಯರನ್ನಾಗಲೀ ವಿಶಾಲಾಕ್ಷಮ್ಮನವರನ್ನಾಗಲೀ ಕೇಳುವುದು ಹೇಗೆ ?

ಒಂದು ಭಾನುವಾರ ಮಾಗಡಿಗೆ ಹೋಗಿ ಬಂದು ಬಿಟ್ಟರೂ ಸರಿಯೇ. ವೆಂಕಟೇಶಯ್ಯನವರನ್ನು ಕೇಳಿ ಬಿಡೋಣ ಎಂಬ ಆಲೋಚನೆಯು ಬಂದಿತು.

ಮರುಕ್ಷಣದಲ್ಲಿಯೇ ತೋರಿತು. ಅದು ಸರಿಯಲ್ಲ. ತಾನು ಭಾಗ್ಯಳನ್ನು ಮೋಹಿಸಿರುವುದಾಗಿ ಅವರು ಅರ್ಥ ಮಾಡಿಕೊಳ್ಳುತ್ತಾರೆ. ಪರ್ಯಾಯಾಂತರದಿಂದ ಅವಳನ್ನು ಕೊಟ್ಟು ತನಗೆ ಮಾಡಿಸಿ–ಎಂಬುದಾಗಿ ಕೇಳುತ್ತಿದ್ದಾನೆಂದು ಕೊಳ್ಳುತ್ತಾರೆ.

ಅದರಿಂದ ಅವರನ್ನು ಕೇಳಬಾರದು.

ಹಾಗೆಯೇ ರಾಜಣ್ಣ ತೊಳಲುತ್ತಿದ್ದ.

ಭಾಗ್ಯಳನ್ನು ಸೂಕ್ಷ್ಮವಾಗಿ ಮಾತನಾಡಿಸಿ ನೋಡಬೇಕೆಂದೂ ಸಮಸ್ಯಾಮಯವಾಗಿದ್ದ ರಾಜಣ್ಣನ ಮನಸ್ಸಿನಲ್ಲಿ ಒಂದೇಡು ಬಾರಿ ಆಲೋಚನೆಯು ಬಂದಿತ್ತು.

ಭಾಗ್ಯಳೂ ರಾಜಣ್ಣನೂ ದಿನವೂ ಪ್ರಾತಃಕಾಲ ಒಟ್ಟಿಗೇ ಊಟ ಮಾಡುತ್ತಿದ್ದರಷ್ಟೇ. ಮಾತನಾಡಿಕೊಂಡು ಮಾಡದಿದ್ದರೂ ಇಬ್ಬರೂ ಮನೆ

ಯನ್ನು ಬಿಟ್ಟು ಹೊರಡುವುದು ಒಂದೇ ಹೊತ್ತಾಗುತಿತ್ತು. ಎರಡು ಹೆಜ್ಜೆ ಮುಂದೆಯೋ ಎರಡು ಹೆಜ್ಜೆ ಹಿಂದೆಯೋ ಇಬ್ಬರೂ ಒಟ್ಟಿಗೇ ಬಸ್ ಸ್ಟಾಪಿಗೆ ಬರುತ್ತಿದ್ದರು. ದಾರಿಯಲ್ಲಿ ಭಾಗ್ಯಳಿಗೆ ಗೆಳತಿಯರು ಯಾರಾದರೂ ಸಿಕ್ಕಿದರೆ ರಾಜಣ್ಣ ಬೇರೆಯಾಗಿ ಹೊರಟು ಹೋಗುತ್ತಿದ್ದ.

ಇಬ್ಬರೂ ಹೋಗುತ್ತಿದ್ದುದೂ ಹನ್ನೊಂದನೇ ನಂಬರು ಬಸ್‌ನಲ್ಲಿ. ಸ್ಕೂಲು, ಕಾಲೇಜು ಆಫೀಸುಗಳಿಗೆ ಜನಗಳು ಹೋಗುತ್ತಿದ್ದ ಆ ಹೊತ್ತಿನಲ್ಲಿ. ಬಸ್ ಸ್ಟಾಪ್‌ನಲ್ಲಿ ಸಂದಣಿ ಹೆಚ್ಚಾಗಿರುತಿತ್ತು. ಒಟ್ಟಿಗೆ ಹೋಗುತ್ತಿದ್ದುದರಿಂದ ಇಬ್ಬರಿಗೂ ಒಂದೇ ಬಸ್‌ನಲ್ಲಿ ಸೀಟುಗಳು ದೊರಕುತ್ತಿದ್ದವು. ಒಂದೊಂದು ವೇಳೆ ಹಾಗೆ ಸಿಕ್ಕದೇ ಹೋಗುತ್ತಿದ್ದುದೂ ಉಂಟು. ಆಗ ಬೇರೆಬೇರೆ ಬಸ್ಸುಗಳಲ್ಲಿ ಹೋಗಬೇಕಾಗಿ ಬರುತಿತ್ತು.

ಅವರುಗಳು ವಾಪ್ಸು ಬರುತ್ತಿದ್ದುದೂ ಹನ್ನೊಂದನೇ ನಂಬರು ಬಸ್‌ನಲ್ಲಿಯೇ. ಆದರೆ ಭಾಗ್ಯಳ ಕಾಲೇಜು ಬಿಡುತ್ತಿದ್ದುದು ಒಂದು ಹೊತ್ತಿನಲ್ಲಿ, ರಾಜಣ್ಣನ ಕಾಲೇಜು ಬಿಡುತ್ತಿದ್ದುದು ಒಂದು ಹೊತ್ತಿನಲ್ಲಿ. ಅದರಿಂದ ಒಬ್ಬೊಬ್ಬರು ಒಂದೊಂದು ಬಸ್‌ನಲ್ಲಿ ವಾಪ್ಸು ಬರಬೇಕಾಗಿ ಬರುತಿತ್ತು.

ತನ್ನ ಮನಸ್ಸಿಗೆ ಸಮಸ್ಯೆ ಬಂದನಂತರ ಭಾಗ್ಯಳೊಡನೆ ಮಾತನಾಡುವ ಸಂದರ್ಭವು ಸಿಕ್ಕುತ್ತದೆಯೋ ಎಂದು ರಾಜಣ್ಣ ಕಾಯತೊಡಗಿದ. ಮನೆಯಲ್ಲಿ ಪ್ರಸ್ತಾಪಾಂತರದಿಂದಲಾದರೂ ಈ ವಿಷಯವನ್ನು ಎತ್ತುವುದು ಅಸಂಭವವಾಗಿತ್ತು. ಹೊರಗಡೆಯೇ ಮಾತನಾಡಬೇಕಾಗಿತ್ತು.

ಹೊರಗಡೆಯೂ ಮಾತನಾಡುವುದು ಕಷ್ಟವಾಗಿತ್ತು. ಅವರುಗಳು ಪರಸ್ಪರ ನೋಡುವುದು ಸಾಧ್ಯವಾಗುತ್ತಿದ್ದುದೇ ಕಾಲೇಜುಗಳಿಗೆ ಹೋಗುವಾಗ. ಇಬ್ಬರೂ ಒಟ್ಟಿಗೆ ಹೋದರೂ ಮಾತನಾಡುವುದು ಸಾಧ್ಯವಾಗುತ್ತಿರಲಿಲ್ಲ. ಗುಂಡೂರಾಯರ ಮನೆಯಿದ್ದುದು ಗಾಂಧೀಬಜಾರಿನ ಪಕ್ಕದ ರಸ್ತೆಯಲ್ಲಿ. ಮನೆ ಬಸ್ ಸ್ಟಾಪ್‌ಗೆ ಬಹಳ ಹತ್ತಿರದಲ್ಲಿದ್ದಿತು. ಅಲ್ಲಿಗೆ ಕೇವಲ ಐದು ನಿಮಿಷಗಳ ನಡಿಗೆ. ಅಷ್ಟರಲ್ಲಿ ಮಾತನಾಡಿ ಮುಗಿಸುವುದಕ್ಕಾಗುವುದಿಲ್ಲ. ಅಲ್ಲಿಯಾದರೂ ಮಾತನಾಡುವುದಕ್ಕಾಗುವುದೇ ಎಂದರೆ ಇಲ್ಲ. ಬೇಕಾದಷ್ಟು ಜನ ಕ್ಯೂ ನಿಂತಿರುತ್ತಾರೆ.

ಸಾಯಂಕಾಲದ ಹೊತ್ತಂತೂ ರಾಜಣ್ಣ ಭಾಗ್ಯಳನ್ನು ನೋಡುವುದಕ್ಕಾಗುತ್ತಿದ್ದುದು ಮನೆಯಲ್ಲಿಯೇ.

ವೆಂಕಟೇಶಯ್ಯನವರ ಪತ್ರವನ್ನು ಓದಿದನಂತರ ರಾಜಣ್ಣನ ಸಮಸ್ಯೆ ತೀವ್ರತರವಾಗ ತೊಡಗಿತು. ಅದಾದನಂತರ ಭಾಗ್ಯಳನ್ನು ಪ್ರತ್ಯೇಕವಾಗಿ ಕಂಡು ಮಾತನಾಡುವುದಕ್ಕೆ ಆಗುತ್ತದೆಯೋ–ಎಂದು ಹೊಂಚುಕಾದ. ಅಂತಹ ಅವಕಾಶವು ಸಿಗಲಿಲ್ಲ.

ಇದಾದನಂತರ ಸುಮಾರು ನಾಲ್ಕೈದು ದಿನಗಳನಂತರ ಒಂದು ಸಂಜೆ ಲಾ ಕಾಲೇಜಿನಿಂದ ಹೊರಗೆ ಬಂದ ರಾಜಣ್ಣ ಅಲ್ಲಿಯೇ ಸಮೀಪದಲ್ಲಿರುವ ಬಸ್ ಸ್ಟಾಪ್‌ನಲ್ಲಿ ಕಾಯುತ್ತಾ ನಿಂತುಕೊಂಡ. ಎಷ್ಟು ಹೊತ್ತಾದರೂ ಹನ್ನೊಂದನೆಯ ನಂಬರು ಬಸ್ಸಾಗಲೀ, ಹನ್ನೆರಡನೆಯ ನಂಬರು ಬಸ್ಸಾಗಲೀ ಬರಲಿಲ್ಲ. ಅನಂತರ ಬಂತು. ಬಂದ ಬಸ್ಸಿನಲ್ಲಿ ಸೀಟುಗಳಿರಲಿಲ್ಲವೆಂದು ಕಂಡುಬರುತ್ತದೆ. ಕಂಡಕ್ಟರು ಬಸ್ಸು ನಿಲ್ಲಿಸದೆಯೇ ಮುಂದೆ ಹೊರಟು ಹೋದ.

ಮುಂದಿನ ಬಸ್ಸಿಗೆ ಕಾಯಬೇಕು. ಅದರಲ್ಲಿಯೂ ಸೀಟಿಲ್ಲದೇ ಹೋದರೆ? ಅದರ ಮುಂದಿನ ಬಸ್ಸಿಗೆ ಕಾಯಬೇಕು. ಮಾಡುವುದಕ್ಕಾಗುತ್ತಿದ್ದುದೂ ಅಷ್ಟೇ. ದಿನವೂ ಮಾಡುತ್ತಿದ್ದುದೂ ಅಷ್ಟೇ.

ಆದರೆ ಆ ದಿನ ರಾಜಣ್ಣನಿಗೆ ಏನು ತೋಚಿತೋ ಏನೋ ? ನಡೆದುಕೊಂಡು ಮುಂದೆ ಹೋದ. ಮುಂದೆ ಜೈಲಿನ ಪಕ್ಕದಲ್ಲಿ ಮಹಾರಾಣೀ ಕಾಲೇಜಿನ ಬಸ್ ಸ್ಟಾಪ್‌ವರೆವಿಗೂ ನಡೆದುಕೊಂಡು ಹೋದ. ಅಲ್ಲಿಯೂ ಜನಸಂದಣಿಯಿತ್ತು.

ಹತ್ತು ಹದಿನೈದು ಮಂದಿ ಕಾಲೇಜು ಹುಡುಗಿಯರು ನಿಂತಿದ್ದರು. ಅವರೊಂದಿಗೆ ಭಾಗ್ಯಳೂ ನಿಂತುಕೊಂಡಿದ್ದಳು.

ಹತ್ತಿರಕ್ಕೆ ಬಂದ ರಾಜಣ್ಣ ಪರಿಚಯವಿಲ್ಲದಿದ್ದರೆ ಹೇಗಿರಬೇಕೋ ಹಾಗಿರಲು ಭಾಗ್ಯ ಪ್ರಯತ್ನ ಮಾಡಿದಳು. ರಾಜಣ್ಣನ ಸ್ಥಿತಿಯು ಬೇರೇ. ಗುರುತಿಸದಂತೆ ಇದ್ದುಬಿಟ್ಟನೆಂದು ಅವಳು ಅಂದುಕೊಳ್ಳಬಾರದು ಅವಳ ಗೆಳತಿಯರ ಎದುರಿಗೆ ತಾನು ಅವಳಿಗೆ ಪರಿಚಯಸ್ಥನೆಂದು ತೋರಿಸಿಕೊಳ್ಳಬಾರದು. ಹಾಗೊಮ್ಮೆ ಅವಳ ಕಡೆಗೆ ನೋಡಿ ಸ್ವಲ್ಪ ದೂರದಲ್ಲಿ ನಿಂತುಕೊಂಡ.

ಭಾಗ್ಯಳೇನೋ ತನಗವನು ಪರಿಚಯವಿಲ್ಲದಂತೆಯೇ ತೋರಿಸಿಕೊಳ

ಬೇಕೆಂದು ಪ್ರಯತ್ನ ಮಾಡಿದಳು. ಆದರೆ ರಾಜಣ್ಣ ತನ್ನ ಕಡೆಗೆ ಆದರ ದಿಂದ ನೋಡಿದಾಗ ಆ ಪ್ರಯತ್ನವು ಮೀರಿ ಅವಳ ಮುಖದಲ್ಲಿ ಸ್ವಾಗತದ ನಗುವು ಕಾಣಿಸಿಕೊಂಡಿತು.

ತನ್ನ ಮುಖದಲ್ಲಿ ಕಂಡ ಹಾರ್ದಿಕವಾದ ನಗುವನ್ನು ಗೆಳತಿಯರು ಗುರುತಿಸಿದರೆಂದು ಮರುಕ್ಷಣದಲ್ಲಿಯೇ ಭಾಗ್ಯಳಿಗೆ ಗೋಚರವಾಯಿತು. ಆಗೆಂದುಕೊಂಡಳು ತಾನು ಅವನನ್ನು ನೋಡಿದುದು ಸರಿಯಾಗಲಿಲ್ಲ ವೆಂದು. ಆದರೆ ಆ ನಗುವು ಅವಳ ಅಧೀನವಾಗಿರಲಿಲ್ಲ. ಪ್ರಯತ್ನವನ್ನು ಮೀರಿ ಹೊರಬಂದಿದ್ದಿತು.

ಗೆಳತಿಯರು ಅನ್ಯಥಾ ಭಾವನೆ ಮಾಡದಿರಲೆಂದು ವಿವರವನ್ನು ಕೊ ಡುವ ಉದ್ದೇಶ್ಯದಿಂದ "ಅವರು ನನ್ನ ಸೋದರ ಮಾವ'' ಎಂದು ಹೇಳಿದಳು.

ಸೋದರ ಮಾವನೆಂದು ಹೇಳಿದ ಮೇಲೆ ನಿಂತಲ್ಲಿಯೇ ನಿಂತು ಅವ ನನ್ನು ಉಪೇಕ್ಷೆಮಾಡುವುದು ಸೂಕ್ತವಾಗಿ ಕಂಡುಬರಲಿಲ್ಲ. ಅದರಿಂದ ಪುನಃ ಮುಖದಲ್ಲಿ ನಗುವನ್ನು ತಂದುಕೊಂಡು ಹತ್ತಿರಕ್ಕೆ ಹೋಗಿ ಮಾತ ನಾಡಿಸಿದಳು.

ಆಗ ಮತ್ತೊಂದು ಬಸ್ಸು ಬಂದಿತು. ಅದೂ ಜನಗಳನ್ನು ತುಂಬಿ ಕೊಂಡು ಬಂದು ನಿಲ್ಲದೇ ಸಾಗಿಹೋಯಿತು.

ಭಾಗ್ಯಳು ''ಈ ಹಾಳು ಬಸ್ಸುಗಳಿಗೆ ಕಾಯುವುದಕ್ಕಿಂತಲೂ ನಡೆದು ಕೊಂಡೇ ಹೋಗುವುದು ಸುಖ" ಎಂದಳು.

ರಾಜಣ್ಣನೂ ಏನಾದರೂ ಮಾತನಾಡಬೇಕಲ್ಲ.

ಅವನು ನಗುತ್ತಾ "ಹಾಗಾದರೆ ನಡೆದುಕೊಂಡು ಹೋಗದೇ ಕಾಯು ತ್ತಾ ನಿಂತಿದ್ದಿರೇಕೆ ?" ಎಂದ.

ತನ್ನ ಗೆಳತಿಯರ ಕಡೆಗೆ ತಿರುಗಿ ನೋಡಿ ''ಇವರುಗಳು ರಾತ್ರಿ ಎಂಟು ಗಂಟೆಯಾದರೂ ಬಸ್ಸಿಗಾಗಿಯೇ ಕಾಯುತ್ತಾ ನಿಂತಿರುತ್ತಾರೆ. ನಡೆದು ಕೊಂಡು ಹೋಗಲು ಯಾರೂ ಸಿದ್ಧರಾಗಿಲ್ಲ. ಒಬ್ಬಳೇ ನಡೆದು ಹೋಗಲು ಬೇಜಾರಾಗುತ್ತದೆಯಲ್ಲಾ ಎಂದು ನಿಂತುಕೊಂಡಿದ್ದೇನೆ'' ಎಂದಳು ಭಾಗ್ಯ.

"ನಿಜ. ನೀವು ಹೇಳುವುದು ಸರಿ. ನಮ್ಮ ಕಾಲೇಜಿನ ಹತ್ತಿರ ಬಸ್

ಸ್ಟಾಪಿನಲ್ಲಿ ಬಹಳ ಹೊತ್ತು ಕಾಯುತ್ತಾ ನಿಂತಿದ್ದೆ. ಅನಂತರ ಬಂದ ಬಸ್ಸು ನಿಲ್ಲಲೇ ಇಲ್ಲ. ಮುಂದೆ ಹೊರಟು ಹೋಯಿತು. ನಡೆದುಕೊಂಡೇ ಹೋಗೋಣವೆಂದು ತೋರಿದರೂ ಒಬ್ಬನೇ ನಡೆದು ಹೋಗಬೇಕಲ್ಲ ಎಂದು ಹೋಗಲಿಲ್ಲ. ಅತ್ತ ಕಡೆ ನಡೆದುಕೊಂಡು ಹೋಗುವುದಕ್ಕೂ ಇಷ್ಟವಿಲ್ಲ. ಇತ್ತ ಕಡೆ ಬಸ್ಸಿಗೆ ಕಾಯುವುದಕ್ಕೂ ಇಷ್ಟವಿಲ್ಲ. ಹಾಗಾಗಿ ಹೀಗೆಯೇ ಬಸ್ ರೂಟಿನಲ್ಲಿ ನಡೆದುಕೊಂಡು ಹೋಗೋಣ. ಬಸ್ ಸಿಕ್ಕಿದರೆ ಹತ್ತಿಕೊಳ್ಳುವುದು. ಇಲ್ಲದಿದ್ದರೆ ನಡೆದುಕೊಂಡೇ ಹೋಗುವುದು ಎಂದುಕೊಂಡು ಬಂದೆ. ಅಷ್ಟರಲ್ಲಿ ನೀವು ಕಣ್ಣಿಗೆ ಬಿದ್ದಿರಿ. ನೋಡಿ ನಿಂತುಕೊಂಡೆ''

"ಸರಿ, ಸರಿ. ನಾನೂ ಅದೇ ಯೋಚಿಸುತ್ತಿದ್ದೆ. ನೀವು ಎಂದೂ ಈ ಬಸ್ ಸ್ಟಾಪ್‌ಗೆ ಬರುತ್ತಿರಲಿಲ್ಲ. ನಾನು ಬಸ್ಸು ಹತ್ತಿದಾಗ ಒಂದು ದಿನ ಮಾತ್ರ ನೀವು ಬಸ್‌ನಲ್ಲಿ ಕುಳಿತುಕೊಂಡಿದ್ದಿರಿ"

ರಾಜಣ್ಣನೊಂದಿಗೆ ಮಾತನಾಡಿದುದಾಯಿತಲ್ಲ. ಪುನಃ ಹೋಗಿ ಭಾಗ್ಯ ತನ್ನ ಗೆಳತಿಯರೊಂದಿಗೆ ನಿಂತುಕೊಂಡಳು.

ಅನಂತರ ಸ್ವಲ್ಪ ಹೊತ್ತು ಯಥಾಪ್ರಕಾರವಾಗಿ ಮಾತನಾಡುತ್ತಾ ನಿಂತಿದ್ದರು.

ಕಾಯುತ್ತಾ ನಿಂತಿದ್ದ ವಿದ್ಯಾರ್ಥಿನಿಯರೆಲ್ಲರೂ ಭಾಗ್ಯಳಿಗೆ ಪರಿಚಯಸ್ಥರಾಗಿದ್ದರೂ ಆವಳ ಆತ್ಮೀಯಳಾಗಿದ್ದವಳು ಮೈಥಿಲಿ. ಅವಳೊಂದಿಗೆ ಭಾಗ್ಯ ಮಾತನಾಡುತ್ತಾ ನಿಂತಿದ್ದಳು.

ಸ್ವಲ್ಪ ಹೊತ್ತಿನಲ್ಲಿಯೇ ಮೈಥಿಲಿಯ ಅಣ್ಣನು ಕಾರಿನಲ್ಲಿ ಅತ್ತ ಕಡೆ ಬಂದ. ತಂಗಿಯು ಕಾಯುತ್ತಿದ್ದುದನ್ನು ನೋಡಿ ಆವಳನ್ನು ಬರುವಂತೆ ಕರೆದ. ಮೈಥಿಲಿಯು ಭಾಗ್ಯಳನ್ನೂ ಜೊತೆಯಲ್ಲಿ ಬರುವಂತೆ ಕರೆದಳು.

ರಾಜಣ್ಣ ಅಲ್ಲಿಲ್ಲದೇ ಇದ್ದಿದ್ದರೆ ಭಾಗ್ಯ ಮೈಥಿಲಿಯ ಜೊತೆಯಲ್ಲಿ ಹೊರಟು ಹೋಗುತ್ತಾ ಇದ್ದಳೇನೋ ? ಅವನನ್ನು ಕರೆದುಕೊಂಡು ಬರುತ್ತೇನೆ-ಎನ್ನುವುದು ಚೆನ್ನಾಗಿರುವುದಿಲ್ಲ ಬಿಟ್ಟು ಹೋಗುವುದು ಸೌಜನ್ಯವಲ್ಲ.

"ನೀನು ಹೋಗು, ಮೈಥಿಲಿ. ನಾನು ನಮ್ಮ ಮಾವನೊಡನೆ ಬರುತ್ತೇನೆ"

''ಅವರನ್ನೂ ಕರೆದುಕೊಂಡು ಬಾ''

"ಇಲ್ಲಮ್ಮಾ. ನೀನು ಹೋಗು"

ಮೈಥಿಲಿಯ ಅಣ್ಣ ಎಲ್ಲಿಗೋ ಹೋಗುತ್ತಿದ್ದ. ಅವನು ಮನೆಯಿಂದ ಬಂದು ಎಲ್ಲಿಗೋ ಹೋಗುತ್ತಿದ್ದ. ತಂಗಿಯು ಬಸ್‌ಗಾಗಿ ಕಾಯುತ್ತಾ ನಿಂತಿದ್ದುದನ್ನು ನೋಡಿ ಅವಳನ್ನು ಮನೆಯಲ್ಲಿ ಬಿಟ್ಟು ಪುನಃ ಅವನು ಹೋಗಬೇಕಾಗಿತ್ತು. ಅದರಿಂದ ಭಾಗ್ಯಳು ಎರಡನೆಯ ಬಾರಿಯೂ ಇಲ್ಲವೆನ್ನುತ್ತಲೇ ಅವನು ಹೊರಟು ಹೋದ.

ತನ್ನ ಮಾವನೊಂದಿಗೆ ಹೊರಡುತ್ತೇನೆಂದು ಮೈಥಿಲಿಯೊಂದಿಗೆ ಹೇಳಿದ ನಂತರ ಇತರ ಸಹಪಾಠಿಗಳೊಡನೆ ನಿಂತಿರುವುದು ಭಾಗ್ಯಳಿಗೆ ಸರಿಯಾಗಿ ತೋರಲಿಲ್ಲ.

ಅವಳು ರಾಜಣ್ಣನ ಬಳಿಗೆ ಬಂದು "ಬಸ್‌ಗಾಗಿ ಕಾಯುತ್ತಾ ಇರೋಣವೋ ? ನಡೆದು ಹೋಗೋಣವೋ ?" ಎಂದಳು.

"ನೀವು ಹೇಗೆ ಹೇಳಿದರೆ ಹಾಗೆ"

ಭಾಗ್ಯಳಿಗೆ ಅಲ್ಲಿಂದ ಹೊರಡುವ ಮನಸ್ಸಿತ್ತೆಂದು ಕಂಡುಬರುತ್ತದೆ.

ಆ ಸೂಕ್ಷ್ಮ ರಾಜಣ್ಣನಿಗೂ ಗೊತ್ತಾಯಿತು.

ಆದರೆ ಅಷ್ಟರಲ್ಲಿ ಬಲಗಡೆಯಿಂದ ಮತ್ತೊಂದು ಬಸ್ ಬರುವುದು ಕಂಡಿತು.

"ಅದರಲ್ಲಿ ಸೀಟಿದೆಯೋ ನೋಡೋಣ ?''

ಆ ಬಸ್ ಬಂದಿತು. ಅದು ಅಲ್ಲಿ ನಿಂತುಕೊಂಡಿತು. ಒಂದಿಬ್ಬರು ಗಂಡಸರು ಇಳಿದರು. ಇಬ್ಬರಿಗೇ ಸೀಟಿತ್ತು.

ಇವರಿಗಿಂತಲೂ ಮೊದಲು ವಿದ್ಯಾರ್ಥಿನಿಯರು ಮುಂದುಗಡೆಯಿಂದ ಹತ್ತುವುದಕ್ಕೆ ಹೋದರು.

ಕಂಡಕ್ಟರು "ಲೇಡೀಸ್ ಸೀಟುಗಳಿಲ್ಲ" ಎಂದ.

ಈಗಂತೂ ಭಾಗ್ಯಳಿಗೆ ಬಹಳ ಬೇಜಾರಾಯಿತು.

"ಬನ್ನಿ. ನಡೆದುಕೊಂಡೇ ಹೋಗೋಣ. ನೀವು ಹೇಳಿದಂತೆ ದಾರಿಯಲ್ಲಿ ಬಸ್ ಸಿಕ್ಕಿದರಾಯಿತು. ಒಂದು ವೇಳೆ ನಡೆದುಕೊಂಡೇ ಹೋದರೆ ಕಾಲೇನು ಸವೆದು ಹೋಗುವುದಿಲ್ಲವಲ್ಲ"

ಇಬ್ಬರೂ ನಡೆದುಕೊಂಡು ಹೊರಟರು.

ಆ ರಸ್ತೆಯನ್ನು ದಾಟಿ ಅತ್ತಕಡೆಯ ಫುಟ್‌ಪಾತಿನ ಮೇಲೆ ನಡೆದುಕೊಂಡು ಹೋಗುತ್ತಾ ಭಾಗ್ಯ ಅಂದಳು.

"ಸಾವನದುರ್ಗದ ಬಳಿ ಕಾಡಿನಲ್ಲಿ ನಡೆದುಕೊಂಡು ಹೋಗಿ ಬಂದುದಕ್ಕಿಂತ ಈ ಹಾದಿ ಕಷ್ಟವೇನಲ್ಲವಲ್ಲ''

ಆ ಸಮಯದಲ್ಲಿ ಭಾಗ್ಯ ಮಾತನಾಡುತ್ತಾಳೆಂದು ರಾಜಣ್ಣ ನಿರೀಕ್ಷೆ ಮಾಡಿರಲಿಲ್ಲ. ಅದೂ ಅಲ್ಲದೇ ಅವನ ಮನಸ್ಸು ಅನ್ಯಾಸಕ್ತವಾಗಿದ್ದಿತು. ಆದರಿಂದ ಕೂಡಲೇ ಎಚ್ಚತ್ತವನಂತೆ ಕೇಳಿದ.

"ಏನೆಂದಿರಿ ?"

ಭಾಗ್ಯ ತಾನು ಮೊದಲು ಹೇಳಿದ ಮಾತನ್ನೇ ಪುನಃ ಹೇಳಿದಳು.

ಅದನ್ನು ಹೇಳಿದನಂತರ ''ನೀವು ಏನೋ ಯೋಚನೆ ಮಾಡುತ್ತಿದ್ದೀರೆಂದು ತೋರುತ್ತದೆ. ಅದರಿಂದಲೇ ನಾನು ಹೇಳಿದ್ದು ನಿಮಗೆ ಕೇಳಿಬರಲಿಲ್ಲ" ಎಂದಳು.

''ಯೋಚನೆ. ಯೋಚನೆಯೇನೂ ಇಲ್ಲ. ನೀವು ಬಹಳ ದೂರ ನಡೆಯಬೇಕಾಗುತ್ತದಲ್ಲ ಎಂದು ಯೋಚಿಸುತ್ತಿದ್ದೆ''

ಅದಕ್ಕೆ ಹೇಳಬೇಕಾದ ಮಾತನ್ನು ಮೊದಲೇ ಹೇಳಿದ್ದಳು. ತಾನು ಆ ಮಾತು ಹೇಳಿದ ಮೇಲೂ ಇವನು ಈ ರೀತಿಯಾಗಿ ಯಾಕೆ ಹೇಳಿದ ? ಅಂದರೆ ಇವನ ಮನಸ್ಸಿಗೆ ಬಂದ ಆಲೋಚನೆ ಅದಲ್ಲ. ತಾನು ಹೇಳಿದ್ದರಿಂದ ತಬ್ಬಿಬ್ಬಾಗಿ ಏನೋ ಮಾತನಾಡಿದ್ದಾನೆ.

ಟೆಕ್ನಲಾಜಿಕಲ್ ಇನ್ಸ್ಟಿಟ್ಯೂಟ್‌ನ ಚೌಕದವರೆವಿಗೆ ಇಬ್ಬರೂ ಹೋದರು.

ಅಲ್ಲಿ ತಿರುಗಿಕೊಳ್ಳುತ್ತಿದ್ದಾಗ ರಾಜಣ್ಣನು "ನಿಮಗೆ ಆಕ್ಷೇಪಣೆಯಿಲ್ಲದಿದ್ದರೆ ಇಲ್ಲಿ ಎಲ್ಲಿಯಾದರೂ ಅರ್ಧ ಕಪ್ಪು ಕಾಫೀ ತೆಗೆದುಕೊಂಡು ಹೋಗೋಣ'' ಎಂದ.

ಭಾಗ್ಯಳಿಗೆ ಆಕ್ಷೇಪಣೆಯೇನೂ ಇರಲಿಲ್ಲ. ಒಪ್ಪಿಕೊಂಡಳು.

ಕಬ್ಬನ್‌ಪಾರ್ಕ್ ರೆಸ್ಟೂರೆಂಟಿಗೆ ಹೋಗಿ ತಿಂಡೀ ತೆಗೆದುಕೊಂಡು ಕಾಫೀ ಕುಡಿದರು. ಭಾಗ್ಯಳು ಬಿಲ್‌ಗಾಗಿ ಕೈ ಚಾಚುತ್ತಿದ್ದಂತೆಯೇ ಮಾಣಿಯ ಕೈಗೆ ರಾಜಣ್ಣ ನೋಟು ಕೊಟ್ಟ.

ಅವನು ಚಿಲ್ಲರೆ ತಂದು ಕೊಟ್ಟನಂತರ ಇಬ್ಬರೂ ಹೊರಗೆ ಬಂದರು.

ಪಬ್ಲಿಕ್ ಲೈಬ್ರರಿಯ ಕಡೆಗೆ ಹೋಗುತ್ತಾ ಭಾಗ್ಯಳು "ಬಿಲ್‌ಕೊಡುವ ವಿಷಯದಲ್ಲಿ ನೀವು ಹಟ ಮಾಡುತ್ತೀರೆಂಬುದು ನನಗೆ ತಿಳಿದಿದ್ದರೆ ನಾನು ನಿಮ್ಮ ಜೊತೆಯಲ್ಲಿ ಕಾಫಿಗೆ ಬರುತ್ತಿರಲಿಲ್ಲ" ಎಂದಳು.

"ಅದರಲ್ಲಿ ಹಟವೇನೂ ಇಲ್ಲ. ನೀವು ನನಗೆ ಎಷ್ಟೋ ಬಾರಿ ಕಾಫೀ ತಿಂಡೀ ಕೊಟ್ಟಿದ್ದೀರಿ. ಈಗಲೂ ನಿಮ್ಮಿಂದಲೇ ಬಿಲ್ ಕೊಡಿಸಿಬಿಟ್ಟರೆ ನಾನು ನಿಮಗೆ ಕಾಫೀತಿಂಡಿ ಕೊಡುವ ಸದವಕಾಶವನ್ನು ಕಳೆದುಕೊಂಡಂತೆ ಆಗುವುದಲ್ಲ-ಎಂದು ನಾನೇ ಕೊಟ್ಟೆ''

ರಾಜಣ್ಣ ಹೇಳಿದ ಮಾತು ದೀನತೆಯಿಂದ ಕೂಡಿತ್ತು. ಅದಕ್ಕೆ ಭಾಗ್ಯ ನಕ್ಕಳು. ಆ ನಗುವು ಸಮಾಧಾನ ಗೊಂಡಿದ್ದಂತೆ ಕಂಡಿತು. ಅದನ್ನು ನೋಡಿದ ಅವನು ತೃಪ್ತನಾದ.

ಪಬ್ಲಿಕ್ ಲೈಬ್ರರಿಯ ಮುಂದೆ ಕಾರ್ಪೊರೇಷನ್ ಆಫೀಸ್‌ನ ಕಡೆಗೆ ಹೋಗಲು ವಿಶಾಲವಾದ ರಸ್ತೆಯಿದೆ. ಅದರ ಪಕ್ಕಗಳಲ್ಲಿ ಅಗಲವಾದ ಫುಟ್‌ಪಾತುಗಳಿವೆ. ಎರಡು ಕಡೆಯೂ ಇರುವ ಹುಲ್ಲುಗಾವಲುಗಳ ಮೇಲಿನಿಂದ ತಣ್ಣನೆಯ ಗಾಳಿಯು ಬೀಸುತ್ತದೆ.

ಅಂತಹ ಒಂದು ಫುಟ್‌ಪಾತಿನಲ್ಲಿ ನಡೆದುಕೊಂಡು ಬರುತ್ತಾ ರಾಜಣ್ಣ ಕೇಳಿದ.

"ಭಾಗ್ಯ. ನೀವು ಅನ್ಯಥಾ ಭಾವನೆ ಮಾಡದಿದ್ದರೆ ಒಂದು ಮಾತು ಕೇಳಬೇಕೆಂದಿದೆ"

ಭಾಗ್ಯಳು ನಕ್ಕು ಬಿಟ್ಟಳು.

"ಯಾಕೆ ನಗುತ್ತೀರಿ ?"

"ಪಾಶ್ಚಾತ್ಯರಲ್ಲಿ ಗಂಡಸರ ಸಂಪಾದನೆಯನ್ನೂ ಹೆಂಗಸರ ವಯಸ್ಸನ್ನೂ ಕೇಳುವುದು ಮಾತ್ರ ಸಂಪ್ರದಾಯವಿಲ್ಲವಂತೆ. ನಮ್ಮಲ್ಲಿ ಅಂತಹದೇನೂ ಇಲ್ಲ. ಯಾವ ಪ್ರಶ್ನೆಯನ್ನು ಬೇಕಾದರೂ ಕೇಳಬಹುದು. ಹಾಗಿರುವಾಗ ನೀವು ಏನೋ ಕೇಳಿದರೆ ನಾನೇಕೆ ತಪ್ಪು ತಿಳಿದುಕೊಳ್ಳಬೇಕು. ನೀವು ನನ್ನ ವಯಸ್ಸು ಕೇಳುವುದಿಲ್ಲ. ಅದು ನಿಮಗೇ ತಿಳಿದಿರಬಹುದು''

ಭಾಗ್ಯಳ ಮಾತಿನ ಧೋರಣೆಯನ್ನು ಕೇಳಿ ರಾಜಣ್ಣ ದಂಗಾದ.

"ನೀವು ಬಹಳ ಸ್ಪೋರ್ಟೀವ್''

"ಅದಿರಲಿ, ನೀವೇನೋ ಕೇಳುವುದಾಗಿ ಹೇಳಿದಿರಲ್ಲಾ. ಅದೇನು ಹೇಳಿರಿ''

"ನೀವು ಬಿ. ಎಸ್. ಸಿಗೆ ಓದುತ್ತಿದ್ದೀರಲ್ಲಾ. ಅದರಲ್ಲಿ ನಿಮ್ಮ ಉದ್ದೇಶವೇನು ಅಂತ, ಅಷ್ಟೇ"

"ಹಾಗಾದರೆ ಓದುವುದಕ್ಕೆ ಉದ್ದೇಶವಿರುತ್ತದೆನ್ನುತ್ತೀರಾ ?"

"ಉದ್ದೇಶವಿಲ್ಲದೇ ಇರುತ್ತದೆಯೇ ? ಯಾರೇ ಆಗಲೀ ಉದ್ದೇಶವಿಲ್ಲದೇ ಯಾವ ಕೆಲಸವನ್ನಾದರೂ ಮಾಡುತ್ತಾರೆಯೇ ?''

"ಮಾಡುತ್ತಾರೆ! ಅದಕ್ಕೇ ನಾನೇ ಸಾಕ್ಷಿ"

"ನನ್ನ ಪ್ರಶ್ನೆಗೆ ಜವಾಬು ಕೊಡುವುದು ನಿಮಗೆ ಇಷ್ಟವಿಲ್ಲವೆಂದು ತೋರುತ್ತದೆ"

''ಅಂತಹದೇನೂ ಇಲ್ಲ. ಉದ್ದೇಶವಿಲ್ಲದೇ ಯಾರೂ ಯಾವ ಕೆಲಸವನ್ನೂ ಮಾಡುವುದಿಲ್ಲವೆಂದಿರಲ್ಲಾ. ಈಗ ನೀವು ನೀನೇಕೆ ಓದುತ್ತೀ- ಎಂದು ಕೇಳಿದಿರಲ್ಲಾ. ಆ ಪ್ರಶ್ನೆಯನ್ನು ಕೇಳುವುದರಲ್ಲಿ ನಿಮಗೆ ಯಾವ ಉದ್ದೇಶ''

ರಾಜಣ್ಣನಿಗೆ ಗಂಟಲು ಹಿಡಿದುಕೊಂಡಂತೆ ಆಯಿತು. ಆದರೂ ಅವನು ಕೇಳಿದ ಪ್ರಶ್ನೆಗೆ ಉತ್ತರ ಕೊಡಬೇಕು.

''ಉದ್ದೇಶ ಎಂದರೆ ಖಚಿತವಾದ ಉದ್ದೇಶವೇನೂ ಇಲ್ಲ. ಕೇವಲ ಆಸಕ್ತಿ. ಬಿ. ಎಸ್. ಸಿ. ಗೆ ಓದುತ್ತೀರೆಂದರೆ ಆಸಕ್ತಿಯುಂಟಾಗುತ್ತದೆ'

"ನೀವು ಹೇಳುವುದು ನನಗೆ ಅರ್ಥವಾಗುವುದಿಲ್ಲ''

''ನಾನು ಕೇಳಿದ್ದು ಸರಿಯಾಗಿ ಕೇಳಲಿಲ್ಲವೆಂದು ತೋರುತ್ತದೆ. ನನ್ನ ಮನಸ್ಸಿಗೆ ಬಂದುದನ್ನು ಇದ್ದಕ್ಕಿದ್ದಂತೆ ಹೇಳಿಬಿಡುತ್ತೇನೆ. ನೀವು ಎಂ. ಬಿ ಬಿ. ಎಸ್. ಗೆ ಓದುತ್ತಿದ್ದಿದ್ದರೆ ನನಗೆ ಆಸಕ್ತಿಯು ಬರುತ್ತಿರಲಿಲ್ಲ. ಆರ್ಟ್ಸ್ ಓದುತ್ತಿದ್ದರೆ ಮನೆಯಲ್ಲಿ ಕುಳಿತು ಏನು ಮಾಡುವುದೆಂದು ಓದುತ್ತಿದ್ದೀರಿ- ಎಂದುಕೊಳ್ಳುತ್ತಿದ್ದೆ. ಈಗ ಹಾಗಲ್ಲ''

ಗಳಿಗೆ ತಡೆದು ಭಾಗ್ಯ ಕೇಳಿದಳು.

''ಎಂ. ಬಿ. ಬಿ. ಎಸ್. ಗೆ ಅಥವಾ ಬಿ. ಎ. ಗೆ ಓದುತ್ತಿದ್ದಿದ್ದರೆ ಯಾಕೆ ಆಸಕ್ತಿಯುಂಟಾಗುತ್ತಿರಲಿಲ್ಲ''

"ಆಗಲೇ ಹೇಳಿದೆನಲ್ಲ. ಬಿ. ಎ. ಗೆ ಓದುತ್ತಿದ್ದಿದ್ದರೆ ಸುಮ್ಮನಿದ್ದು ಮಾಡುವುದೇನೆಂದು ಓದುತ್ತಿದ್ದೀರಿ–ಎಂದುಕೊಳ್ಳುತ್ತಿದ್ದೆ. ಎಂ. ಬಿ. ಬಿ. ಎಸ್. ಗೆ ಓದುತ್ತಿದ್ದಿದ್ದರೆ ಡಾಕ್ಟರಾಗಲು ಓದುತ್ತಿದ್ದೀರಿ–ಎಂದುಕೊಳ್ಳುತ್ತಿದ್ದೆ. ಈಗ ಬಿ ಎಸ್. ಸಿ. ಗೆ ಓದುತ್ತಿರುವುದು ಯಾಕೆಂದು ಗೊತ್ತಾಗಲಿಲ್ಲ.

"ಇದಕ್ಕೆ ಉತ್ತರ ಕೇಳಲೇಬೇಕೆಂದು ನಿಮಗಿದೆಯೇನು ?" ಎಂದಳು ಭಾಗ್ಯ.

"ನಾನು ಮೊದಲೇ ಹೇಳಿದಂತೆ ಆಕ್ಷೇಪಣೆಯಿಲ್ಲದಿದ್ದರೆ ಹೇಳಬಹುದು"

"ಆಕ್ಷೇಪಣೆಯೇನೂ ಇಲ್ಲ. ಎಂ ಬಿ. ಬಿ. ಎಸ್. ಗೇ ಓದುತ್ತಿದ್ದೆನೋ ಏನೋ? ಆದರೆ ಅದಕ್ಕೆ ಸೀಟು ಸಿಕ್ಕುವುದು ಕಷ್ಟ. ಬಿ. ಎಸ್. ಸಿ. ಗಾದರೆ ಸುಲಭವಾಗಿ ಸಿಗುತ್ತದೆ. ಬಿ. ಎ. ಗಿಂತ ಒಂದು ವಿಧದಲ್ಲಿ ಬಿ. ಎಸ್. ಸಿ. ಗೆ ಅನುಕೂಲ. ಅದನ್ನು ಪ್ಯಾಸು ಮಾಡಿಕೊಂಡರೆ ಹೈಸ್ಕೂಲಿನಲ್ಲಿ ಮೇಡಂ ಕೆಲಸವೋ, ಅಥವಾ ಕಾಲೇಜಿನಲ್ಲಿ ಲೆಕ್ಚರರ್ ಕೆಲಸವೋ ಸಿಗುತ್ತದೆಯಲ್ಲಾ"

"ನೀವು ಈ ಉದ್ದೇಶವಿಟ್ಟುಕೊಂಡಿದ್ದೀರಿ ಎಂದು ನನಗೆ ಗೊತ್ತಿರಲಿಲ್ಲ"

ಇದುವರೆವಿಗೂ ರಾಜಣ್ಣ ಮಾತನಾಡಿರುವುದರಲ್ಲಿ ಭಾಗ್ಯಳಿಗೆ ಆಕ್ಷೇಪಣೆ ಯಾವುದೂ ಕಂಡುಬರಲಿಲ್ಲ. ಆದರೆ ಈಗ ಹೇಳಿದ ಮಾತು ಸರಿಯಾಗಿ ತೋರಲಿಲ್ಲ.

"ಯಾಕೆ, ಮಾತನ್ನು ಅಲ್ಲಿಗೇ ನಿಲ್ಲಿಸಿಬಿಟ್ಟಿರಿ ?"

"ಅಷ್ಟೇ. ನೀವು ಯಾಕೆ ಬಿ ಎಸ್. ಸಿ. ಗೆ ಓದುತ್ತಿದ್ದೀರೆಂದು ಕುತೂಹಲವುಂಟಾಯಿತು. ಕೇಳಿದೆ. ನೀವು ಉತ್ತರ ಹೇಳಿದಿರಿ"

ರಾಜಣ್ಣನ ಮನಸ್ಸಿನಲ್ಲಿ ಮೊದಲಾಗಿದ್ದ ಆಲೋಚನಾ ಪ್ರವಾಹವು ಮುಗಿದ್ದಿತೋ ಇಲ್ಲವೋ ಹೇಳುವುದಕ್ಕೆ ಆಗುವುದಿಲ್ಲ. ಆದರೆ ಅವನು ಪ್ರಶ್ನೆ ಕೇಳಿದ್ದರಿಂದ ಭಾಗ್ಯಳ ಮನಸ್ಸಿನಲ್ಲಿ ಹರಿಯಲಾರಂಭವಾಗಿದ್ದ ಪ್ರವಾಹವಂತೂ ಮುಗಿದಿರಲಿಲ್ಲ. ಅದು ಹೆಚ್ಚು ಹೊಳೆಯಂತೆ ಉಕ್ಕಿ ಹರಿಯತೊಡಗಿತ್ತು.

ಗುಂಡೂರಾಯರ ಮನೆಗೆ ರಾಜಣ್ಣ ಬಂದಿದ್ದುದು ಅಕಸ್ಮಾತ್ತಾಗಿ ಬೆಳ

ಗಾಗ ಬಂದವನು ಸಂಜೆಯವರೆವೆಗೂ ಅವನಿಲ್ಲಿಯೇ ಇದ್ದನಷ್ಟೇ. ಅವನನ್ನು ನೋಡಿ ಚೆನ್ನಾಗಿದ್ದಾನೆ ಎನ್ನಿಸಿತು. ತನ್ನನ್ನು ನೋಡಲು ಬಂದಿದ್ದ ಎಷ್ಟೋ ವರಾಹಗಳಿಗಿಂತಲೂ ಲಕ್ಷಣವಾಗಿ ಕಂಡಿದ್ದ. ಅವನ ವಿಷಯವನ್ನೆಲ್ಲಾ ಕೇಳಿ ಅವಳಿಗೊಂದು ಬಗೆಯ ಸಮಾಧಾನವಾಗಿತ್ತು. ಆ ರಾತ್ರಿ ರಾಜಣ್ಣ ಎರಡು ದೇವರ ನಾಮಗಳನ್ನು ಹೇಳಿದ್ದನಷ್ಟೇ. ಅದನ್ನು ಕೇಳಿ ಭಾಗ್ಯಳಿಗೆ ಅವನ ವಿಷಯಕವಾದ ಆಕರ್ಷಣೆಯು ಮತ್ತಷ್ಟು ಹೆಚ್ಚಿತ್ತು.

ಜಯಳ ಮದುವೆಯಲ್ಲಿ ಅವರುಗಳು ಒಟ್ಟಿಗೇ ಇದ್ದರಷ್ಟೇ. ಅದರಿಂದ ಸಲಿಗೆಯು ಹೆಚ್ಚಿತ್ತು. ಇಬ್ಬರಲ್ಲಿಯೂ ಸ್ನೇಹವು ಹೆಚ್ಚಿತ್ತು. ಎಷ್ಟೋ ಬಾರಿ ಭಾಗ್ಯಳು ಅವನ ವಿಷಯಕವಾದ ಕನಸುಗಳನ್ನು ಕಂಡಿದ್ದಳು.

ಬೆಂಗಳೂರಿಗೆ ಬಂದ ಮೇಲೆಯೂ ಆ ಆಸೆಯು ಉಳಿದಿತ್ತು.

ತಾಯಿತಂದೆಗಳು ಅವಳ ಎದುರಿಗೆ ಆ ಮಾತನ್ನು ಸ್ಪಷ್ಟವಾಗಿ ಹೇಳದಿದ್ದರೂ ಅವರು ಮಾತನಾಡಿಕೊಳ್ಳುತ್ತಿದ್ದುದು ಭಾಗ್ಯಳ ಕಿವಿಯಲ್ಲಿ ಬಿದ್ದಿತ್ತು. ಅದು ಅವಳ ಆಸೆಯನ್ನು ಚಿಗುರಿಸಿತ್ತು.

ಇತ್ತೀಚೆಗೆ ರಾಜಣ್ಣ ಮನೆಯಲ್ಲಿಯೇ ಬಂದಿರಲು ಆರಂಭ ಮಾಡಿದ ನಂತರವಂತೂ ಅದನ್ನು ಸಂದೇಹಿಸುವುದಕ್ಕೆ ಅವಕಾಶವೇ ಇರಲಿಲ್ಲ.

ಆದರೆ ಇತ್ತೀಚೆಗೆ ಭಾಗ್ಯ ಈ ವಿಷಯದಲ್ಲಿ ಒಡಕು ಶಬ್ದವನ್ನು ಕೇಳಿದ್ದಳು. ರಾಜಣ್ಣ ತನ್ನನ್ನು ಮದುವೆಯಾಗಲು ಒಪ್ಪುವುದಿಲ್ಲವೆಂದು ಅವಳ ಕಿವಿಯಲ್ಲಿ ಬಿದ್ದಿತು. ವೆಂಕಟೇಶಯ್ಯನವರ ಮಾತಿನಲ್ಲಿ ಅವನಿಗೆ ಬಹಳ ಗೌರವವಿದೆಯೆಂದೂ ಆದರೆ ಯಾವ ಕಾರಣದಿಂದಲೋ ಅವರು ಅವನಿಗೆ ಹೇಳಲು ತಯಾರಾಗಿಲ್ಲವೆಂದೂ ಕೇಳಿದ್ದಳು.

ಹಾಗೆ ನಿರಾಸೆಯಾಗಿತ್ತು. ರಾಜಣ್ಣನ ವಿಷಯದಲ್ಲಿ ಸ್ವಲ್ಪ ಅಸಮಾಧಾನವೂ ಉಂಟಾಗಿದ್ದಿತು. ಮದುವೆಯೇ ಬೇಡವೆಂದು ಭಾಗ್ಯ ಮೊದಲು ತೀರ್ಮಾನ ಮಾಡಿಕೊಂಡಿದ್ದಳಷ್ಟೇ. ರಾಜಣ್ಣನನ್ನು ನೋಡಲಾರಂಭ ಮಾಡಿದನಂತರ ಆ ತೀರ್ಮಾನ ಸಡಿಲವಾಗಿತ್ತು. ಈಗ ಪುನಃ ಅದು ಮರುಕಳಿಸಿತು. ಮರುಕಳಿಸಿದ್ದಷ್ಟೇ ಅಲ್ಲ. ಅದು ಮೊದಲಿಗಿಂತಲೂ ತೀವ್ರರೂಪವನ್ನು ಧಾರಣ ಮಾಡಿತು.

ರಾಜಣ್ಣನ ಪ್ರಶ್ನೆ ಈ ಭಾವನೆಗಳು ಮನಸ್ಸಿಗೆ ಬರುವುದಕ್ಕೆ ನೇರವಾಗಿ ಕಾರಣವಾಗದಿದ್ದರೂ ಅಪ್ರತ್ಯಕ್ಷವಾಗಿ ಕಾರಣವಾದುವು.

ತನ್ನನ್ನು ತಿರಸ್ಕರಿಸಿದ ಅನೇಕಾನೇಕ ವರಾಹಗಳಂತೆಯೇ ರಾಜಣ್ಣನೂ ಕಂಡುಬಂದ. ಅಷ್ಟೇ ಅಲ್ಲದೇ ರಾಜಣ್ಣ ಎದುರಿಗಿದ್ದುದರಿಂದ ಅವರುಗಳ ಪ್ರತೀಕದಂತೆ ಕಂಡುಬಂದ.

ಅವನನ್ನು ದಬಾಯಿಸಿ ಎರಡು ಮಾತುಗಳನ್ನು ಹೇಳಬೇಕೆಂದು ಮನೆ ಮಾಡಿಕೊಂಡಿದ್ದ ಅಸಮಾಧಾನವು ಅವಳಿಗೆ ಉದ್ರೇಕವನ್ನುಂಟುಮಾಡಿತು.

"ಇಲ್ಲ. ನೀವು ಎತ್ತಿದ ಮಾತು ಅಲ್ಲಿಗೆ ಮುಗಿಯಲಿಲ್ಲ"

ರಾಜಣ್ಣ ಬೆರಗಾಗಿ ಅವಳ ಕಡೆಗೆ ನೋಡಿದ.

"ಮುಗಿಯಲಿಲ್ಲ-ಎಂದರೆ ?"

"ನೀವು ಕೇಳಬೇಕಾದ ಒಂದು ಪ್ರಶ್ನೆಯಿದ್ದಿತು. ಆದರ ನೀವು ಅದನ್ನು ಕೇಳಲು ಹೆದರಿದಿರಿ"

"ನನಗೆ ಗೊತ್ತಿಲ್ಲದ ವಿಷಯವನ್ನು ಹೇಳುತ್ತಿದ್ದೀರಿ. ಕೇಳುವುದಕ್ಕೆ ನಾನು ಹೆದರಿಕೊಳ್ಳುವಂತಹ ಆ ಪ್ರಶ್ನೆ ಏನು ಎನ್ನುತ್ತೀರಿ ?"

"ನಾನು ಓದಿ ಯಾವುದಾದರೊಂದು ಉದ್ಯೋಗವನ್ನು ಸಂಪಾದನೆ ಮಾಡಬೇಕೆಂದು ಯಾಕೆ ಪ್ರಯತ್ನಿಸುತ್ತಿದ್ದೇನೆಂದು ನಿಮಗೆ ತೋರಲಿಲ್ಲವೇ?"

ತೋರಿತ್ತು. ರಾಜಣ್ಣನಿಗೆ ಆ ಪ್ರಶ್ನೆಯನ್ನು ಕೇಳಲು ಧೈರ್ಯವಿರಲಿಲ್ಲ.

"ಅದು ನಿಮ್ಮ ಇಷ್ಟ. ನಿಮಗೆ ಅಂತಹ ಇಷ್ಟವು ಯಾಕೆ ಉಂಟಾಯಿತೆಂದು ಕೇಳಲು ನನಗೇನು ಅಧಿಕಾರ ?"

"ಆ ಅಧಿಕಾರವು ಯಾರಿಗೂ ಇಲ್ಲ. ಆದರೆ ನಾನು ಬಿ. ಎಸ್. ಸಿ. ಓದುತ್ತಿರುವುದರಿಂದ ಅದನ್ನೇಕೆ ಓದುತ್ತಿದ್ದಾಳೆ ಎಂದು ನಿಮಗೆ ಆಸಕ್ತಿಯುಂಟಾಯಿತು. ನಾನು ಓದಿ ಯಾವುದಾದರೂ ಉದ್ಯೋಗವನ್ನು ಮಾಡುತ್ತೇನೆಂದರೆ ಹಾಗೇಕೆ ಮಾಡುತ್ತಾಳೆಂದು ಸಹ ನಿಮಗೆ ಆಸಕ್ತಿಯುಂಟಾಗುವುದು ಸಹಜವಲ್ಲವೇ ? ಒಂದು ವೇಳೆ ನಾನು ಮುಂದೆ ಕೆಲಸಕ್ಕೆ ಸೇರಿದಾಗಲಾದರೂ ಇವಳೇಕೆ ಎಲ್ಲರಂತೆ ಮದುವೆ ಮಾಡಿಕೊಳ್ಳದೇ ಕೆಲಸಮಾಡುತ್ತಾಳೆಂದು ನಿಮಗೆ ಆಸಕ್ತಿಯುಂಟಾಗಬಹುದಲ್ಲವೇ ?"

ರಾಜಣ್ಣ ಅದಕ್ಕೇನೂ ಉತ್ತರ ಹೇಳಲಿಲ್ಲ.

"ಹೌದು. ನಿಮಗೆ ಹಾಗೂ ಆಸಕ್ತಿಯುಂಟಾಗಿದೆ. ಆದರೆ ಅದನ್ನು ಸ್ಪಷ್ಟವಾಗಿ ಹೇಳಲು ಹಿಂದೆಗೆಯುತ್ತಿದ್ದೀರಿ"

ವಾಸ್ತವವಾಗಿ ಅವನ ಮನಸ್ಸಿನಲ್ಲಿ ಆಸಕ್ತಿಯುಂಟಾಗಿತ್ತು. ಒಪ್ಪಿಕೊಳ್ಳುವವರೆವಿಗೆ ಅವಳು ಬಿಡುವುದಿಲ್ಲ.

ನಿಸ್ಸಾರವಾಗಿ ನಗುತ್ತಾ "ಹಾಗೆಯೇ ಇಟ್ಟುಕೊಳ್ಳಿ. ನೀವು 'ಹೇಳಿದ್ದರ ಮೇಲೆ ಹಾಗೆ ತೋರುವುದು ಸಹಜವೆಂದು ನೀವೇ ಅಂದಿರಲ್ಲ" ಎಂದ.

ಗೆದ್ದವಳಂತೆ ಅಟ್ಟಹಾಸದಿಂದ "ಹಾ..ನಾನು ಊಹೆ ಮಾಡಿದ್ದು ಸರಿ, ಆದರೆ ನೀವು ಆ ಪ್ರಶ್ನೆಯನ್ನು ಕೇಳಲು ಹೆದರಿದಿರಿ" ಎಂದಳು,

"ಹೆದರಲಿಲ್ಲ, ಭಾಗ್ಯ. ಅದು ನನಗೆ ಸಂಬಂಧವಿಲ್ಲವೆಂದು ಕೇಳಲಿಲ್ಲ, ಅಷ್ಟೇ.

"ನೀವೇನು, ಗಂಡಸು ಜಾತಿಯೇ ಹೆಂಗಸಿನ ಈ ಹೊಸ ಭಾವನೆಯಾಗಿ ಹೆದರುತ್ತದೆ"

ಅದೇನೆಂದು ಅವನು ಕೇಳಲಿಲ್ಲ. ಈ ಮಾತು ಅಸಮಾಧಾನದಲ್ಲಿ ಪರ್ಯವಸಾನವಾಗುತ್ತದೆಂದೂ, ತಾನು ಇದನ್ನು ಎತ್ತಿದ್ದೇ ತಪ್ಪಾಯಿತೆಂದೂ ಅಂದುಕೊಂಡ.

ನಾಲ್ಕು ಹೆಜ್ಜೆ ಮುಂದುವರಿಯುವವರೆವಿಗೆ ಸುಮ್ಮನಿದ್ದು ಭಾಗ್ಯ ಹೇಳತೊಡಗಿದಳು.

"ಹೆಂಗಸಿಗೆ ಇಂದು ಸಂಪೂರ್ಣ ಸ್ವಾತಂತ್ರ್ಯವು ಸಿಕ್ಕಿದೆ. ಗಂಡಸಿಗೆ ಸರಿಸಮಾನಸ್ಕಂದಳಾಗಿದ್ದಾಳೆ. ರಾಜ್ಯಾಂಗದ ರೀತ್ಯಾ ಅವಳಿಗೆ ಓಟು ಮಾಡುವ ಅಧಿಕಾರವು ಬಂದುದರಿಂದ ಅವಳು ಯಾವ ರೀತಿಯಾಗಿಯೂ ಗಂಡಸರಿಗೆ ಕಡಿಮೆಯಾಗಿಲ್ಲ"

"ಕಡಿಮೆಯೆಂದು ಯಾರು ಹೇಳುತ್ತಾರೆ? ಸ್ತ್ರೀ ಪುರುಷರು ಸರಿಸಮಾನಸ್ಕಂದರೆಂದೇ ಸಮಾಜವು ಒಪ್ಪಿಕೊಂಡಿದೆ"

"ಒಪ್ಪಿಕೊಂಡಿದೆ. ಆದರೆ ಅದು ಕೇವಲ ಠಕ್ಕು ಮಾತು. ಗಂಡಸರು ಹೆಂಗಸರನ್ನು ಇನ್ನೂ ದಾಸಿಯರಾಗಿಯೇ ಇಟ್ಟುಕೊಂಡಿರಲು ಅಪೇಕ್ಷೆ ಮಾಡುತ್ತಿದ್ದಾರೆ ಅದಕ್ಕೆ ಸರ್ವ ವಿಧವಾದ ಪ್ರಯತ್ನವನ್ನೂ ಮಾಡುತ್ತಿದ್ದಾರೆ"

"ಇಲ್ಲ, ಭಾಗ್ಯ. ಅದು ನಿಮ್ಮ ತಪ್ಪು ತಿಳುವಳಿಕೆ"

"ಖಂಡಿತವಾಗಿ ತಪ್ಪು ತಿಳಿವಳಿಕೆಯಲ್ಲ. ಉದಾಹರಣೆಗೆ ಹೇಳುವುದಾದರೆ ಮದುವೆಯ ವಿಷಯವನ್ನು ತೆಗೆದುಕೊಳ್ಳಿರಿ. ನಮ್ಮಲ್ಲಿ ಮದುವೆಗಳಾಗುವ ರೀತಿಯನ್ನು ಗಮನಿಸಿರಿ. ಹೆಣ್ಣಿನವರು ಗಂಡನ್ನು ಹೋಗಿ ನಮ್ಮ ಹುಡುಗಿಯನ್ನು ತಂದುಕೊಳ್ಳಿರಿ–ಎಂದು ಪ್ರಾರ್ಥನೆಮಾಡಿಕೊಳ್ಳುತ್ತಾರೆ. ಗಂಡು ಬಂದು ಹುಡುಗಿಯನ್ನು ನೋಡುತ್ತಾನೆ. ಅಥವಾ ಅವಳನ್ನೇ ತನ್ನ ಮನೆಗೆ ಬರಮಾಡಿಕೊಳ್ಳುತ್ತಾನೆ. ಹುಡುಗಿಯೂ ಒಪ್ಪುವುದಕ್ಕೆ ಈ ವಿಧಾನ ಮಾಡುತ್ತಾರೆ. ಆದರೆ ಈ ವಿಧಾನವು ಪರ್ಯವಸಾನವಾಗುವುದು ಎದುರಿಗಿರುವ ಹೆಣ್ಣು ತನಗೆ ಬೇಕೇ ಇಲ್ಲವೇ ಎಂದು ಗಂಡು ಆರಿಸುವುದರಲ್ಲಿ ಮಾತ್ರ. ಮನೆಯಲ್ಲಿ ದುಡಿಯುವುದಕ್ಕೆ, ಮಕ್ಕಳನ್ನು ಹೆರುವುದಕ್ಕೆ ತನ್ನನ್ನು ಆವನು ಆರಿಸಿಕೊಳ್ಳುತ್ತಾನೆಯೇ ಇಲ್ಲವೇ ಎಂದು ನಿರೀಕ್ಷಿಸುವುದೊಂದು ಮಾತ್ರ ಹೆಣ್ಣಿಗೆ ಉಳಿದಿದೆ. ಹಿಂದಿನ ಕಾಲಗಳಲ್ಲಿ ಪಾಶ್ಚಾತ್ಯ ದೇಶಗಳವರು ತಾವು ಹಿಡಿದುಕೊಂಡು ಬಂದವರನ್ನು ಮಾರುತ್ತಿದ್ದರಂತೆ. ಸ್ತ್ರೀ ಪುರುಷರನ್ನು ಮಾರ್ಕೆಟ್ಟಿನಲ್ಲಿ ನಿಲ್ಲಿಸಿ ಯಾರು ಅಧಿಕ ಬೆಲೆಯನ್ನು ಕೊಡುತ್ತಾರೆಯೋ ಅವರಿಗೆ ಮಾರುತ್ತಿದ್ದರಂತೆ. ಆ ಮಾರ್ಕೆಟ್‌ಗಳಲ್ಲಿ ನಿಲ್ಲುತ್ತಿದ್ದ ಬಂದಿಗಳಿಗೂ ಇಂದು ಗಂಡಿನೆದುರಿಗೆ ನಿಲ್ಲುವ ಹೆಣ್ಣುಗಳಿಗೂ ವ್ಯತ್ಯಾಸವೇನು ?"

"ನೀವು ಈ ವಿಷಯಗಳನ್ನು ಬಹಳ ತಪ್ಪಾಗಿ ತಿಳಿದುಕೊಂಡಿದ್ದೀರಿ. ಪಕ್ಷಪಾತದಿಂದ ಮಾತನಾಡುತ್ತಿದ್ದೀರಿ"

"ಇಲ್ಲ. ನಾನು ಎಲ್ಲವನ್ನೂ ನಿಷ್ಪಕ್ಷಪಾತದಿಂದ ಆಲೋಚನೆ ಮಾಡಿದ್ದೇನೆ. ಇದಕ್ಕೆ ಕಾರಣವೇನೆಂಬುದನ್ನು ಕಂಡುಕೊಂಡಿದ್ದೇನೆ"

"ನೀವು ಹೇಳುವುದನ್ನೆಲ್ಲಾ ಹೇಳಿರಿ, ಕೇಳುತ್ತೇನೆ"

"ಹೆಂಗಸರು ಉದ್ಯೋಗಶೀಲೆಯರಾಗಿ ಸಂಪಾದನೆ ಮಾಡಿಕೊಂಡಿದ್ದರೆ ಅವರು ಯಾರಿಗೂ ದಾಸರಾಗಿರಬೇಕಾಗುವುದಿಲ್ಲ"

"ನೀವು ಹೇಳುವಂತೆ ಹೆಂಗಸರೆಲ್ಲಾ ಉದ್ಯೋಗ ಮಾಡತೊಡಗಿದರೆ ಅವರು ಮದುವೆಯಾಗಿ ಸಂಸಾರ ಮಾಡಬೇಡವೇ ?"

"ಮದುವೆ ಸಂಸಾರಗಳಿಗಿಂತಲೂ ಹೆಂಗಸು ಸ್ವತಂತ್ರಳಾಗುವುದು ಮುಖ್ಯ ಎನ್ನುತ್ತೇನೆ"

"ನೀವೂ ವಯಸ್ಸಾದವರು, ನಾನೂ ವಯಸ್ಸಾದವನು. ಅದರಿಂದ ಈ ಮಾತಿಗೆ ಉತ್ತರ ಕೊಡುವುದಕ್ಕೆ ಸಂಕೋಚವಾಗುತ್ತದೆ"

"ಸಂಕೋಚವೇನೂ ಇಲ್ಲ. ಅದಕ್ಕೆ ನಿಮ್ಮಲ್ಲಿ ಉತ್ತರವಿದ್ದರೆ ಸ್ಪಷ್ಟವಾಗಿ ಹೇಳಿರಿ"

"ನೀವು ಹೇಳುವಂತಾದರೆ ಎತ್ತು ಏರಿಗೆಳೆಯಿತು. ಕೋಣ ನೀರಿಗೆಳೆಯಿತು–ಎಂದು ಹೆಣ್ಣು ಒಂದು ಮುಖ, ಗಂಡು ಒಂದು ಮುಖ ಆಗುತ್ತದೆ. ಆದರೆ ವಾಸ್ತವವಾಗಿ ಸ್ತ್ರೀ ಪುರುಷರು ಪರಸ್ಪರ ದೂರವಿರುವುದು ಸಹಜವಲ್ಲವೇ ಅಲ್ಲ. ಅವರು ಮದುವೆಯಾಗಬೇಕು. ಸಂಸಾರ ಮಾಡಬೇಕು"

"ಹೆಂಗಸರು ಮೊದಲು ಸ್ವತಂತ್ರರಾಗಲಿ, ಆನಂತರ ಬೇಕಾದರೆ ಮದುವೆಯಾಗಲಿ"

"ಹೆಂಗಸು ಮದುವೆಯಾಗಿ ಸಂಸಾರ ಮಾಡುವುದು ಎಂದಾದನಂತರ ಅವಳು ಸಂಪಾದನೆ ಮಾಡಬೇಕಾದ ಅಗತ್ಯವಾದರೂ ಏನು? ಮುಂದೆ ಬಿಟ್ಟುಬಿಡಬೇಕಾದಂತಹ ಸಂಪಾದನೆಯನ್ನು ಮಾಡಲು ಅವಳು ಮೊದಲೇಕೆ ಕಷ್ಟಪಡಬೇಕು?

"ಕೆಲವು ಜಾತಿಗಳಲ್ಲಿ ಸ್ವಲ್ಪ ಭೇಧವಿರಬಹುದು. ಆದರೆ ಮದುವೆ ಮಾಡಿಕೋ ಎಂದು ಹೋಗಿ ಕೇಳುವವರಾರು? ಅಥವಾ ಮದುವೆಗೆ ತಹತಹಪಡುವವರು ಯಾರು? ಹೆಣ್ಣಿನ ಮನೆಯವರು. ಅದರಿಂದಲೇ ಹೆಣ್ಣಿಗೆ ಗೌರವವಿಲ್ಲ. ಸರಿಸಮಾನಸ್ಕಂದತೆಯಿಲ್ಲ. ಹೆಂಗಸೂ ಸಂಪಾದನೆ ಮಾಡುತ್ತಾ ತನ್ನ ಕಾಲಿನ ಮೇಲೆ ತಾನು ನಿಂತುಕೊಂಡಿರುತ್ತಾಳೆಂದುಕೊಳ್ಳೋಣ. ಹೆಂಗಸಿಗೆ ಹೇಗೆ ಮದುವೆಯಾಗಬೇಕೆಂದು ಸಮಾಜವು ಹೇಳುತ್ತದೆಯೋ ಅದೇ ರೀತಿಯಾಗಿ ಗಂಡಸಿಗೂ ಮದುವೆಯು ಬೇಕಷ್ಟೇ. ಗಂಡನೇ ಬಂದು ಹೆಣ್ಣನ್ನು ಮದುವೆಗೆ ಕೇಳುವಂತಾದರೆ ಇವೆಲ್ಲವೂ ಸರಿಹೋಗುತ್ತವೆ"

"ನೀವು ಹೇಳುವಂತೆಯೇ ನಡೆಯುವುದೆಂದುಕೊಳ್ಳೋಣ. ಯಾರೋ ಒಬ್ಬ ಹೆಂಗಸನ್ನು ಯಾರೂ ಬಂದು ಮದುವೆ ಮಾಡಿಕೋ ಎಂದು ಕೇಳುವುದಿಲ್ಲವೆಂದುಕೊಳ್ಳೋಣ ಅಲ್ಲಿಗೆ ಅವಳು ಮದುವೆಯೇ ಇಲ್ಲದೇ ಇರುವುದು ಎನ್ನುತ್ತೀರಾ?"

"ಓಹೋ! ಬೇಷಕ್ಕಾಗಿ. ಎಷ್ಟೋ ಮಂದಿ ಗಂಡಸರು ಮದುವೆಯೇ

ಇಲ್ಲದೇ ಜೀವನವನ್ನು ಕಳೆಯುವುದಿಲ್ಲವೇ? ಅವರ ವಿಷಯವಾಗಿ ಆಕ್ಷೇಪಣೆ ಮಾಡದೇ ಇರುವಂತಹ ಸಮಾಜವು ಹೆಂಗಸರು ಮದುವೆ ಮಾಡಿಕೊಳ್ಳದೇ ಜೀವನವನ್ನು ಕಳೆದರೆ ಆಕ್ಷೇಪಣೆ ಮಾಡಬೇಕೇಕೆ?''

''ನಾನೊಂದು ಮಾತು ಕೇಳಲೇ ಭಾಗ್ಯ''

''ಕೇಳಿ. ಏನು ಬೇಕಾದರೂ ಕೇಳಿರಿ''

''ನೀವು ಹೇಳುತ್ತೀರಿ. ಆದರೆ ಹೆಂಗಸರು ನೀವು ಹೇಳಿದಂತೆ ಇರುವುದು ಬಹಳ ಕಷ್ಟ''

''ನೋಡುತ್ತಿರಿ. ನಾನು ಇದ್ದು ತೋರಿಸುತ್ತೇನೆ''

''ನೀವೊಂದು ವೇಳೆ ಇದ್ದೀರಿ. ನಿಮ್ಮ ತಾಯಿತಂದೆಗಳು ಇದಕ್ಕೆ ಒಪ್ಪುತ್ತಾರೆಯೋ?''

''ಒಪ್ಪದೇ ಏನು? ಅವರನ್ನು ಒಪ್ಪಿಸುತ್ತೇನೆ''

''ಹಾಗಾದರೆ ನೀವು ಅವಿವಾಹಿತವಾಗಿಯೇ ಇರುವುದಾಗಿ ತೀರ್ಮಾನ ಮಾಡಿದ್ದೀರಾ?''

''ಹೌದು. ಅದನ್ನು ಯಾವಾಗಲೋ ತೀರ್ಮಾನ ಮಾಡಿದ್ದೇನೆ''

''ಇದಕ್ಕೆ ನಿಮ್ಮ ತಾಯಿತಂದೆಗಳು ವಿರೋಧ ಮಾಡಿದರೆ?''

''ನಾನು ಯಾರ ವಿರೋಧವನ್ನೂ ಲಕ್ಷ್ಯ ಮಾಡುವುದಿಲ್ಲ. ನಾನು ಯಾವುದು ಸರಿಯೆಂದು ಭಾವಿಸುತ್ತೇನೆಯೋ ಅದನ್ನು ಮಾಡುವುದಕ್ಕೆ ಸ್ವಲ್ಪವೂ ಹಿಂದೆ ಮುಂದೆ ನೋಡುವುದಿಲ್ಲ''

ಅವರುಗಳು ಮಾತನಾಡಿಕೊಂಡು ಜಯಚಾಮರಾಜೇಂದ್ರ ರಸ್ತೆಯವರೆವಿಗೆ ಬಂದುಬಿಟ್ಟಿದ್ದರು. ಆ ವೇಳೆಗಾಗಲೇ ಎರಡು ಮೂರು ಬಸ್ಸುಗಳು ಹಾದುಹೋದುವು. ಮಾತಿನ ಭರದಲ್ಲಿ ಅವುಗಳಲ್ಲಿ ಸೀಟುಗಳಿವೆಯೋ ಇಲ್ಲವೇ ತಾವು ಬಸ್ ಸ್ಟಾಪ್‌ನ ಬಳಿ ಇದ್ದೇವೆಯೋ ಇಲ್ಲವೇ, ಎಂದು ಸಹ ಅವರುಗಳು ಯೋಚನೆ ಮಾಡಲಿಲ್ಲ.

ಆ ರಸ್ತೆಯನ್ನು ಪ್ರವೇಶಿಸುತ್ತಿದ್ದಂತೆಯೇ ಬಸ್ ಸ್ಟಾಪ್. ಆ ಸಮಯಕ್ಕೆ ಸರಿಯಾಗಿ ಟೌನ್‌ಹಾಲ್ ಕಡೆಯಿಂದ ಒಂದಾನೊಂದು ಬಸ್ ಬರುತಿತ್ತು.

ರಾಜಣ್ಣನು ''ಭಾಗ್ಯ. ಸ್ವಲ್ಪ ನಿಂತುಕೊಳ್ಳಿರಿ. ಅಲ್ಲಿ ಬರುತ್ತಿರುವ ಬಸ್‌ನಲ್ಲಿ ಸೀಟುಗಳಿವೆಯೋ ನೋಡೋಣ'' ಎಂದ.

ಭಾಗ್ಯ ನಿಂತುಕೊಂಡಳು.

ಬಸ್ ಬಂದಿತು. ಅದರಲ್ಲಿ ಸೀಟುಗಳಿದ್ದವು. ಇಬ್ಬರೂ ಕುಳಿತು ಕೊಂಡು ಹೊರಟರು.

ಗಾಂಧೀ ಬಜಾರಿನಲ್ಲಿ ಬಸ್ ಇಳಿದು ಮನೆಯ ಕಡೆಗೆ ಹೋಗುತ್ತಾ ಭಾಗ್ಯಳು "ನಾನು ಮಾತನಾಡಿದುದು ನಿಮ್ಮ ಮನಸ್ಸಿಗೆ ನೋವನ್ನುಂಟು ಮಾಡಿತೇ ?" ಎಂದು ಕೇಳಿದಳು.

"ಹಾಗೇನೂ ಇಲ್ಲ. ಅದು ನಿಮ್ಮ ಅಭಿಪ್ರಾಯ. ಪ್ರತಿಯೊಬ್ಬರೂ ವೈಯ್ಯಕ್ತಿಕವಾದ ಅಭಿಪ್ರಾಯಗಳನ್ನು ಇಟ್ಟುಕೊಳ್ಳಲು ಅಧಿಕಾರವುಳ್ಳವ ರಾಗಿದ್ದಾರೆ"

"ನಿಮ್ಮ ಹಾಗೆ ಪ್ರತಿಯೊಬ್ಬರೂ ತಿಳಿದುಕೊಂಡರೆ ಎಷ್ಟೋ ಒಳ್ಳೆ ಯದು. ನಾನು ವೈಯುಕ್ತಿಕವಾಗಿ ಹೇಳಲಿಲ್ಲ. ಯಾರನ್ನೇ ಆಗಲಿ, ಮನಸ್ಸಿನಲ್ಲಿಟ್ಟುಕೊಂಡು ಹೇಳಲಿಲ್ಲ. ಗಂಡಸರು ಹೆಂಗಸರ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳುವುದು ಒಳ್ಳೆಯದು. ಆದರೆ ಸಹಸ್ರಾರು ವರ್ಷಗಳಿಂದಲೂ ನಾವೂ ನೋಡುತ್ತಿದ್ದೇವೆ. ಗಂಡಸು ತನ್ನ ದೃಷ್ಟಿಯನ್ನು ಬದಲಾಯಿಸಿಕೊಂಡಿಲ್ಲ. ಆಗ ಹೆಂಗಸರಾದರೂ ಆ ಕಾರ್ಯ ಸಾಧನೆಗೆ ಪ್ರಯತ್ನ ಮಾಡಬೇಕು. ಅದಕ್ಕಿರುವುದು ನಾನು ಹೇಳಿದು ದೊಂದೇ ಮಾರ್ಗ. ಹೆಂಗಸು ಉದ್ಯೋಗಶೀಲೆಯಾಗಿ ಸಂಪಾದನೆ ಮಾಡು ತ್ತಾ ತನ್ನ ಕಾಲ ಮೇಲೆ ತಾನು ನಿಂತುಕೊಳ್ಳಬೇಕು. ಹಾಗಾದರೆ ಮಾತ್ರ ಖಂಡಿತವಾಗಿ ಗಂಡಸನ್ನು ಮಾರ್ಗಕ್ಕೆ ತರಲು ಸಾಧ್ಯವಾಗುತ್ತದೆ"


## ೧೧

ವ್ಯಕ್ತಿಗಳು ಮಾತನಾಡುತ್ತಾರೆ. ತಮ್ಮ ಅಭಿಪ್ರಾಯಗಳೇನಿವೆಯೋ ಅವುಗಳಿಗೆ ಅನುಗುಣವಾಗಿಯೇ ಮಾತನಾಡುತ್ತಾರೆ. ಆ ಅಭಿಪ್ರಾಯಗಳಿ ಗಾಗಿ ಸರ್ವಸ್ವವನ್ನೂ ತ್ಯಾಗಮಾಡುತ್ತೇವೆಂದುಕೊಳ್ಳುತ್ತಾರೆ ಆದರೆ ಅದೇ ವ್ಯಕ್ತಿಗಳು ಪರಿಸ್ಥಿತಿಯ ಸುಳಿಯಲ್ಲಿ ಸಿಕ್ಕಿಬಿದ್ದಾಗ ತಮ್ಮ ಅಭಿಪ್ರಾಯಗಳ

ಮೇಲೆಯೇ ನಿಲ್ಲುತ್ತಾರೆಯೇ ಎಂದು ಪ್ರಶ್ನೆ. ಬಹು ಮಟ್ಟಿಗೆ ಆ ಪ್ರಶ್ನೆಗೆ ಉತ್ತರ ಇಲ್ಲ.

ಭಾಗ್ಯಳೂ ಇದಕ್ಕೆ ಹೊರತಾಗಿರಲಿಲ್ಲ.

ಶ್ರಾವಣಮಾಸವು ಹತ್ತಿರಕ್ಕೆ ಬರಲಾರಂಭವಾದಂತೆಲ್ಲಾ ಗುಂಡೂ ರಾಯರು ಕಾರ್ಯೋನ್ಮುಖರಾದರು.

ಅವರು ಮೊದಲು ಮಾಡಿದ ಕೆಲಸವೆಂದರೆ ಮಾಗಡಿಗೆ ಕಾಗದ ಬರೆದು ವೆಂಕಟೇಶಯ್ಯನವರನ್ನು ಕರೆಸಿದ್ದು.

ಬರೆದ ಕಾಗದದಲ್ಲಿ ಯಾಕೆ ಬರಬೇಕೆಂಬ ಕಾರಣವನ್ನು ಸೂಚಿಸಿರಲಿಲ್ಲ.

ಬಹಳ ಜರೂರಾಗಿ ಬರಬೇಕೆಂದು ಕಾಗದದಲ್ಲಿ ಬರೆದಿತ್ತು. ಏನು ಜರೂರೋ ಎಂದು ವೆಂಕಟೇಶಯ್ಯನವರು ಬೆಳಗಾಗ ಅಷ್ಟು ಹೊತ್ತಿನ ಬಸ್ಸಿನಲ್ಲಿಯೇ ಬೆಂಗಳೂರಿಗೆ ಬಂದರು.

ಬರುವ ವೇಳೆಗೆ ಒಂಬತ್ತೂವರೆ ಗಂಟೆಯಾಗಿತ್ತು.

ಬಂದವರೇ "ಏನಪ್ಪಾ. ಏನು ವಿಷಯ ? ಬರದಿದ್ದರೆ ಮುಳುಗಿಯೇ ಹೋಗುತ್ತದೆ ಎನ್ನುವ ಹಾಗೆ ಕಾಗದ ಬರೆದಿದ್ದೀಯಲ್ಲ" ಎಂದರು.

ತಾವು ಯಾವ ವಿಷಯವನ್ನು ಮಾತನಾಡುವುದಕ್ಕೆ ಅವರನ್ನು ಕರೆಸಿದ್ದರೋ ಆ ಮಾತನ್ನು ಆಡುವುದಕ್ಕೆ ಗುಂಡೂರಾಯರೂ ಆತುರರಾಗಿದ್ದರು. ಆದರೆ ಮನೆಯಲ್ಲಿ ಭಾಗ್ಯಳಾಗಲೀ ರಾಜಣ್ಣನಾಗಲೀ ಇರುವಾಗ ಯಾವ ಮಾತನ್ನೂ ಆಡುವುದು ಅವರಿಗೆ ಇಷ್ಟವಿರಲಿಲ್ಲ.

"ಹಸಿದ ಬ್ರಾಹ್ಮಣನನ್ನು ಮಾತನಾಡಿಸಬಾರದು–ಎಂದು ಕೇಳಿದ್ದೀಯೋ ಇಲ್ಲವೋ ? ಅವಸರವೇಕೆ ಪಡುತ್ತೀಯೆ. ಸ್ವಲ್ಪ ತಡೆ. ಊಟ ಮಾಡಿ ನಿದಾನವಾಗಿ ಕುಳಿತುಕೊಂಡು ಮಾತನಾಡೋಣ"

ಜರೂರೆಂದು ಕಾಗದ ಬರೆದು ಕರೆಸಿಕೊಂಡ ಮನುಷ್ಯ ವಿಷಯ ಹೇಳಲು ತಡಮಾಡುತ್ತಿರುವುದಕ್ಕೆ ಕಾರಣವಿಲ್ಲದೇ ಇರುವುದಿಲ್ಲವೆಂಬ ಭಾವನೆಯಿಂದ ವೆಂಕಟೇಶಯ್ಯನವರು ಸುಮ್ಮನಾದರು.

ಇಬ್ಬರೂ ಊಟಮಾಡಿ ತಾಂಬೂಲ ಚರ್ವಣಮಾಡುತ್ತಾ ಹಾಯಾಗಿ ಕುಳಿತುಕೊಂಡಿದ್ದಾಗ ವೆಂಕಟೇಶಯ್ಯನವರು "ಈಗ ಹಸಿದ ಬ್ರಾಹ್ಮಣನಲ್ಲ. ಹೊಟ್ಟೇ ತುಂಬಾ ಊಟ ಮಾಡಿದ್ದೇನೆ. ಏನು ವಿಷಯ ಹೇಳಪ್ಪಾ" ಎಂದರು.

ಎಲೆ ಅಡಿಕೆ ಜಗಿಯುತ್ತಿದ್ದು ಆ ರಸವು ಬಾಯಲ್ಲಿಯೇ ಇದ್ದಿತು. ಇನ್ನೂ ತಾಂಬೂಲ ರಸವನ್ನು ನುಂಗಿಯೇ ಇರಲಿಲ್ಲ.

ಅದರಿಂದ ಅಸ್ಪಷ್ಟವಾದ ಧ್ವನಿಯಿಂದ "ವಿಷಯವೇನಿರುತ್ತದೆ? ಇರುವುದೇ ಒಂದು. ನಮ್ಮ ಹುಡುಗಿಯ ಮದುವೆ. ಅದಾಗಿಬಿಟ್ಟರೆ–"ರಾಮಾ ಕೃಷ್ಣಾ" ಎಂದಿದ್ದು ಬಿಡುತ್ತೇನೆ'' ಎಂದರು.

"ಇದಕ್ಕಾಗಿ ಜರೂರು ಎಂದು ಬರೆದು, ಅಲ್ಲಿಂದ ಇಲ್ಲಿಗೆ ಓಡಿ ಬರುವಂತೆ ಮಾಡಿದೆಯಾ ?''

''ಜರೂರಲ್ಲದೇ ಏನು ? ಹುಡುಗಿಯು ದಿನದಿನಕ್ಕೆ ಸಣ್ಣವಳಾಗುತ್ತಿದ್ದಾಳೆ–ಎಂದಿದ್ದೀಯಾ ?''

"ಇಲ್ಲ. ನನಗೆ ಗೊತ್ತಿದೆ. ತಿಪ್ಪೆ ಬೆಳೆದಂತೆ ಹೆಂಗಸರು ಬೆಳೆದು ಬಿಡುತ್ತಾರೆ—ಎಂಬುದು ನನಗೆ ಗೊತ್ತಿಲ್ಲವೇ ?"

"ಸರಿ. ಆ ಮಾತೆಲ್ಲವೂ ಇರಲಿ. ಈಗ ಹೇಳು"

"ಈಗ ನಿಂತಲ್ಲಿ ನಿಂತಹಾಗೆ ಏನು ಹೇಳುವುದಯ್ಯಾ. ವರನನ್ನು ಹುಡುಕಬೇಕು. ವಧೂವರರು ಒಪ್ಪಿಕೊಳ್ಳಬೇಕು. ಅನಂತರ ಮದುವೆಯಾಗಬೇಕು. ಚಿಟಿಕೆ ಹೊಡೆಯುವುದರಲ್ಲಿ ಆಗುತ್ತದೆ—ಎಂದಿದ್ದೀಯಾ ?"

"ನೀನು ಏನು ಹೇಳಿದೆ, ಜ್ಞಾಪಕವಿದೆಯೇ ? ಶ್ರಾವಣಮಾಸದಲ್ಲಿ ಮದುವೆ ಮಾಡಿಬಿಡೋಣ ಎಂದು ಹೇಳಿದ್ದೆ. ಶ್ರಾವಣಮಾಸ ಹುಟ್ಟುವುದರೊಳಗಾಗಿ ನೀನೇ ಬರುತ್ತೀ ಎಂದುಕೊಂಡಿದ್ದೆ. ಬರಲಿಲ್ಲ. ಶ್ರಾವಣವೂ ಹುಟ್ಟಿತು. ಈಗಲೂ ನೀನು ತಾರಮ್ಮಯ್ಯ ಎನ್ನುತ್ತಿದ್ದರೆ——?"

"ಗುಂಡಣ್ಣ. ನೀನು ಹೇಳುತ್ತಿರುವುದು ವಿಚಿತ್ರವಾಗಿದೆ. ನನಗೊಬ್ಬ ಮಗನಿದ್ದ ಹಾಗೆ, ಅವನು ಮದುವೆ ವಯಸ್ಸಿಗೆ ಬಂದಿದ್ದ ಹಾಗೆ, ನಿನ್ನ ಮಗಳನ್ನು ಮಾಡಿಕೊಳ್ಳಲು ನಾನು ತಕರಾಯಿಸುತ್ತಿರುವ ಹಾಗೆ ಮಾತನಾಡುತ್ತೀಯಲ್ಲಾ"

"ಅದೆಲ್ಲಾ ಬೇಡಪ್ಪ. ಈ ಶ್ರಾವಣದಲ್ಲಿಯೇ ಮದುವೆ ಮಾಡಿಬಿಡಬೇಕು. ಅದಕ್ಕೇನಾದರೂ ಮಾಡುತ್ತೀಯಾ, ಹೇಳು''

"ಆಗಲೀನಪ್ಪ. ಎಲ್ಲಿಯಾದರೂ ವಿಚಾರಿಸೋಣ''

ಗುಂಡೂರಾಯರು ಏನೋ ಅಂದುಕೊಂಡು ಮಾತು ಆರಂಭಿಸಿದ್ದರೆ

ಅದು ಮತ್ತೊಂದು ಕಡೆಗೆ ತಿರುಗಿತು. ಹಾಗೆಯೇ ಅದನ್ನು ಬಿಟ್ಟುಬಿಡು ವುದು ಅವರಿಗೆ ಇಷ್ಟವಿರಲಿಲ್ಲ. ತೆಂಗಿನಕಾಯಿ ವ್ಯಾಪಾರಿಗಳ ಹಾಗೆ ಬಟ್ಟೆ ಯಲ್ಲಿ ಕೈಗಳನ್ನಾಡಿಸುತ್ತಾ ಹೊರಗೆ "ಹುಂ'' "ಉಹುಂ" ಎಂದು ಅರಚಿ ಕೊಳುವುದು ಪ್ರಯೋಜನವಿಲ್ಲವೆಂದೂ ಸ್ಪಷ್ಟವಾಗಿ ಮಾತನಾಡಿ ಬಿಡ ಬೇಕೆಂದೂ ನಿರ್ಧರಿಸಿದರು. ಆಗುವ ಹಾಗಿದ್ದರೆ ಆಗುತ್ತದೆ. ಇಲ್ಲದಿದ್ದರೆ ಇಲ್ಲ. ಅದಕ್ಕೇನಂತೆ ?

"ಬೆಕ್ಕಿಗೆ ಜ್ವರ ಬಂದ ಹಾಗೆ ಮಾತನಾಡುವುದು ಉಪಯೋಗವಿಲ್ಲ, ನೋಡು. ಈಗಲಾದರೂ ರಾಜಣ್ಣನೊಡನೆ ಮಾತನಾಡುತ್ತೀಯಾ ಎಂದು ಕೇಳಲು ನಾನು ನಿನ್ನನ್ನು ಕರೆಸಿದ್ದು''

"ಅವನ ವಿಷಯವನ್ನು ಮೊದಲೇ ಹೇಳಿದೆನಲ್ಲಪ್ಪ. ಈ ವರ್ಷ ಅವ ನಿಗೆ ಲಾಯರೀ ಪರೀಕ್ಷೆ ಮುಗಿಯುತ್ತದೆ. ಅದಾದ ಮೇಲೆ ಉದ್ಯೋಗ ಆರಂಭಿಸಬೇಕೆಂದು ಹೇಳುತ್ತಾನೆ. ಲಾಯರೀ ಪ್ಯಾಸು ಮಾಡಿದವನಿಗೆ ಉದ್ಯೋಗವೆಂದರೆ ಯಾರಾದರೂ ಕೊಡುವುದೇ, ಇವನು ತೆಗೆದುಕೊಳ್ಳು ವುದೇ ? ಪ್ಯಾಸಾಯಿತು—ಅಂತಾದ ಕೂಡಲೇ ಬೋರ್ಡು ಹಾಕುವುದು. ಅವೆರಡೂ ಒಮ್ಮೆಗೇ ಆಗುತ್ತವೆ. ಅದೊಂದಾಗಲೀ, ನನ್ನ ಶಕ್ತಿಯಿದ್ದಷ್ಟೂ ಒತ್ತಾಯಮಾಡಿ ನೋಡುತ್ತೇನೆ"

"ಇನ್ನೂ ಒಂದು ವರ್ಷ. ಆಗುವುದಿಲ್ಲಪ್ಪ. ಈಗಲೇ ಭಾಗ್ಯಳಿಗೆ ಇಪ್ಪತ್ತು ಎರಡಾಯಿತು. ಇಪ್ಪತ್ತು ಮೂರನೆಯದು ನಡೆಯುತ್ತಿದೆ. ಹಾಗಿ ರುವಾಗ ಇನ್ನೊಂದು ವರ್ಷ ಕಾಯುವುದು ಸಾಧ್ಯವಿಲ್ಲ''

''ಹಾಗಾದರೆ ನನ್ನನ್ನು ಏನು ಮಾಡಬೇಕೆಂದು ಹೇಳುತ್ತೀಯೆ ?"

"ಕೇಳುವುದು ಕೇಳಿ ಬಿಡು. ಆದರೆ ಆಗುತ್ತದೆ. ಹೋದರೆ ಹೋಗು ತ್ತದೆ"

''ಆದರೆ ಆಗುತ್ತದೆ. ಹೋದರೆ ಹೋಗುತ್ತದೆಂದು ಯಾವ ಕೆಲಸ ವನ್ನೂ ಮಾಡಬಾರದು''

"ಆಗಲೇಬೇಕೆಂಬ ಹಟವಿಟ್ಟುಕೊಂಡೇ ಕೇಳು ಅಂತಲೇ ನಾನು ಹೇಳು ತ್ತಿರುವುದು"

"ಇಲ್ಲಯ್ಯಾ. ಆ ಹುಡುಗ ಖಡಾಖಡಿಯಾಗಿ ಓದು ಮುಗಿಯುವವ ರೆವಿಗೂ ಮದುವೆಯಾಗುವುದಿಲ್ಲ—ಎಂದು ಹೇಳಿಬಿಟ್ಟಿದ್ದಾನೆ''

"ಅಂದರೆ ಆಗುವುದಿಲ್ಲವೆಂದು ಹೇಳುತ್ತೀಯೇನು ?"

"ನೋಡು, ಗುಂಡಣ್ಣ. ನೀನು ಅಕಾರಣವಾಗಿ ನನ್ನನ್ನು ನಿಷ್ಠೂ ರಕ್ಕೆ ಗುರಿ ಮಾಡುತ್ತಿದ್ದೀ''

''ನಿನಗೇನು, ಕೇಳಿ ಬಿಡು. ಅವನು ''ಆಗುವುದಿಲ್ಲ"–ಎನ್ನುವುದಾದರೆ ಹೇಳಿ ಬಿಡಲಿ. ಈ ಪ್ರಪಂಚದಲ್ಲಿ ಅವನೊಬ್ಬನೇ ಗಂಡೇ ? ಇನ್ನೆಲ್ಲಿಯಾ ದರೂ ನೋಡಿಕೊಳ್ಳುತ್ತೇನೆ. ಕುಂಟಿಯೋ, ಕುರುಡಿಯೋ ನಮ್ಮ ಹುಡು ಗಿಗೆ ಹೇಗೋ ಮದುವೆಯಾಗುತ್ತದೆ''

ಯಾರೂ ಮಾತನಾಡಲಿಲ್ಲ.

ಸ್ವಲ್ಪ ಹೊತ್ತು ಬಿಟ್ಟುಕೊಂಡು ಗುಂಡೂರಾಯರು "ನಿನ್ನ ಅಂತಿಮ ನಿರ್ಧಾರವೇನು ?" ಎಂದು ಕೇಳಿದರು.

''ಆಗಲೇ ಹೇಳಿದೆನಲ್ಲಪ್ಪ. ರಾಜಣ್ಣನೊಂದಿಗೆ ಮಾತನಾಡುವುದಾ ದರೆ ಅವನಿಗೆ ಈ ವರ್ಷ ಪರೀಕ್ಷೆಯಾಗುವವರೆವಿಗೆ ಕಾಯಬೇಕು. ಬೇರೇ ನೋಡಬೇಕೆಂದರೂ ನೋಡೋಣ. ಆದರೆ ಒಂದು ವಿಷಯವನ್ನು ಖಚಿತ ವಾಗಿ ತಿಳಿದುಕೋ. ಮಾರ್ಕೆಟ್ಟಿಗೆ ಹೋಗಿ ತರಕಾರೀ ತೆಗೆದುಕೊಂಡು ಬಂದ ಹಾಗೆ ವರಗಳನ್ನು ತಂದು ಬಿಡುವುದಕ್ಕಾಗುವುದಿಲ್ಲ. ಒಳ್ಳೇ ವರಗಳು ಸಿಕ್ಕಬೇಕು. ಅಂದರೆ ಬಹಳ ಕಷ್ಟ. ಯಾರ ಕೈಲೋ ಇಟ್ಟು ಆಮೇಲೆ ಪಡುಪಾಟಲು ಪಡುವುದಕ್ಕಿಂತ ನಮ್ಮ ಮಗಳು ನಮ್ಮ ಮನೆಯಲ್ಲಿಯೇ ಇರುವುದು ಸರ್ವಕ್ಷೇಮ"

"ಸರಿ, ಬಿಡಪ್ಪ. ಈ ವಿಷಯವನ್ನು ಕೇಳೋಣವೆಂದುಕೊಂಡೇ ನಿನ್ನನ್ನು ಬಾ—ಎಂದು ಬರೆದಿದ್ದು''

ಗುಂಡೂರಾಯರಿಗೆ ಪೂರ್ಣವಾಗಿ ಅಸಮಾಧಾನವಾಗಿಯೆಂದೂ, ಆತ ಆಡಿದ ಆ ಕಡೆಯ ಮಾತು ವಿರಸದ ಆರಂಭವೆಂದೂ, ವೆಂಕಟೇಶಯ್ಯ ಕಂಡು ಕೊಂಡರು. ಆ ವಿರಸ ಎಷ್ಟಿದೆ ಎಂದು ಅಳೆಯಲು ಅಪೇಕ್ಷಿಸಿ ಹೇಳಿದರು.

''ಊರಿನಲ್ಲಿ ಸ್ವಲ್ಪ ಕೆಲಸವಿತ್ತು. ಎಲ್ಲವನ್ನೂ ಹಾಗೆ ಹಾಗೆಯೇ ಬಿಟ್ಟು ಬಂದಿದ್ದೇನೆ. ಹಾಗಾದರೆ ನಾನು ಸಾಯಂಕಾಲ ಬಸ್ಸಿಗೆ ಪ್ರಯಾಣ ಮಾಡಬಹುದಲ್ಲ"

ಅದಕ್ಕೆ ಗುಂಡೂರಾಯರು ಉಭ–ಶುಭ ಎನ್ನಲಿಲ್ಲ.

ಆತ ಎದ್ದು ಒಳಗೆ ಹೋದನಂತರ ವೆಂಕಟೇಶಯ್ಯನವರು ಚೀಲದಿಂದ ಶಾಲೂ ತೆಗೆದು ಹೊದ್ದುಕೊಂಡು, ಕೈಚೀಲವನ್ನೇ ತಲೆಕೆಳಗಿಟ್ಟುಕೊಂಡು ಚಾಪೆಯ ಮೇಲೆ ಮಲಗಿಕೊಂಡುಬಿಟ್ಟರು.

ಮಾಮೂಲಾಗಿ ಮಧ್ಯಾಹ್ನ ಕಾಫೀ ಬಂದಿತು. ಅದನ್ನು ಕುಡಿದು ಕೈಚೀಲದಿಂದ ಷರಟು ತೆಗೆದು ಹಾಕಿಕೊಂಡು, ಅದರ ಮೇಲೆ ಶಾಲುವನ್ನು ಹೊದ್ದು ಹೊರಡಲು ಅನುವಾದರು.

ಆ ಸಮಯದಲ್ಲಿ ಗುಂಡೂರಾಯರು ಹೊರಗಡೆ ಚಾಪೆಯ ಮೇಲೆಯೇ ಕುಳಿತಿದ್ದರು. ಆತನೊಂದಿಗೆ ಮಾತನಾಡದೇ ವೆಂಕಟೇಶಯ್ಯ ಒಳಗೆ ಹೋದರು.

ವಿಶಾಲಾಕ್ಷಮ್ಮನವರನ್ನು ಕೈ ಸನ್ನೆ ಮಾಡಿ ಕರೆದು ಅವರಿಗೆ ಮಾತ್ರವೇ ಕೇಳಿಸುವಂತೆ ಮೆಲ್ಲನೆಯ ದನಿಯಿಂದ "ವಿಶಾಲಾಕ್ಷಮ್ಮ. ರಾಜಣ್ಣ ಸರ್ವವಿಧದಲ್ಲಿಯೂ ಭಾಗ್ಯಳಿಗೆ ತಕ್ಕ ವರ. ಅದನ್ನು ಮನಸ್ಸಿನಲ್ಲಿಟ್ಟುಕೊಂಡೇ ಅವನನ್ನು ಇಲ್ಲಿ ಬಿಟ್ಟಿದ್ದೇನೆ. ಯಾವ ಮಾತನ್ನಾಡುವುದಕ್ಕೂ ಇನ್ನೂ ಕಾಲ ಪಕ್ವವಾಗಿಲ್ಲ. ಗುಂಡಣ್ಣ ಎಳೇ ನಿಂಬೇಕಾಯಿಯಂತೆ ಆಡುತ್ತಿದ್ದಾನೆ. ನೀವು ರಾಜಣ್ಣನನ್ನು ಸರಿಯಾಗಿ ನೋಡಿಕೊಳ್ಳಬೇಕಮ್ಮಾ. ಅಂತಹ ಹುಡುಗ ಕೈ ತಪ್ಪಿ ಹೋದರೆ ಕಷ್ಟ'' ಎಂದು ಹೇಳಿ ಹೊರಗೆ ಬಂದರು.

ಹಜಾರದಲ್ಲಿ ಕುಳಿತಿದ್ದ ಗೆಳೆಯನೊಡನೆ "ಹೋಗಿ ಬರುತ್ತೇನಪ್ಪ" ಎಂದರು.

ಗುಂಡೂರಾಯರು ಸಮಾಧಾನದಿಂದ "ಸರಿಯಪ್ಪ – ಒಳ್ಳೆಯದು" ಎಂದು ಮಾತ್ರ ಹೇಳಿದರು.

ಕೈ ಚೀಲ ವೆಂಕಟೇಶಯ್ಯನವರ ಕೈಯಲ್ಲಿಯೇ ಇದ್ದಿತು. ಆತ ಹೊರಟು ಹೋದರು.

ರಾಜಣ್ಣನಿಗೆ ಒಂದಾದನಂತರ ಒಂದರಂತೆ ಆಶ್ಚರ್ಯ ಪರಂಪರೆಗಳು ಕಾದಿದ್ದುವು.

ಸಂಜೆ ಮನೆಗೆ ಬಂದೊಡನೆಯೇ ವೆಂಕಟೇಶಯ್ಯನವರಿಗಾಗಿ ಅವನ ಕಣ್ಣುಗಳು ಹುಡುಕಿದವು. ಆತ ಕಂಡುಬರಲಿಲ್ಲ. ಬೆಳಗಾಗ ಅವರನ್ನು ಸಾವಧಾನವಾಗಿ ನೋಡಿ ಮಾತನಾಡಲು ಅವಕಾಶವಿರಲಿಲ್ಲ. ಸ್ನಾನ ಮುಗಿಸಿ, ಊಟಮಾಡಿ ಕಾಲೇಜಿಗೆ ಹೋಗಬೇಕಾಗಿತ್ತು. ಅವಸರವಾಗಿದ್ದ. ಬಂದವರು ಹಾಗೆಯೇ ಹೊರಟು ಹೋಗುತ್ತಾರೆಯೇ, ಸಂಜೆ ಮಾತನಾಡೋಣವೆಂದುಕೊಂಡಿದ್ದ.

ಗುಂಡೂರಾಯರು ಮನೆಯಲ್ಲಿಯೇ ಇದ್ದರು. ವೆಂಕಟೇಶಯ್ಯನವರು ಇಲ್ಲ. ಅವರ ಕೈ ಚೀಲವೂ ಇರಲಿಲ್ಲ. ಆಶ್ಚರ್ಯವಾಯಿತು.

ಕಾಫೀತಿಂಡೀ ಕೊಡುತ್ತಿದ್ದಾಗ ವೆಂಕಟೇಶಯ್ಯನವರು ಎಲ್ಲಿ ಎಂದು ವಿಶಾಲಾಕ್ಷಮ್ಮನವರನ್ನು ಕೇಳಿದ.

"ಅವರಿಗೇನೋ ಜರೂರು ಕೆಲಸವಿದ್ದಿತಂತೆ. ಮಧ್ಯಾಹ್ನದ ಬಸ್ಸಿಗೇ ಹೊರಟು ಹೋದರು"

ಹೊರಟು ಹೋದರೆ? ಎಂದೂ ಆತ ಹೀಗೆ ಮಾಡುತ್ತಿರಲಿಲ್ಲ. ತನ್ನನ್ನು ನೋಡಿ ಮಾತನಾಡದೇ ಹೊರಟು ಹೋಗಬೇಕಾದರೆ ? ಒಂದು ವೇಳೆ ಅಂತಹ ಮುಖ್ಯವಾದ ಕೆಲಸವಿದ್ದಿದ್ದರೆ ಬೆಳಗಾಗಲೇ ಒಂದು ನಿಮಿಷ ನೋಡಿ ತಾವು ಸಂಜೆ ಹೊರಟು ಹೋಗುವುದಾಗಿ ಹೇಳುತ್ತಿದ್ದರು.

ಅಂತೂ ಎಲ್ಲವೂ ವಿಚಿತ್ರವಾಗಿದೆ. ಅವಸರವಾಗಿ ಹೊರಟು ಹೋಗುವ ವಿಷಯವನ್ನು ಅವರು ಬೆಳಗಾಗ ಹೇಳಲಿಲ್ಲವೆಂದರೆ ಸಾಯಂಕಾಲ ಹೊರಟು ಹೋಗುವುದು ಆಗ ನಿಶ್ಚಯವಾಗಿರಲಿಲ್ಲವೆಂದರ್ಥ. ಇನ್ನೂ ಒಂದೆರಡು ದಿನಗಳಾದರೂ ಅವರು ಇರುತ್ತೇವೆಂದುಕೊಂಡಿದ್ದರು—ಎಂದು ಅರ್ಥ. ಇರುತ್ತೇನೆಂದುಕೊಂಡವರು ಹಠಾತ್ತನೆ ಹೊರಟು ಹೋಗುವಂತಹ ಕಾರಣವಾದರೂ ಏನು ಪ್ರಾಪ್ತವಾಯಿತು ?

ಈ ವಿಷಯವನ್ನು ಯಾರೊಂದಿಗೆ ವಿಚಾರಿಸುವುದು. ಭಾಗ್ಯಳಿಗೆ ಗೊತ್ತಿದ್ದಿದ್ದರೆ ಹೇಳಿ ಬಿಡುತ್ತಿದ್ದಳು. ಆದರೆ ಅವಳಿಗೆ ಗೊತ್ತಿದ್ದ ಹಾಗಿಲ್ಲ. ತನ್ನೊಂದಿಗೇ ಅವಳು ಮನೆ ಬಿಟ್ಟಳು. ಪುನಃ ತನ್ನೊಂದಿಗೇ ಮನೆಗೆ ಬಂದಿದ್ದಾಳೆ.

ಇನ್ನು ಹೇಳಿದರೆ ಗುಂಡೂರಾಯರೋ ಅಥವಾ ವಿಶಾಲಾಕ್ಷಮ್ಮನವ

ರೋ ಹೇಳಬೇಕು. ಗುಂಡೂರಾಯರು ಮುಖ ಮುಂದೆ ಮಾಡಿಕೊಂಡು ಕುಳಿತಿದ್ದಾರೆ. ದುಗುಡವಾಗಿರುವಂತಿದೆ ಅವರ ಸ್ಥಿತಿ. ಏನೋ ಪರಿಸ್ಥಿತಿ ನೆಟ್ಟಗಿರುವಂತಿಲ್ಲ. ಅವರನ್ನು ಕೇಳಬಾರದು. ವಿಶಾಲಾಕ್ಷಮ್ಮ ಹೇಳುತ್ತಾರೆಯೋ ಏನೋ? ಅವರನ್ನು ಕೇಳುವುದು ಹೇಗೆ?

ಕುಡಿಯುತ್ತಿದ್ದ ಕಾಫಿಯ ಗ್ಲಾಸು ಕೆಳಗಿಡುತ್ತಾ "ಅಷ್ಟು ಅವಸರವಾಗಿ ಹೋಗಬೇಕಾದ ವಿಷಯವೇನಿದ್ದಿತೋ? ಬೆಳಗಾಗ ನೋಡಿದ್ದರಲ್ಲಿ ಅವರು ಹೊರಡಬೇಕೆಂದಿದ್ದ ಹಾಗೆ ಕಂಡುಬರಲಿಲ್ಲ" ಎಂದ.

"ಏನೋಪ್ಪ. ಗೊತ್ತಿಲ್ಲ. ಇದ್ದಕ್ಕಿದ್ದಂತೆಯೇ ಹೊರಟುಬಿಟ್ಟರು''

ಸರಿ. ಆಕೆಗೆ ವಿಷಯವನ್ನು ಹೇಳುವುದು ಇಷ್ಟವಿಲ್ಲವೆಂದುಕೊಂಡ.

ಮುಂದಿನ ಎರಡು ಮೂರು ದಿನಗಳಲ್ಲಿ ಬಹಳ ಬದಲಾವಣೆಯು ಕಂಡು ಬಂದಿತು. ಗುಂಡೂರಾಯರು ಸಾಧಾರಣವಾಗಿ ಮನೆಯಲ್ಲಿ ಇರುತ್ತಲೇ ಇರಲಿಲ್ಲ. ಬೆಳಗಾಗ ಕಾಫೀ ಕುಡಿದವರು ಮನೆ ಬಿಟ್ಟು ಹೊರಟು ಹೋಗುತ್ತಿದ್ದರು. ಎಷ್ಟು ಹೊತ್ತಿಗೆ ಮನೆಗೆ ಬರುತ್ತಿದ್ದರೋ? ಸಾಯಂಕಾಲವೂ ಅಷ್ಟೆ. ಅವನು ವಾಪ್ಸು ಬರುವ ವೇಳೆಗೆ ಅವರಿರುತ್ತಿರಲಿಲ್ಲ.

ಶನಿವಾರ ಭಾನುವಾರಗಳು ಬಂದುವು.

ಆಗ ಗುಂಡೂರಾಯರ ಕಾರ್ಯಕ್ರಮ ರಾಜಣ್ಣನಿಗೆ ಗೊತ್ತಾಯಿತು.

ಆ ಎರಡು ದಿನಗಳೂ ಬೆಳಗಾಗ ಮನೆ ಬಿಟ್ಟುಹೋದ ಗುಂಡೂರಾಯರು ಊಟಕ್ಕೆ ಬಂದುದು ಒಂದೂವರೆ ಗಂಟೆಯ ಮೇಲೆ.

ವಿಶಾಲಾಕ್ಷಮ್ಮನವರು ಹನ್ನೊಂದು ಗಂಟೆ ಹೊಡೆಯುತ್ತಲೇ ಹುಡುಗರನ್ನು ಊಟಕ್ಕೇಳುವಂತೆ ಹೇಳಿದರು. "ಅವರು ಬರಲಿ" ಎಂದು ರಾಜಣ್ಣ ಹೇಳಿದ್ದ. ಅವರು ಬರುವುದು ಒಂದೂವರೆ ಗಂಟೆಯಾಯಿತು. ಎಲ್ಲರೂ ಒಟ್ಟಿಗೇ ಕುಳಿತು ಊಟ ಮಾಡಿದರು. ಆಗ ಒಂದು ಮಾತೂ ಆಡಲಿಲ್ಲ ತಲೆ ಎತ್ತಿ ರಾಜಣ್ಣನ ಕಡೆಗೆ ನೋಡಲೂ ಇಲ್ಲ. ಊಟವಾದ ಮೇಲೆ ಸ್ವಲ್ಪ ಹೊತ್ತು ವಿಶ್ರಮಿಸಿಕೊಳ್ಳುತ್ತಿದ್ದ. ಮೂರು ಗಂಟೆಯಾಗುವುದಕ್ಕಿಲ್ಲ, ಹೊರಟು ಬಿಟ್ಟರು.

ಭಾನುವಾರವೂ ಇದೇ ರೀತಿಯಾಯಿತು. ಆದರೆ ಆ ದಿನ ಮಧ್ಯಾಹ್ನ ಅವರು ಹೊರಗೆ ಹೋಗಲಿಲ್ಲ.

ಅಷ್ಟೇ ಅಲ್ಲ. ರಾಜಣ್ಣನ ವಿಷಯದಲ್ಲಿ ಅವರ ವರ್ತನೆಗಳು ಬಹಳ ಬದಲಾವಣೆಯಾಗಿದ್ದುವು.

ಎಷ್ಟೇ ಯೋಚನೆ ಮಾಡಿದರೂ ಅವನು ಇದಕ್ಕೆಲ್ಲಾ ಕಾರಣಗಳನ್ನು ಊಹೆ ಮಾಡಲಾರದವನಾಗಿದ್ದ.

ತಾನು ಮನೆಯಲ್ಲಿರುವುದು ಇವರಿಗೆ ಇಷ್ಟವಿಲ್ಲವೇನೋ ಎಂದು ಸಹ ಅವನ ಮನಸ್ಸಿಗೆ ತೋರಿತು. ಆದರೆ ಹಾಗೆಂದುಕೊಳುವುದಕ್ಕೆ ಸಾಧ್ಯವಿರ ಲಿಲ್ಲ. ವಿಶಾಲಾಕ್ಷಮ್ಮನವರು ಮೊದಲಿನಷ್ಟೇ ಆದರದಿಂದ ನಡೆದುಕೊಳ್ಳು ತ್ತಿದ್ದರು. ಭಾಗ್ಯಳ ವರ್ತನೆಯಲ್ಲಿಯೂ ಅವನಿಗೆ ಯಾವ ಬದಲಾವಣೆಯೂ ಕಂಡುಬರಲಿಲ್ಲ.

ಅಂತೂ ಆ ಮನೆಯಲ್ಲಿ ಏನೋ ವ್ಯತ್ಯಾಸವಾಗಿದೆ. ಏನು ಮಾಡ ಬೇಕೆಂಬುದೇ ತೋರದೇ ರಾಜಣ್ಣ ಕುರುಡನಂತಾಗಿದ್ದ.

ವೆಂಕಟೇಶಯ್ಯನವರು ಹೊರಟು ಹೋದನಂತರ ಗುಂಡೂರಾಯರು ಸುಮ್ಮನೆ ಕುಳಿತುಕೊಳ್ಳಲಿಲ್ಲ. ಮಾರನೆಯ ದಿನ ಪ್ರಾತಃಕಾಲದಿಂದಲೇ ಗಂಡು ಹುಡುಕುವ ಪ್ರಯತ್ನವನ್ನು ಮೊದಲು ಮಾಡಿದರು. ತಮಗೆ ಪರಿಚ ಯವಿದ್ದವರ ಬಳಿಯಲ್ಲೆಲ್ಲಾ ಹೋಗಿ ಎಲ್ಲಿಯಾದರೂ ಗಂಡುಗಳಿವೆಯೇ ಎಂದು ವಿಚಾರಿಸಿದರು. ತಮಗೆ ಗುರುತಿದ್ದ ಮೂರು ನಾಲ್ಕು ಮಂದಿ ವಯಸ್ಸಾದ ವೈದಿಕ ಬ್ರಾಹ್ಮಣರನ್ನು ವಿಚಾರಿಸಿದರು.

ಈ ಪ್ರಯತ್ನದಲ್ಲಿಯೇ ನಾಲ್ಕಾರು ದಿನಗಳು ಕಳೆದುಹೋದವು.

ಆ ಸಮಯದಲ್ಲಿಯೇ ಐದಾರು ಮಂದಿ ವರಗಳನ್ನು ನೋಡಿದ್ದರು. ಯಾವುದೂ ಮನಸ್ಸಿಗೆ ಒಪ್ಪಿತವಾಗಲಿಲ್ಲ. ಕಡೆಗೆ ಕಷ್ಟಪಟ್ಟು ಒಬ್ಬ ವರ ಪರವಾಯಿಲ್ಲವೆನ್ನುವ ಸ್ಥಿತಿಗೆ ಬಂದಿತು. ಆ ಸ್ಥಿತಿಗೆ ಬಂದುದು ಬುಧವಾರದ ದಿನ ಸಂಜೆ.

ಗುರುವಾರದ ದಿನ ಪ್ರಾತಃಕಾಲ ಊಟಮಾಡಿ ಕಾಲೇಜಿಗೆ ಹೋಗಲು ಭಾಗ್ಯ ಸಿದ್ಧಳಾಗುತ್ತಿದ್ದ ಸಮಯದಲ್ಲಿ ಕರೆದು "ಈ ದಿನ ಸ್ವಲ್ಪ ಕೆಲಸವಿದೆ. ಕಾಲೇಜಿಗೆ ಹೋಗಬೇಡ" ಎಂದು ಹೇಳಿದರು.

ಅದೇ ವೇಳೆಯಲ್ಲಿ ರಾಜಣ್ಣನೂ ಕಾಲೇಜಿಗೆ ಹೊರಡಲು ಅನುವಾಗು

ತ್ತಿದ್ದ. ಪುಸ್ತಕಗಳನ್ನೆತ್ತಿಕೊಂಡು ಹಜಾರದವರೆವಿಗೆ ಬಂದ. ಭಾಗ್ಯ ಹೊರಗೆ ಬರುತ್ತಾಳೆಂದು ಗಳಿಗೆಯು ಕಾಲ ಜಗುಲಿಯ ಮೇಲೆಯೇ ನಿಂತು ನಿರೀಕ್ಷಿಸುತ್ತಿದ್ದ. ಗುಂಡೂರಾಯರು ಅವಳನ್ನು ಮಾತನಾಡಿಸುತ್ತಾ ನಿಲ್ಲಿಸಿ ಕೊಂಡರು. ಇನ್ನು ತಾನು ಅವಳಿಗಾಗಿ ಕಾಯುತ್ತಾ ನಿಂತಿರುವುದು ಸರಿ ಯಲ್ಲವೆಂದುಕೊಂಡವನು ಹೊರಟು ಹೋದ.

ಯಾಕೆ ಕಾಲೇಜಿಗೆ ಹೋಗಬಾರದೆಂದು ಭಾಗ್ಯ ತಂದೆಯನ್ನು ಪ್ರಶ್ನಿ ಸಿದಳು.

ಆದರೆ ರಾಜಣ್ಣ ಹೊರಟು ಹೋಗುವುದು ಕಣ್ಣಿಗೆ ಬೀಳುವವರೆವಿಗೆ ಗುಂಡೂರಾಯರು ಮಾತನಾಡಲಿಲ್ಲ. ಅನಂತರ ಹೇಳಿದರು.

"ಈ ದಿನ ಮಧ್ಯಾಹ್ನ ಗಂಡು ಬರುತ್ತಾನೆ. ನೀನು ಮನೆಯಲ್ಲಿಯೇ, ಇರಬೇಕು"

"ಈ ಗಂಡುಗಳು ಬಂದು ನೋಡಿಕೊಂಡು ಹೋಗುವುದು ನನಗೆ ಬೇಜಾರಾಗಿದೆ ಎಂದು ನಾನು ಎಷ್ಟು ಬಾರಿ ಹೇಳಿಲ್ಲಪ್ಪ"

"ಚೆನ್ನಾಗಿ ಹೇಳುತ್ತೀಯೆ ? ಗಂಡು ಬಂದು ನೋಡದಿದ್ದರೆ ಹೇಗೆ ? ನೋಡದೆಯೇ ಮದುವೆಯಾಗುತ್ತದೆಯೇ ?"

"ನೋಡುವುದೂ ಬೇಡ, ಮದುವೆಯಾಗುವುದೂ ಬೇಡ"

ಗುಂಡೂರಾಯರಿಗೆ ಕೋಪ ಬಂದಿತು.

ದುಗುಡದಿಂದ "ನೀನು ದಿನದಿನಕ್ಕೆ ಹೆಚ್ಚಿಕೊಂಡು ಹೋಗುತ್ತಿದ್ದೀಯೇ ಹೇಳಿದ ಮಾತು ಕೇಳು. ನೀನು ಈ ದಿನ ಕಾಲೇಜಿಗೆ ಹೋಗಕೂಡದು ಅಷ್ಟೇ" ಎಂದರು.

ಕೈಲಿದ್ದ ಪುಸ್ತಕಗಳನ್ನು ಕೆಳಗೆ ಹಾಕಿ ಭಾಗ್ಯಳು "ಕಾಲೇಜಿಗೆ ಹೋಗ ಬೇಡವೆಂದರೆ ಹೋಗುವುದಿಲ್ಲ. ಸೂಳೆಯರ ಮನೆಯಲ್ಲಿ ಹುಡುಗಿಯರನ್ನು ಕರೆಸಿ ನೋಡಿದಂತೆ ಈ ಗಂಡಸರು ನನ್ನನ್ನು ಬಂದು ನೋಡುವುದೂ ಬೇಡ. ಈ ಅಯೋಗ್ಯರ ಮನೆಗಳಲ್ಲಿ ನಾನು ಹೋಗಿ ತೊತ್ತಾಗಿ ದುಡಿಯುವುದೂ ಇಲ್ಲ" ಎಂದಳು.

"ಅದೊಂದೂ ಆಗುವುದಿಲ್ಲ. ಹೇಳಿದಂತೆ ಕೇಳದಿದ್ದರೆ ನಾನು ಕತ್ತು ಕಿವಿಚಿಕೊಂಡು ಪ್ರಾಣ ಬಿಡುತ್ತೇನೆ"

ತಂದೆ ಆ ಮಾತು ಹೇಳಿದನಂತರ ಭಾಗ್ಯ ಏನೂ ಮಾತನಾಡಲಿಲ್ಲ. ಮಾತಿನ ಬದಲು ಅವಳ ಕಣ್ಣುಗಳಲ್ಲಿ ನೀರು ಬಂದಿತು. ನೇರವಾಗಿ ಕೋಣೆಗೆ ಹೊರಟು ಹೋದಳು. ಅಲ್ಲಿ ಕುಳಿತು ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು.

ಆ ದಿನ ಮಧ್ಯಾಹ್ನ ನಾಲ್ಕು ಗಂಟೆಗೆಲ್ಲಾ ಗುಂಡೂರಾಯರು ವರನ ಆಗಮನಕ್ಕಾಗಿ ಕಾಯತೊಡಗಿದರು. ನಾಲ್ಕು ಗಂಟೆಗೆ ಸರಿಯಾಗಿ ಬರುತ್ತೇವೆಂದು ಹೇಳಿದವರು ಅರ್ಧ ಗಂಟೆ ಹೆಚ್ಚಾದರೂ ಬರಲಿಲ್ಲ. ಬರುಬರುತ್ತಾ ಅವರ ತವಕವು ಹೆಚ್ಚಾಯಿತು.

ಯಾರೋ ಜಗುಲಿಯ ಮೇಲೆ ಹತ್ತಿ ಬಂದಂತಾಯಿತು. ಹಜಾರದಲ್ಲಿ ಕುಳಿತಿದ್ದ ಅವರು ಆತುರದಿಂದ ಹೊರಗೆ ಹೋಗಿ ನೋಡಿದರು. ಅವರು ನಿರೀಕ್ಷಿಸಿದ್ದವರಲ್ಲ ಬಂದುದು, ಬಂದವನು ರಾಜಣ್ಣ. ನಿರಾಶರಾಗಿ ಆತ ಒಳಗೆ ಹೊರಟು ಹೋದರು.

ಕಡೆಯದೆರಡು ಪೀರಿಯಡ್ ಇಲ್ಲದೇ ಇದ್ದುದರಿಂದ ರಾಜಣ್ಣ ಕಾಲೇಜಿನಿಂದ ಬೇಗ ಹೊರಟಿದ್ದ. ಸ್ನೇಹಿತರೊಡನೆ ಸ್ವಲ್ಪ ಹೊತ್ತು ಕಳೆದಿದ್ದುದರಿಂದ ಅವನು ಬಂದುದು ತಡವಾಯಿತೆಂದೇ ಹೇಳಬೇಕು.

ಸುಮಾರು ಐದೂಕಾಲು ಗಂಟೆಯಾದನಂತರ ಜಟಕಾಗಾಡಿಯು ಬಂದಿತು. ಅದರಿಂದ ಆ ವರನೂ, ಅವನ ಪರಿವಾರದವರೂ ಬಂದಿಳಿದರು.

ಗುಂಡೂರಾಯರು ಹೊರಗೆ ಬಂದು ಗೌರವದಿಂದ ಅವರನ್ನು ಸ್ವಾಗತಿದರು. ಆ ಸಮಯದಲ್ಲಿ ವಿಶಾಲಾಕ್ಷಮ್ಮನವರೂ ಬಂದು ಜಗುಲಿಯ ಮೇಲೆ ನಿಂತುಕೊಂಡರು

ಜಟಕಾದಿಂದ ಇಳಿದವರಲ್ಲಿ ಮೂವರು ಗಂಡಸರು, ಒಬ್ಬಾಕೆ ಹೆಂಗಸು.

ಗಂಡಸರಲ್ಲಿ ಒಬ್ಬಾತನು ಗುಂಡೂರಾಯರಿಗೆ ಪರಿಚಿತನಾದವನೇ, ನಾರಣಪ್ಪನೆಂದು. ರಾಯರ ಸ್ನೇಹಿತರೊಬ್ಬರು ಆತನ ಪರಿಚಯ ಮಾಡಿಸಿದರು. ಆತನೇ ವರನನ್ನು ಗೊತ್ತು ಮಾಡಿದವನು. ಇನ್ನೊಬ್ಬಾತ ವರ. ಮತ್ತೊಬ್ಬ ಹೆಂಗಸೂ, ಗಂಡಸೂ ಯಾರೆಂಬುದು ಗುಂಡೂರಾಯರಿಗೂ ಗೊತ್ತಿರಲಿಲ್ಲ.

ಯಾರೋ ವರನ ಕಡೆಯವರೇ ಎಂದು ಒಳಗೆ ಕರೆದುಕೊಂಡು ಹೋಗಿ ಕೂರಿಸಿದರು.

ಒಳಗೆ ಹೋಗಿ ಕುಳಿತು ಕೊಂಡನಂತರ ವರನೊಂದಿಗೆ ಬಂದಿದ್ದ ಹೆಂಗಸು ಕೈಯ್ಯಲ್ಲಿದ್ದ ಕೈ ಚೀಲದಿಂದ ಹೂವು, ವೀಳೆಯದೆಲೆ, ಅಡಿಕೆ, ಕಿತ್ತಲೇ ಹಣ್ಣುಗಳನ್ನು ತೆಗೆದು ಹೊರಗಿಟ್ಟಳು.

ಅನಂತರ ನಾರಣಪ್ಪನು "ನಿಮಗೆ ಇವರ ಪರಿಚಯ ಮಾಡಿಸುವ ಅವಕಾಶವಾಗಿರಲಿಲ್ಲ. ನಮ್ಮ ಆನಂದರಾಯರಿದ್ದಾರೆಯಲ್ಲಾ, ಅವರ ಭಾವನವರು. ವಸಂತಯ್ಯನವರೆಂದು. ಅಲ್ಲಿ ಕುಳಿತಿದ್ದಾರೆಯಲ್ಲಾ. ಅವರು ಗಿರಿಜಮ್ಮನವರೆಂದು. ಆನಂದರಾಯರ ತಂಗಿ" ಎಂದು ಹೇಳಿದ.

ಆನಂದರಾಯರಾರೆಂದು ನಾರಣಪ್ಪ ಬಾಯಿ ಬಿಟ್ಟು ಹೇಳಬೇಕಾಗಿರಲಿಲ್ಲ. ಆತನೇ ವರ.

ಅವರು ಹಾಗೆ ಹೇಳಿದ ಮೇಲೆ ಏನಾದರೊಂದು ಮಾತನಾಡಬೇಕಲ್ಲ-ಎಂದು ಗುಂಡೂರಾಯರು "ನಾನು ಮನೆಗೆ ಬಂದಿದ್ದಾಗ ಇವರುಗಳಿರಲಿಲ್ಲ" ಎಂದರು.

ನಾರಣಪ್ಪನೇ ಬಾಯಿ ಹಾಕಿ "ಅವರು ಆ ಮನೆಯಲ್ಲಿಲ್ಲ. ವಿಲ್ಸನ್ ಗಾರ್ಡನ್ನಲ್ಲಿ ನಾವು ನೋಡಿದೆವಲ್ಲಾ, ಆ ಮನೆಯ ಹತ್ತಿರದಲ್ಲಿಯೇ ಇದ್ದಾರೆ, ಹೆಚ್ಚುಕಡಿಮೆ ಆನಂದರಾಯರು ಇರುವುದೂ ಅಲ್ಲಿಯೇ. ಊಟಗೀಟವೆಲ್ಲವೂ ಅಲ್ಲಿಯೇ. ಮನೆಯಲ್ಲಿ ದೀಪಹಚ್ಚದೇ ಇರಬಾರದೆಂದು ನಾವು ನೋಡಿದ ಮನೆಯಲ್ಲಿ ಕುಳಿತುಕೊಳ್ಳುವುದೂ, ಮಲಗಿಕೊಳ್ಳುವುದೂ ಮಾಡುತ್ತಾರೆ" ಎಂದ.

ಗುಂಡೂರಾಯರು ಏನೋ ಮಾತನಾಡಬೇಕು ಎಂದಿರುವಷ್ಟರಲ್ಲಿಯೇ ವಸಂತಯ್ಯನು "ಹೊರಗಡೆ ಬೀದೀ ಕೋಣೆಯಲ್ಲಿ ಯಾರೋ ಕುಳಿತುಕೊಂಡಿದ್ದಾರೆಯಲ್ಲಾ, ಅವರಾರು ?" ಎಂದ.

"ಆ ಕೋಣೆಯಲ್ಲಿ ಬಾಡಿಗೆಗಿರುವವನು" ಎಂದು ಹೇಳಬೇಕೆಂದು ತೋರಿತು. ಹೇಳುವುದರೊಳಗಾಗಿ ಅವರ ಮನಸ್ಸಿನಲ್ಲಿ ವಿವಿಧವಾದ ಆಲೋಚನೆಗಳು ತೋರಿದವು. ವಯಸ್ಸಾದ ಹುಡುಗಿಯನ್ನು ಮನೆಯಲ್ಲಿಟ್ಟುಕೊಂಡು ಬೀದೀರೂಮನ್ನು ಯಾರಿಗೋ ಬಾಡಿಗೆಗೆ ಕೊಟ್ಟಿದ್ದೇನೆಂದು ಹೇಳಲು ಅವರಿಗೆ ಸಂಕೋಚವಾಯಿತು.

ಕೂಡಲೇ ತಿದ್ದಿಕೊಂಡು "ಅವರು ನಮ್ಮ ಸಮೀಪದ ಬಂಧುಗಳು'' ಎಂದರು.

ನಾರಣಪ್ಪನು ಸುಮ್ಮನಿರದೇ ''ಕರೆಯಿರಿ. ಅವರೂ ವರನನ್ನು ನೋಡಿರಲಿ" ಎಂದ.

ಗುಂಡೂರಾಯರು ವಿಧಿಯಿಲ್ಲದೇ ''ರಾಜಣ್ಣ. ಬಾಪ್ಪ" ಎಂದು ಕರೆದರು.

ರಾಜಣ್ಣನೂ ಬಂದು ಕುಳಿತುಕೊಂಡ.

ನಾರಣಪ್ಪ ಪುನಃ ಬಂದಿದ್ದವರ ಪರಿಚಯವನ್ನೆಲ್ಲಾ ರಾಜಣ್ಣನಿಗೆ ಹೇಳಿದ.

ಗುಂಡೂರಾಯರು ಲೋಕಾಭಿರಾಮವಾಗಿ "ವಸಂತಯ್ಯನವರು ಏನು ಮಾಡುತ್ತಿದ್ದಾರೆಯೋ ?" ಎಂದರು.

"ಅವರು ಸಂಗೀತಗಾರರು''

ನಾರಣಪ್ಪ ಹೇಳಿದುದನ್ನು ವಿವರಿಸುತ್ತಾ ವಸಂತಯ್ಯ "ನಾರಣಪ್ಪನವರು ಬಹಳ ದೊಡ್ಡ ಮಾತು ಹೇಳುತ್ತಾರೆ. ನಾನು ಸಾಧಾರಣವಾದ ಸಂಗೀತದ ಮೇಷ್ಟರು. ಅವರಿವರಿಗೆ ಪಾಠ ಹೇಳುತ್ತೇನೆ. ದೇವರು ಕೊಡುವುದರಲ್ಲಿ ಜೀವನ ಮಾಡುತ್ತಿದ್ದೇನೆ. ನಮ್ಮ ಭಾವಮೈದುನನ ವಿಷಯವೆಲ್ಲವೂ ನಿಮಗೆ ತಿಳಿದೇ ಇರಬೇಕು. ನಾರಣಪ್ಪನವರು ಹೇಳಿಯೇ ಇರುತ್ತಾರೆ" ಎಂದ.

''ನಿಮ್ಮ ಬಾಯಿಯಲ್ಲಿಯೇ ಹೇಳಿಬಿಡಿ, ಸ್ವಾಮಿ. ನಾನು ಹೇಳಿದ್ದ ಮಾತ್ರಕ್ಕೆ ನೀವು ಹೇಳಿದಂತೆ ಆಗುತ್ತದೆಯೇ ? ಅದೂ ಅಲ್ಲದೇ ಮನೆಯಲ್ಲಿ ಮಿಕ್ಕವರಿಗೂ ತಿಳಿದಂತೆ ಆಗುತ್ತದೆ" ಎಂದ ನಾರಣಪ್ಪ.

ನಾರಣಪ್ಪನಿಂದಲೂ ಆನಂದರಾಯನಿಂದಲೂ ಕೂಲಂಕುಶವಾಗಿ ವಿಷಯಗಳೆಲ್ಲವನ್ನೂ ಗುಂಡೂರಾಯರು ತಿಳಿದುಕೊಂಡಿದ್ದರು.

ಆದರೂ ತಾವು ತಿಳಿದುಕೊಂಡಿರುವುದಕ್ಕೂ ವಸಂತಯ್ಯ ಹೇಳುವುದಕ್ಕೂ ಏನಾದರೂ ವ್ಯತ್ಯಾಸ ಬರುತ್ತದೆಯೇ ಎಂದು ನೋಡುವ ಕುತೂಹಲದಿಂದ ಸುಮ್ಮನಿದ್ದರು.

ವಸಂತಯ್ಯನು "ನನ್ನ ಭಾವಮೈದ ಕೊಳ್ಳೇಗಾಲದವರು. ನಮ್ಮ

ಹೂವನವರೂ ಅಲ್ಲಿಯವರೇ. ನರಸಿಂಗರಾಯರೆಂದು ಅವರ ಹೆಸರು. ಮೊದಲಿನಿಂದಲೂ ಇವರುಗಳದು ಸೀರೆಗಳ ವ್ಯಾಪಾರ. ನರಸಿಂಗರಾಯರು ಸ್ವತಃ ಆರೇಳು ಮಗ್ಗಗಳನ್ನು ಹಾಕಿಸಿದ್ದರು. ಅವರು ಕಾಲವಾಗಿ ನಾಲ್ಕು ವರ್ಷಗಳಾದುವು ನನ್ನ ಭಾವಮೈದುನ ಏಕಾಕಿಯಾದುದರಿಂದ ನೋಡಿ ಕೊಳ್ಳಲಾಗುವುದಿಲ್ಲವೆಂದು ಈಗ ಅವುಗಳನ್ನೆಲ್ಲಾ ಲೀಜ್‌ಗೆ ಕೊಟ್ಟುಬಿಟ್ಟಿ ದ್ದಾರೆ. ಕೊಳ್ಳೇಗಾಲದ ಸೀರೆಗಳನ್ನು ತರಿಸಿ ಹೋಲ್‌ಸೇಲ್ ವ್ಯಾಪಾರ ವನ್ನುಮಾಡುತ್ತಾರೆ. ವಿಲ್ಸನ್‌ಗಾರ್ಡನ್‌ನಲ್ಲಿ ಮನೆಮಾಡಿದ್ದಾರೆ. ಅದನ್ನು ನೀವು ನೋಡಿಯೇ ಇದ್ದೀರಿ'' ಎಂದರು.

"ನೀವು ಯಾವುದೋ ಸರಕಾರೀ ಕೆಲಸವಲ್ಲಿದ್ದುದಾಗಿ ಹೇಳಿದಿರಲ್ಲವೇ ? ಅದಾವ ಕೆಲಸ?" ಎಂದು ಗುಂಡೂರಾಯರು ಆನಂದರಾಯನನ್ನು ಕೇಳಿದರು.

ಆ ಮಾತು ದೃಢಪಡಿಸಿಕೊಳ್ಳುವುದಕ್ಕಾಗಿ ಕೇಳಿದರು.

"ನಾನು ಕೋಆಪರೇಟೀವ್ ಸೊಸೈಟಿಗಳ ಇನ್‌ಸ್ಪೆಕ್ಟರ್ ಕೆಲಸದಲ್ಲಿದ್ದೆ. ನನ್ನ ತಂದೆಯವರು ಕಾಯಿಲೆ ಬಿದ್ದು ನಾನು ಅವರ ಶಿಶ್ರೂಷೆ ಮಾಡ ಬೇಕಾಗಿ ಬಂದಿತು. ಅದೂ ಅಲ್ಲದೇ ಈಗಿನ ಕಾಲದಲ್ಲಿ ಬ್ರಾಹ್ಮಣರಿಗೆ ಸರ ಕಾರೀ ಕೆಲಸಗಳಲ್ಲಿ ಭರಕತ್ತಿಲ್ಲ, ನೋಡಿ, ಅದರಿಂದ ಬಿಟ್ಟುಬಿಟ್ಟೆ. ಆದರೆ ಹುಟ್ಟಿಸಿದ ದೇವರು ಹುಲ್ಲುಮೇಯಿಸುವುದಿಲ್ಲ. ಏನೋ ಅಷ್ಟು ಇಷ್ಟು ಸಂಪಾದನೆ ಈ ಸೀರೇ ವ್ಯಾಪಾರಲ್ಲಿಯೇ ಆಗುತ್ತಿದೆ''

"ಏನೇನೋ ಮಾತನಾಡಿಸುತ್ತಾ ಕುಳಿತುಕೊಂಡು ಬಿಟ್ಟೆ. ಒಂದಿಷ್ಟು ಕಾಫಿಯನ್ನಾದರೂ ಕೊಡುತ್ತಾರೆಯೇನೋ ನೋಡುತ್ತೇನೆ" ಎಂದು ಹೇಳು ತ್ತಾ ಗುಂಡೂರಾಯರು ಮೇಲೆದ್ದರು.

ಹಿರಿಯರಾದ ಗುಂಡೂರಾಯರು ಕಾಫೀ ತೆಗೆದುಕೊಂಡು ಬಂದು ಎಲ್ಲ ರಿಗೂ ಕೊಡುವುದು ರಾಜಣ್ಣನಿಗೆ ಉಚಿತವಾಗಿ ಕಂಡುಬರಲಿಲ್ಲ. ಅದರಿಂದ ತಾನೇ ಎದ್ದು ಹೋದ.

ಅಡಿಗೆ ಮನೆಯಲ್ಲಿ ಆರೇಳು ಗ್ಲಾಸುಗಳಿಗೆ ಕೊಳದಪ್ಪಲೆಯಿಂದ ಬಿಸಿ ಬಿಸಿಯಾದ ಕಾಫೀ ಹಾಕುತ್ತಿದ್ದರು. ರಾಜಣ್ಣ ಗೋಡೆಗೆ ಹೊಡೆದಿದ್ದ ತಟ್ಟೆ ಸ್ಟಾಂಡಿನಿಂದ ಒಂದು ಸ್ಟೈನ್‌ಲೇಸ್ ಸ್ಟೀಲ್ ತಟ್ಟೆಯನ್ನು ತೆಗೆದುಕೊಂಡು ಅದರಲ್ಲಿದ್ದ ಲೋಟಗಳೆಲ್ಲವನ್ನೂ ಇಡತೊಡಗಿದ.

ಗುಂಡೂರಾಯರು ಅದನ್ನು ನೋಡುತ್ತಾ ನಿಂತಿದ್ದರು. ಅವರು ರಾಜಣ್ಣನಿಂದ ಯಾವ ಬಗೆಯಾದ ಸಹಕಾರವನ್ನೂ ತೆಗೆದುಕೊಳ್ಳಲು ತಯಾರಾಗಿರಲಿಲ್ಲ. ಆ ವಸಂತಯ್ಯ-ವರನ ಭಾವ-ಅಕಸ್ಮಾತ್ ರಾಜಣ್ಣನನ್ನು ಒಳಗೆ ಕರೆದುಬಿಟ್ಟ. ಇಲ್ಲದಿದ್ದರೆ ಖಂಡಿತವಾಗಿ ಅವನು ಒಳಗೆ ಬರಲು ಗುಂಡೂರಾಯರು ಅವಕಾಶ ಕೊಡುತ್ತಿರಲಿಲ್ಲ. ಈಗಲೂ ಸಹ "ನೀನು ಕಾಫೀ ತೆಗೆದುಕೊಂಡು ಹೋಗುವುದು ಬೇಡ. ನಾನೇ ತೆಗೆದುಕೊಂಡು ಹೋಗುತ್ತೇನೆ'' ಎಂದು ಹೇಳಬೇಕೆಂದು ಬಾಯಿಗೆ ಬಂದುಬಿಟ್ಟಿತ್ತು. ಅವನು ಏನಾದರೂ ತಿಳಿದುಕೊಳ್ಳಬಹುದು-ತಿಳಿದುಕೊಳ್ಳಲಿ. ಅವನು ಏನು ತಿಳಿದುಕೊಂಡರೆ ತಾನೇ ನಷ್ಟವೇನು ? ಆದರೆ ಹೊರಗಡೆ ವರನೂ, ಅವನ ಕಡೆಯುವರೂ ಕುಳಿತುಕೊಂಡಿದ್ದಾರೆ. ಅವರ ಎದುರಿಗೆಲ್ಲಾ ಈ ರೀತಿಯಾಗಿ ಮಾತನಾಡುವುದು ಚೆನ್ನಾಗಿರುವುದಿಲ್ಲ, ಆದರಿಂದ ಸುಮ್ಮನಾದರು.

ಅವನು ತಟ್ಟೆಯಲ್ಲಿ ಗ್ಲಾಸುಗಳನ್ನು ಇಡುತ್ತಿದ್ದಂತೆಯೇ ಹೊರಗೆ ಹೊರಟು ಹೋದರು.

ರಾಜಣ್ಣ ತಟ್ಟೆಯನ್ನು ತೆಗೆದುಕೊಂಡು ಹೋಗಿ ಹಜಾರದಲ್ಲಿರಿಸಿ ಎಲ್ಲರಿಗೂ ಒಂದೊಂದು ಲೋಟಾ ಕಾಫಿಯನ್ನು ಕೊಟ್ಟ.

ಅವನು ತಂದಿದ್ದುದು ಐದೇ ಲೋಟಾ. ಎಲ್ಲರ ಮುಂದೆಯೂ ಇಟ್ಟ ನಂತರ ತಟ್ಟೆಯಲ್ಲಿ ಲೋಟಗಳೇ ಉಳಿದಿರಲಿಲ್ಲ.

ಅತಿಥಿಗಳೆಲ್ಲರೂ ಕಾಫಿಯನ್ನು ಕುಡಿಯಲು ಮೊದಲು ಮಾಡಿದರು.

ಇಲ್ಲಿ ಕಾಫಿಯಿಲ್ಲದಿದ್ದರೆ ಮನೆಯಲ್ಲಿ ಕಾಫಿಯಿಲ್ಲದೇ ಇರುತ್ತದೆಯೇ ? ನಾರಣಪ್ಪನಿಗೆ ಏನಾದರೊಂದು ಸಿಕ್ಕಿದರೆ ಅದನ್ನೇ ಕಾರಣವಾಗಿ ಮಾಡಿಕೊಂಡು ಮಾತನಾಡುವುದು ಅಭ್ಯಾಸ.

ಆತ ಕಾಫಿಯನ್ನು ಕುಡಿಯುತ್ತಾ "ನಿಮಗೆ ಕಾಫೀ ?" ಎಂದ.

ರಾಜಣ್ಣ ನಗುತ್ತಾ "ಕಾಫಿಗೇನು ? ಬೇಕಾದಷ್ಟಿದೆ. ತರುತ್ತೇನೆ" ಎಂದು ಹೇಳಿದವನೇ ಮತ್ತೊಂದು ಲೋಟಾ ತೆಗೆದುಕೊಂಡು ಬಂದು ಕುಳಿತು ಕುಡಿಯತೊಡಗಿದ.

ಕಾಫಿಯನ್ನು ಕುಡಿದನಂತರ ತನ್ನದೂ ಸೇರಿಸಿ ಎಲ್ಲ ಲೋಟಗಳನ್ನೂ ಒಳಗೆ ತೆಗೆದುಕೊಂಡು ಹೋಗಿಟ್ಟು ಪುನಃ ಬಂದು ಕುಳಿತ.

ಸೌಜನ್ಯಪೂರಿತವಾದ ಮಾತುಕತೆಗಳೂ, ಕಾಫಿ ತೆಗೆದುಕೊಂಡುದೂ

ಆದನಂತರ ವರ ನಾರಣಪ್ಪನ ಕಡೆ ನೋಡಿದ. ನಾರಣಪ್ಪ ಗುಂಡೂರಾಯರ ಕಡೆಗೆ ನೋಡಿದರು.

ಕನ್ಯೆಯನ್ನು ಕರೆಸಬೇಕೆಂಬುದು ಆ ನೋಟಕ್ಕೆ ಅರ್ಥವೆಂದುಕೊಂಡ ಗುಂಡೂರಾಯರು "ವಿಶಾಲಾ. ಭಾಗ್ಯಳನ್ನು ಕರೆದುಕೊಂಡು ಬಾ" ಎಂದರು.

ಭಾಗ್ಯಳಿಗೆ ಇಷ್ಟವಿಲ್ಲದಿದ್ದರೂ ಅವರಮ್ಮ ಒತ್ತಾಯದಿಂದ ಅವಳನ್ನು ಸಿದ್ಧಗೊಳಿಸಿದ್ದರು. ಐದು ಬೆಟ್ಟಗಲ ಜರಿಯಿರುವ ರೇಷ್ಮೇ ಸೀರೆಯನ್ನೇ ಉಟ್ಟುಕೊಳ್ಳಬೇಕೆಂದು ಬಲಾತ್ಕಾರ ಮಾಡಿದ್ದರು.

ವಿಶಾಲಾಕ್ಷಮ್ಮನವರು ಒಳಗಿನ ಕೋಣೆಗೆ ಹೋಗಿ ಮಗಳನ್ನು ಎಬ್ಬಿಸಿ ಕರೆತಂದು "ಹೋಗಿ ಕುಳಿತುಕೋ" ಎಂದು ಹೇಳಿ, ಹೊಸಲಿನ ಬಳಿಯಲ್ಲಿಯೇ ನಿಂತುಕೊಂಡರು.

ಗಂಡಸರೊಡನೆ ಕುಳಿತುಕೊಂಡಿದ್ದರೂ ಗಿರಿಜಮ್ಮ ಬಂದು ಪಕ್ಕವಾಗಿ ಕುಳಿತುಕೊಂಡಿದ್ದಳು. ಭಾಗ್ಯ ಬಾಗಿಲಿನ ಬಳಿಗೆ ಬರುತ್ತಲೇ ಗಂಡಸರು ಮತ್ತಷ್ಟು ಸರಿದು ಸ್ಥಳವನ್ನು ಬಿಟ್ಟರು. ಆ ಸ್ಥಳದಲ್ಲಿ ಗಿರಿಜಮ್ಮನ ಬಳಿಯಲ್ಲಿ ಭಾಗ್ಯ ಬಂದು ಕುಳಿತುಕೊಂಡಳು.

ಕುಳಿತುಕೊಂಡವಳೇ ಅಲ್ಲಿ ಕುಳಿತಿದ್ದವರನ್ನೆಲ್ಲಾ ಒಂದು ಬಾರಿ ಅವಲೋಕಿಸಿದಳು. ಇಬ್ಬರು ಹೊಸಬರಾದ ಗಂಡಸರಲ್ಲಿ ವರನು ಯಾರೆಂದು ಕಂಡುಕೊಳ್ಳುವುದು ಅವಳಿಗೆ ಕಷ್ಟವಾಗಲಿಲ್ಲ.

ವರನು ಕೃಶಾಂಗನಾಗಿ ಉದ್ದವಾಗಿದ್ದ. ಶ್ಯಾಮಲವೆಂದು ಹೇಳಿಕೊಂಡರೂ ಮನುಷ್ಯ ಕಪ್ಪು. ದೇಹದಂತೆಯೇ ಮುಖವೂ ಉದ್ದ. ಸಿಗರೇಟು ಸೇದಿಸೇದಿ ತುಟಿಗಳು ಕೆನ್ನೆಗಳ ಬಣ್ಣವಾಗಿಯೇ ಇದ್ದವು. ವಯಸ್ಸು ಮೂವತ್ತೈದರ ಹತ್ತಿರ ಹತ್ತಿರವಾಗಿತ್ತು.

ಭಾಗ್ಯಳಿಗೆ ಮದುವೆಯೇ ಇಷ್ಟವಿರಲಿಲ್ಲ. ಅದರ ಮೇಲೆ ವರನೋ ಈ ರೀತಿಯಾಗಿದ್ದಾನೆ. ಇನ್ನು ಯಾವ ಆಸಕ್ತಿಯೂ ಉಳಿಯದೇ ಅವನ ತಶಿರಳಾಗಿ ಕುಳಿತುಕೊಂಡಳು.

ಹುಡುಗಿಯನ್ನು ನೋಡಿದ ಕೂಡಲೇ ಆನಂದರಾಯನಿಗೆ ಮುಖದಲ್ಲಿ ಮೂಡಿ ಬಂದ ಭಾವವನ್ನು ಗಮನಿಸಿದರೆ ಪೂರ್ಣವಾಗಿ ಅವನು ಹುಡುಗಿ ಒಪ್ಪಿಕೊಂಡಿದ್ದನೆಂಬುದಾಗಿ ಹೇಳಬಹುದಾಗಿತ್ತು.

ಒಂದು ನಿಮಿಷ ಕಾಲ ನಾರಣಪ್ಪನು ಅದು ಹೇಗೆ ಸುಮ್ಮನಿದ್ದನೋ ದೇವರಿಗೇ ಗೊತ್ತು. ಅನಂತರ ಬಡಬಡನೆ ಹೇಳಿದ.

“ಆನಂದರಾಯರೇ! ಕನ್ಯೆಯು ಸತ್ಕುಲ ಪ್ರಸೂತಳು. ಇಂಟರ್ ಮುಗಿಸಿ, ಕಾಲೇಜಿಗೆ ಹೋಗುತ್ತಿದ್ದಾಳೆ. ಸಂಗೀತವೂ ಬರುತ್ತದೆ. ಹುಡುಗಿಯ ಮುಖದಲ್ಲಿ ಲಕ್ಷ್ಮಿಯ ಕಳೆಯಿದೆ. ನನ್ನನ್ನ ಕೇಳಿದರೆ ಧಾರಾಳವಾಗಿ ಒಪ್ಪಿಕೊಳ್ಳಬಹುದೆಂದು ಹೇಳುತ್ತೇನೆ”

ತಾನು ಹೇಳುವುದಕ್ಕಿಂತ ಮೊದಲೇ ವರನು ಒಪ್ಪಿಕೊಂಡಿದ್ದಾನೆಂಬುದು ಅವನಿಗೆ ಗೊತ್ತಾಗಲಿಲ್ಲವೋ ಏನೋ ?

ಆನಂದರಾಯನು ತನ್ನ ಭಾವನನ್ನು ಉದ್ದೇಶಿಸಿ “ಸಂಗೀತ ಬರುತ್ತದೆಂದು ಹೇಳುತ್ತಾರೆಯಲ್ಲಾ. ಒಂದೆರಡು ಕೀರ್ತನೆಗಳನ್ನು ಹೇಳಿಸಬಾರದೇ?” ಎಂದ.

ವಸಂತಯ್ಯನು ಸಂಗೀತದ ಮೇಷ್ಟರು ತಾನೇ. ಹುಡುಗಿ ಹೇಗೆ ಹಾಡುತ್ತಾಳೆಯೋ ಕೇಳೋಣವೆಂದು ಅವನಿಗೂ ಇತ್ತು. ಅವನು ವರನ ಅಭಿಪ್ರಾಯವನ್ನೂ ಸೂಚಿಸಿದ.

ದೊಡ್ಡ ಮನಸ್ಸು ಮಾಡಿ ಮಗಳು ಇಲ್ಲಿಯವರೆವಿಗೆ ಬಂದು ಕುಳಿತಿರುವುದೇ ದೊಡ್ಡದು. ಇನ್ನು ಹಾಡು ಎಂದರೆ ಹಾಡುತ್ತಾಳೆಯೆ ? ಆ ವಿಷಯ ಗುಂಡೂರಾಯರಿಗೆ ಚೆನ್ನಾಗಿ ಗೊತ್ತಿತ್ತು.

ಅದರಿಂದವರು “ಹಾಡಬಹುದು. ಚೆನ್ನಾಗಿಯೇ ಹಾಡುತ್ತಾಳೆ. ಆದರೆ ಮೂರು ನಾಲ್ಕು ದಿನಗಳಿಂದ ನೆಗಡಿಯಾಗಿ ಕೊರಳು ಹಿಡಿದುಕೊಂಡಿದೆ. ಈಗ ಕ್ಷಮಿಸಬೇಕು. ಇನ್ನೊಂದು ಬಾರಿ ಹಾಡುತ್ತಾಳೆ” ಎಂದು ಸಮಾಧಾನವನ್ನು ಹೇಳಿದರು.

ವರನ ಕಡೆಯವರು ಹಾಡಲೇಬೇಕೆಂದು ಬಲಾತ್ಕಾರ ಮಾಡಲಿಲ್ಲ

ಪುನಃ ನಾರಣಪ್ಪನು “ನಿಮ್ಮ ಅಭಿಪ್ರಾಯವು ಏನು ?” ಎಂದು ವರನ ಕಡೆ ನೋಡಿದ.

ವಸಂತಯ್ಯನಿಗೇನೂ ಹೆಚ್ಚು ವಯಸ್ಸು ಆಗಿರಲಿಲ್ಲ. ಹೆಚ್ಚುಕಡಿಮೆ ಅವನಿಗೆ ಆನಂದರಾಯನಷ್ಟೇ ವಯಸ್ಸು. ಆದರೂ ಮುದುಕನಂತೆ ಅವನು ಹೇಳಿದ.

“ಈಗಿನ ಕಾಲವೇನು ನಮ್ಮ ಕಾಲದಂತೆ ಅಂದುಕೊಂಡಿರಾ ? ವಧೂ

ವರರು ತಮ್ಮ ಒಪ್ಪಿಗೆಯನ್ನು ಅಷ್ಟುಬೇಗ ಹೇಳಿಬಿಡುತ್ತಾರೆಯೆ ? ನನ್ನ ಮದುವೆಯಲ್ಲಿಯೂ ನನಗೆ ಹುಡುಗಿಯನ್ನು ತೋರಿಸಿದರು. ಆದರೆ ಮದುವೆ ಮಾಡಿಕೊಳ್ಳುತ್ತೀಯಾ ಇಲ್ಲವೇ ಎಂಬುದಾಗಿ ನನ್ನ ಅಭಿಪ್ರಾಯವನ್ನು ಯಾರೂ ಕೇಳಲಿಲ್ಲ. ಮದುವೆ ಮಾಡಿಯೇ ಬಿಟ್ಟರು. ಹಿಂದೆಲ್ಲಾ ಹಿರಿಯರ ಅಭಿಪ್ರಾಯಗಳಂತೆಯೇ ನಡೆದುಕೊಂಡು ಹೋಗುತ್ತಿದ್ದಿತು. ಈಗ ಅವೆಲ್ಲಾ ಎಲ್ಲಿ" ಎಂದು ಹೇಳಿ ನಗುತ್ತಾ ತನ್ನ ಹೆಂಡತಿಯ ಕಡೆ ನೋಡಿದ.

ಗಂಡನ ನಗುವಿಗೆ ಪ್ರತ್ಯುತ್ತರವೋ ಎಂಬಂತೆ ಅವಳೂ ನಕ್ಕಳು.

ವರನು ವಿಷಯವನ್ನು ಅಷ್ಟಕ್ಕೇ ಬಿಡದೇ "ಅವೆಲ್ಲಾ ಇರಲಿ, ಮದುವೆ ಮಾಡುವುದಾದರೆ ಯಾವಾಗ ಮಾಡಬೇಕೆಂದಿದ್ದೀರಿ ?'' ಎಂದು ಗುಂಡೂರಾಯರನ್ನು ಕೇಳಿದ.

"ಆದಷ್ಟು ಬೇಗ ಮಾಡಿಬಿಡಬೇಕೆಂದಿದ್ದೇವೆ. ಆದರೆ ಮದುವೆಯ ಏರ್ಪಾಟುಗಳನ್ನು ಮಾಡಲು ಎಷ್ಟು ದಿನ ಬೇಕಾಗುತ್ತದೆ ಮುಂತಾದುವನ್ನೆಲ್ಲಾ ನಿರ್ಧರ ಮಾಡಿಕೊಂಡು ಅದನ್ನುಗೊತ್ತು ಮಾಡಬೇಕಾಗುತ್ತದೆ"

ನಾರಣಪ್ಪನು "ಆ ವಿಷಯದಲ್ಲಿ ನೀವು ಯೋಚನೆಯನ್ನೇ ಮಾಡಬೇಕಾಗಿಲ್ಲ, ಆನಂದರಾಯರೇ ! ಗುಂಡೂರಾಯರು ಬಹಳ ಆತುರವಾಗಿದ್ದಾರೆ. ಆದರೆ ಅವರು ಹೇಳಿದಂತೆ ಮದುವೆಯ ಏರ್ಪಾಟುಗಳಿಗೆ ಎಷ್ಟು ದಿನವಾಗುತ್ತದೆಯೋ ನೋಡಿಕೊಳ್ಳಬೇಕು. ಅದಕ್ಕಿಂತ ಮುಖ್ಯವಾಗಿ ಯಾವ ದಿನ ಛತ್ರ ಸಿಗುತ್ತದೆಯೋ ನೋಡಿಕೊಳ್ಳಬೇಕಲ್ಲ'' ಎಂದ.

ಆನಂದರಾಯ ಭಾವನ ಕಡೆಗೆ ತಿರುಗಿ "ಆ ವಿಷಯವನ್ನೂ ತಿಳಿಸಿಬಿಟ್ಟರೆ ಉತ್ತಮವಲ್ಲವೇ ?" ಎಂದ.

ಎಲ್ಲರೂ ಆಸಕ್ತಿಯಿಂದ ನೋಡಿದರು.

ವಸಂತಯ್ಯ "ಮದುವೆಯು ತಿರುಪತಿಯಲ್ಲಿ ದೇವಸನ್ನಿಧಿಯಲ್ಲಿ ನಡೆಯಬೇಕೆಂಬುದು ನನ್ನ ಭಾವಮೈದುನನ ಅಭಿಲಾಷೆ" ಎಂದ.

ಅದಕ್ಕೆ ಯಾರೂ ಏನೂ ಹೇಳಲಿಲ್ಲ.

ತಾನೇಕೆ ಹಾಗೆ ಅಪೇಕ್ಷಿಸುತ್ತಿದ್ದೇನೆಂಬುದನ್ನು ವಿವರಿಸುತ್ತಾ "ತಿರುಪತಿಯ ವೆಂಕಟರಮಣ ಸ್ವಾಮಿಯಲ್ಲಿ ಮೊದಲಿನಿಂದಲೂ ನನಗೆ ಬಹಳ ಭಕ್ತಿ. ಆ ಸ್ವಾಮಿಯ ಸಮ್ಮುಖದಲ್ಲಿಯೇ ಈ ಶುಭಕಾರ್ಯ ನೆರವೇರಬೇಕೆಂಬುದು ನನ್ನ ಅಭಿಲಾಷೆ'' ಎಂದು ವರನು ಹೇಳಿದ.

ಆದಕ್ಕೆ ಗುಂಡೂರಾಯರು "ನಿಜ. ದೇವತಾಸಾನ್ನಿಧ್ಯದಲ್ಲಿ ಮದುವೆಯಾಗಲೀ ಎಂದು ಹೇಳುವುದಕ್ಕೆ ಯಾರೇ ಆಗಲೀ ಅಡ್ಡಿ ಹೇಳುವುದು ಸರಿಯಲ್ಲ. ಆದರೆ ನನಗೆ ಬೇಕಾದ ಆಸ್ತೇಷ್ಟರುಗಳೂ ಬಂಧು ಬಳಗಗಳವರೂ ಎಲ್ಲರೂ ತಿರುಪತಿಗೆ ಬರುವುದೆಂದರೆ ತೊಂದರೆಯಾಗುತ್ತದೆ. ಅದರಿಂದ ಅವರುಗಳೆಲ್ಲರೂ ಏನು ಮಾಡುತ್ತಾರೆಯೋ ಎಂಬುದೊಂದೇ ಯೋಚನೆ" ಎಂದರು.

ವರನು "ಅದಕ್ಕೇನಂತೆ ಮದುವೆಯನ್ನು ತಿರುಪತಿಯಲ್ಲಿ ನೆರವೇರಿಸಿಬಿಡೋಣ. ಅನಂತರ ಆರತಕ್ಷತೆಯನ್ನು ಇಲ್ಲಿಯೇ ಇಟ್ಟುಕೊಳ್ಳೋಣ. ನನಗೂ ಬಹಳ ಮಂದಿ ಸ್ನೇಹಿತರಿದ್ದಾರೆ. ಆರತಕ್ಷತೆಯ ದಿನವೇ ಇಲ್ಲೊಂದು ಒಳ್ಳೆಯ ಊಟವನ್ನು ಕೊಟ್ಟರಾಯಿತು'' ಎಂದ.

ಗುಂಡೂರಾಯರು "ಲಗ್ನ ಪತ್ರಿಕೆಯಾಗಲಿ, ಅನಂತರ ಆ ವಿಷಯವನ್ನು ನಿರ್ಧರ ಮಾಡೋಣ ? ಒಟ್ಟಿನಲ್ಲಿ ಉಭಯರೂ ಕೂಡಿ ಅನುಕೂಲವಾಗುವಂತೆ ಮಾಡಿಕೊಂಡರಾಯಿತು'' ಎಂದರು.

"ಯಾವ ದಿನ ಲಗ್ನ ಪತ್ರಿಕೆಯನ್ನಿಟ್ಟುಕೊಳ್ಳೋಣ ?"

ತನ್ನ ಭಾವಮೈದುನನಾಡಿದ ಮಾತನ್ನು ಸಮರ್ಥಿಸುತ್ತಾ ವಸಂತಯ್ಯ ಹೇಳಿದ.

''ಹೌದು. ಅದು ಮುಖ್ಯವಾದ ವಿಚಾರ. ಯಾಕೆಂದರೆ ನನ್ನ ಭಾವಮೈದುನ ವ್ಯಾಪಾರಕ್ಕಾಗಿ ದಕ್ಷಿಣ ದೇಶದ ಕಡೆ ಹೋಗಬೇಕೆಂದಿದ್ದಾನೆ. ಲಗ್ನ ಪತ್ರಿಕೆಯ ದಿನ ಅವನಿರಬೇಕು. ಯಾವತ್ತು ಅದನಿಟ್ಟುಕೊಳ್ಳುವುದೆಂದು ಗೊತ್ತಾದರೆ ಅವನು ತನ್ನ ಪ್ರಯಾಣವನ್ನು ಗೊತ್ತು ಮಾಡಿಕೊಳ್ಳಬಹುದು.

ಮದುವೆಯ ಏರ್ಪಾಟುಗಳ ವಿಷಯವನ್ನು ನಾಲ್ಕು ಮಂದಿಯೊಡನೆ ಮಾತನಾಡದೇ ಇದ್ದಕ್ಕಿದ್ದಂತೆಯೇ ಇಂತಹ ದಿನ ಲಗ್ನ ಪತ್ರಿಕೆಯನ್ನು ಇಟ್ಟುಕೊಳ್ಳೋಣವೆಂದು ಹೇಳಲು ಗುಂಡೂರಾಯರಿಗೆ ಕಷ್ಟವಾಯಿತು. ಆದರೂ ಸಹ ಹುಡುಗಿಯನ್ನು ಒಪ್ಪಿಕೊಂಡಿರುವವರ ಎದುರಿಗೆ ಆ ಮಾತು ಪುನಃ ಹೇಳಲು ಸಂಕೋಚವಾಯಿತು.

ಅದರಿಂದ ನಾರಣಪ್ಪನನ್ನು ಬಾ ಎಂದು ಸಂಜ್ಞೆ ಮಾಡಿ ಒಳಗೆ ಕರೆದುಕೊಂಡು ಹೋದರು.

ಒಳಗೆ ನಡುಮನೆಗೆ ಹೋಗಿ ಅವನಿಗೆ ಮಾತ್ರ ಕೇಳುವಂತೆ "ನಾರಣಪ್ಪನವರೇ! ಇದ್ದಕ್ಕಿದ್ದಂತೆಯೇ ಲಗ್ನ ಪತ್ರಿಕೆ ಯಾವತ್ತು ಇಟ್ಟುಕೊಳ್ಳುವುದೆಂದು ಹೇಳುವುದು ಕಷ್ಟ. ಆ ವಿಷಯದಲ್ಲವರು ಒತ್ತಾಯ ಮಾಡುತ್ತಿದ್ದಾರೆ. ನೀವವರಿಗೆ ಅಸಮಾಧಾನವಾಗದಂತೆ ವಿಷಯವನ್ನು ವಿವರಿಸಬೇಕು" ಎಂದರು.

ನಾರಣಪ್ಪ "ಆ ವಿಷಯ ನನಗೆ ಬಿಡಿ, ಸ್ವಾಮಿ. ನಾನು ನೋಡಿಕೊಳ್ಳುತ್ತೇನೆ'' ಎಂದ.

ಅನಂತರ ಹೊರಡುವುದರಲ್ಲಿದ್ದ ಗುಂಡೂರಾಯರನ್ನು ನಿಲ್ಲಿಸಿಕೊಂಡು "ಇನ್ನೊಂದು ಮುಖ್ಯವಾದ ಮಾತಿದೆ. ಈವರುಗಳ ವಿಷಯಕವಾದ ವಿವರಗಳನ್ನು ಸರಿಯಾಗಿ ವಿಚಾರಿಸಿ ತಿಳಿದುಕೊಳ್ಳಬೇಕು" ಎಂದ.

''ಇದೇನು, ವರನನ್ನು ತೋರಿಸಿದ ನೀವೇ ಹೀಗೆ ಹೇಳುತ್ತೀರಿ ?''

"ಅಂತಹದೇನೂ ಇಲ್ಲ, ಈ ವರನಿದ್ದಾನೆಂದು ನನಗೆ ಗೊತ್ತಾಯಿತು. ಅಷ್ಟು ಹೊತ್ತಿಗೆ ನೀವೂ ಬಂದಿರಿ. ನಾನು ಕರೆದುಕೊಂಡು ಹೋಗಿ ತೋರಿಸಿದೆ. ಆದರೆ ಮಗಳನ್ನು ಕೊಟ್ಟು ಮದುವೆ ಮಾಡುವ ಮೊದಲು ವರನ ಪೂರ್ವೋತ್ತರಗಳನ್ನು ತಿಳಿದುಕೊಳ್ಳಬೇಕಷ್ಟೇ"

''ಅದು ಸರಿ. ಆದರೆ ನಾವು ವಿಲ್ಸನ್‌ಗಾರ್ಡನ್ಸ್‌ನಲ್ಲಿ ನೋಡಿದ ಮನೆಯು ಅವನದಲ್ಲವೇ ? ಅವನಿಗೆ ಸೀರೆಗಳ ವ್ಯಾಪಾರವಿಲ್ಲವೇ ? ಕೊಳ್ಳೆಗಾಲದಲ್ಲಿ ಮಗ್ಗಗಳಿಲ್ಲವೇ ?''

''ಇವೆ, ಆದರೂ ಆ ವಿಷಯ ಸ್ವಲ್ಪ ವಿಚಾರಿಸಬೇಕಲ್ಲ''

''ವಿಚಾರಿಸೋಣ! ಏನೂ ವಿಚಾರಿಸದೇ ಮಗಳನ್ನು ಕೊಟ್ಟುಬಿಡುತ್ತೇನೆಯೇ. ಲಗ್ನಪತ್ರಿಕೆಯನ್ನು ಯಾವತ್ತು ಇಟ್ಟುಕೊಳ್ಳುವುದೆಂಬುದನ್ನು ಎರಡುಮೂರು ದಿನಗಳಲ್ಲಿ ತಿಳಿಸುವುದಾಗಿ ಹೇಳಿ ಅವರನ್ನು ಒಪ್ಪಿಸಿರಿ. ಅಷ್ಟು ಹೊತ್ತಿಗೆ ಎಲ್ಲವನ್ನೂ ವಿಚಾರಿಸಿ ತಿಳಿದುಕೊಳ್ಳೋಣ"

"ನಾನು ಹೇಳುವುದೂ ಅಷ್ಟೆ''

ಅನಂತರ ಗುಂಡೂರಾಯರೂ ನಾರಣಪ್ಪನೂ ಹೊರಗಡೆ ಬಂದರು.

ವರನೂ ಅವನ ಭಾವನೂ ನಾರಣಪ್ಪನ ಮುಖವನ್ನು ನೋಡಿದರು.

ನಾರಣಪ್ಪನು "ಒಳ್ಳೆಯ ಲಗ್ನ ಯಾವತ್ತು ಇದೆ ಎಂಬುದನ್ನು ನೋಡಿಕೊಂಡು, ಆ ಲಗ್ನಕ್ಕೆ ಮದುವೆಯಾಗುತ್ತದೆಯೆ ಎಂಬುದನ್ನು ನಿರ್ಧರಿಸಿಕೊಂಡು, ಲಗ್ನಪತ್ರಿಕೆ ಯಾವತ್ತೆಂಬುದನ್ನು ತೀರ್ಮಾನ ಮಾಡಬೇಕಾಗಿದೆ. ಅವನ್ನು ಈಗಲೇ ಹೇಳುವುದಕ್ಕೆ ಕಷ್ಟ. ಇನ್ನು ಎರಡು ಮೂರು ದಿನಗಳಲ್ಲಿ ಲಗ್ನ ಪತ್ರಿಕೆ ಯಾವತ್ತು ಇಟ್ಟುಕೊಳ್ಳುವುದೆಂದು ಹೇಳುವುದಾಗಿ ಗುಂಡೂರಾಯರು ತಿಳಿಸುತ್ತೇನೆನ್ನುತ್ತಾರೆ" ಎಂದ.

ಅದೇ ಅವರ ಅಂತಿಮ ತೀರ್ಮಾನವೆಂದುಕೊಂಡ ವರನೂ, ಅವನ ಕಡೆಯವರೂ ಅದಕ್ಕೆ ಒಪ್ಪಿಕೊಂಡರು.

ಇನ್ನು ಈ ಕ್ಷಣವೇ ಮುಂದಾಡುವ ಮಾತುಗಳೇನೂ ಇರಲಿಲ್ಲ.

ಆದರಿಂದ ವಸಂತಯ್ಯ "ಸರಿ. ಎಲ್ಲವೂ ಆಯಿತಲ್ಲ. ನಾವಿನ್ನು ಹೋಗಿ ಬರಬಹುದೋ ?" ಎಂದ.

ಗುಂಡೂರಾಯರು ಒಪ್ಪಿಕೊಂಡರು.

ವಿಶಾಲಾಕ್ಷಮ್ಮನವರು ಗಿರಿಜಮ್ಮನಿಗೆ ಕುಂಕುಮ, ತಾಂಬೂಲಗಳನ್ನು ಕೊಟ್ಟರು. ಗಂಡಿನ ಕಡೆಯವರು ಬೀಳ್ಕೊಂಡರು.

ನಾರಣಪ್ಪನವರು ಗುಂಡೂರಾಯರೊಡನೆ ಗುಸುಗುಟ್ಟುತ್ತಿದ್ದುದು ವಿಶಾಲಾಕ್ಷಮ್ಮನವರಿಗೆ ಅರ್ಧಂಬರ್ಧವಾಗಿ ಕೇಳಿಸಿತ್ತು. ಆ ವಿಷಯದಲ್ಲಿ ಗಂಡನನ್ನು ಕೇಳಬೇಕೆಂದು ಆಲೋಚನೆ ಮಾಡಿದರು. ಆದರೆ ಕೂಡಲೇ ಕೇಳಿದರೆ ಆತನಿಗೆಲ್ಲಿ ಕೋಪ ಬರುತ್ತದೋ ಎಂದು ಸುಮ್ಮನಾಗಿದ್ದರು

ರಾತ್ರಿ ಊಟಗಳಾದನಂತರ ಗುಂಡೂರಾಯರು ಹಜಾರದ ಚಾಪೆಯ ಮೇಲೆ ತಾಂಬೂಲಚರ್ವಣ ಮಾಡುತ್ತಾ ಕುಳಿತುಕೊಂಡಿದ್ದರು.

ಆಗ ವಿಶಾಲಾಕ್ಷಮ್ಮನವರು ಬಂದು "ಆ ನಾರಣಪ್ಪನವರು ನಿಮ್ಮಲ್ಲಿ ಏನೋ ಮಾತನಾಡುತ್ತಿದ್ದರಲ್ಲ" ಎಂದರು.

ಗುಂಡೂರಾಯರು ಅನಾಸಕ್ತಿಯಿಂದ "ವರನ ವಿಷಯವಾಗಿ ಸ್ವಲ್ಪ ವಿಚಾರಿಸಬೇಕು--ಎಂದು ಹೇಳಿದರು" ಎಂದರು.

"ವಿಚಾರಿಸಬೇಡವೇ ?"

"ಊಟವನ್ನು ಮಾಡಲೀ ನನಗೆ ಬುದ್ಧಿ ಹೇಳಲು ಬಂದುಬಿಟ್ಟೆಯೋ, ಇಲ್ಲವೋ ? ನನ್ನನ್ನು ಮುಠ್ಠಾಳನೆಂದುಕೊಂಡಿದ್ದೀಯಾ ? ವರನ ಪೂ

ರ್ವೋತ್ತರಗಳನ್ನು ತಿಳಿಯದೇ ಅವನಿಗೆ ಮಗಳನ್ನು ಕೊಟ್ಟುಬಿಡುತ್ತೇನೆಂದು ಕೊಂಡಿದ್ದೀಯಾ ?" ಎಂದ ಗುಂಡೂರಾಯರು ತಾವು ವರನನ್ನು ಹುಡುಕು ವುದರಲ್ಲಿ ಯಾವ ಅವಿವೇಕವನ್ನು ಮಾಡಿಲ್ಲವೆನ್ನುವಂತೆ ಸಮರ್ಥಿಸುತ್ತಾ ಹೇಳಿದರು. "ವಿಲ್ಸನ್‌ಗಾರ್ಡನ್‌ನಲ್ಲಿ ಇರುವ ಮನೆಯನ್ನು ನಾನು ನೋಡಿ ದ್ದೇನೆ. ಅದನ್ನು ಕಳ್ಳನಿಗೆ ಕೊಟ್ಟರೂ ಮೂವತ್ತು ಮೂವತ್ತೈದು ಸಾವಿರ ರೂಪಾಯಿಗಳನ್ನು ಕೊಡುತ್ತಾರೆ. ಆ ಭೂಮಿಯು ಅವನದೇ. ಅದರ ಸಂಬಂಧವಾದ ಕಾಗದ ಪತ್ರಗಳನ್ನು ತೋರಿಸಿದ. ಕಂಟ್ರಾಕ್ಟರಿಂದ ಮನೆ ಯನ್ನು ಕಟ್ಟಿಸಿದ್ದಾನೆ. ಆ ಬಗ್ಗೆಯೂ ಕಾಗದಪತ್ರಗಳನ್ನು ತೋರಿಸಿದ. ಇನ್ನೂ ಆ ಸಂಬಂಧದಲ್ಲಿ ಒಂದು ಒಂದೂವರೆ ಸಾವಿರ ರೂಪಾಯಿಗಳನ್ನು ಕೊಡಬೇಕಷ್ಟೇ. ಅಂತೂ ಒಳ್ಳೆಯ ಕುಳ"

ಗಂಡನಾಡಿದ ಮಾತಿನ ಉತ್ತರಾರ್ಧ ಸಮಾಧಾನದಿಂದ ಮಾತನಾಡಿ ದಂತಿತ್ತು.

"ಹುಡುಗ ವಯಸ್ಸಾದವನಂತೆ ಕಂಡಬರುತ್ತಾನೆ"

"ಹುಂ ಅವನಿಗೆ ಮೂವತ್ತುನಾಲ್ಕು ವರ್ಷ. ನಮ್ಮ ಹುಡುಗಿಗೂ ಅವನಿಗೂ ಹನ್ನೊಂದು ವರ್ಷಗಳ ಹೆಚ್ಚು ಕಡಿಮೆಯಾಗುತ್ತದೆ. ಆದರೇನಂತೆ. ಈಗ ನನಗೂ ನಿನಗೂ ಹತ್ತು ವರ್ಷಗಳ ಭೇದವಿಲ್ಲವೇ ? ಅದೇನೂ ಪರ ವಾಯಿಲ್ಲ"

"ಹುಡುಗ ಅಷ್ಟು ಲಕ್ಷಣವಾಗಿಲ್ಲ, ಅಲ್ಲವೇ ?

"ನಿನಗೆ ವಯಸ್ಸಾದರೂ ತಿಳಿವಳಿಕೆ ಬರಲಿಲ್ಲ, ಪಿರಾಜಿಾ. ಗಂಡಸಿಗೆ ರೂಪವೆಂದರೇನು ? ಚೆನ್ನಾಗಿ ಸಂಪಾದನೆ ಮಾಡುವ ಯೋಗ್ಯತೆಯಿರ ಬೇಕು. ಅದಿದ್ದರಾಯಿತು."

"ಹಾಗಾದರೆ ಇವನಿಗೆ ಒಳ್ಳೆಯ ಸಂಪಾದನೆಯಿದೆ ಎನ್ನುತ್ತೀರಾ ?

"ಹುಂ. ಇಲ್ಲದೇ ಏನು ? ಅವರಪ್ಪ ನರಸಿಂಗರಾಯರಿಗೆ ಹೆಚ್ಚಾಗಿ ಏನೂ ಆಸ್ತಿಪಾಸ್ತಿಗಳಿದ್ದಂತಿಲ್ಲ. ಕೊಳ್ಳೇಗಾಲದಲ್ಲಿ ಹಳೆಯದೊಂದು ಮನೆ ಯಿತ್ತು. ಒಂದಿಷ್ಟು ಮಗ್ಗಗಳಿದ್ದವು. ಅವುಗಳನ್ನೇನು ಹಾಳುಮಾಡಿಲ್ಲ. ಇಟ್ಟುಕೊಂಡೇ ಇದ್ದಾನೆ. ಈಚೆಗ ಬೆಂಗಳೂರಿನಲ್ಲಿ ಮೂವತ್ತು ಸಾವಿರ ರೂಪಾಯಿಗೆ ಒಂದು ಮನೆ ಕಟ್ಟಿದ್ದಾನೆ. ಅದೇನು ಸಾಧಾರಣವೇ ? ಮೂ

ವತ್ತು ವರ್ಷ ಸರ್ಕಾರೀ ಚಾಕರೀ ಮಾಡಿಕೊಂಡಿದ್ದರೂ ನನಗೊಂದು ಮನೆ ಕಟ್ಟುವುದಕ್ಕಾಗಲಿಲ್ಲ. ಇನ್ನೂ ಬಾಡಿಗೆಯ ಮನೆಯಲ್ಲಿಯೇ ಇದ್ದೇನೆ. ಹಾಗಿರುವಾಗ ಆ ಹುಡುಗ ಆ ಮನೆಯನ್ನು ಕಟ್ಟಿದ್ದಾನೆಂದರೆ ಸಂಪಾದನೆ ಮಾಡತ್ತಿದ್ದಾನೆಂದೇ ಅರ್ಥ.

"ಅದೇನೋ ಸರ್ಕಾರೀ ಕೆಲಸವಿತ್ತು. ಬಿಟ್ಟುಬಿಟ್ಟಿದ್ದೇನೆ ಎನ್ನು ತ್ತಾನೆಯಲ್ಲಾ, ಯಾರಿಗಾದರೂ ಸರ್ಕಾರೀ ಕೆಲಸವಿದ್ದರೆ ಬಿಟ್ಟುಬಿಡು ತ್ತಾರೆಯೇ ?"

"ಅದೊಂದೋ ಈ ವರನಲ್ಲಿರುವ ಕುಂದು. ಅವನು ಕೆಲಸಕ್ಕೆ ತಾನೇ ರಾಜೀನಾಮೆ ಕೊಟ್ಟುದಾಗಿ ಹೇಳುತ್ತಾನೆ. ಅದೊಂದು ವಿಷಯ ಸುಳ್ಳಿರ ಬಹುದು. ಸರ್ಕಾರದವರು ಯಾವುದೋ ಕಾರಣದಿಂದ ಡಿಸ್‌ಮಿಸ್ ಮಾಡಿ ರಬಹುದು. ಅವನು ಮಾಡುತ್ತಿದ್ದುದಾಗಿ ಹೇಳುವ ಕೆಲಸದಲ್ಲಿ ಹಣ ಓಡಿ ಯಾಡುತ್ತದೆ. ಈಗಿನ ಕಾಲದಲ್ಲಿ ಬ್ರಾಹ್ಮಣರ ಮೇಲೆ ಬರುವ ಆರೋಪ ಗಳು ಹೇಗೆಯೋ ಇರುತ್ತವೆ ಎಂದು ಹೇಳುವುದಕ್ಕಾಗುತ್ತದೆಯೇ? ಅವನು ದುಡ್ಡು ತಿಂದನೆಂದು ಸುಳ್ಳು ಅಪವಾದನೆ ತಂದು ಡಿಸ್‌ಮಿಸ್ ಮಾಡಿರಬ ಹುದು. ಅದನ್ನು ವಿಚಾರಿಸುತ್ತೇನೆ. ಆದರೆ ಒಟ್ಟಿನಲ್ಲಿ ನನಗೆ ಕಂಡುಬರು ವಂತೆ ಇವನು ಯೋಗ್ಯನಾದ ವರನೇ–ಎಂದು ಹೇಳಬಹುದು"

ಗಂಡ ಹೇಳಿದ ಮಾತು ವಿಶಾಲಾಕ್ಷಮ್ಮನವರಿಗೆ ಸಮಾಧಾನವನ್ನುಂ ಟುಮಾಡಲಿಲ್ಲ, ಆದರೆ ವಿರೋಧವಾಗಿ ಮಾತನಾಡಿ ಫಲವಿಲ್ಲ. ಹಾಗೆ ಅವರು ಸೊಂಪುಕೊಳ್ಳುತ್ತಾ ಒಳಗೆ ಹೊರಟುಹೋದರು,

ಗುಂಡೂರಾಯರ ಮನೆಯಲ್ಲಿ ದೇವರನ್ನಿಟ್ಟಿದುದು ಅಡಿಗೇ ಮನೆಯ ಮೂಲೆಯಲ್ಲಿಯೇ, ಆ ದೇವರನ್ನು ಪೂಜೆ ಮಾಡುತ್ತಿದ್ದುದೂ ವಿಶಾಲಾಕ್ಷ ಮ್ಮನವರೇ, ದೇವರನ್ನಿಟ್ಟ ಕಾಲುಮಣೆಯ ಹಿಂದುಗಡೆಯಾಗಿ ತಿರುಪತಿ ವೆಂಕಟರಮಣಸ್ವಾಮಿಯ ಪಟವನ್ನು ಇಟ್ಟಿದ್ದರು.

ನೊಂದುಕೊಂಡು ಅಡಿಗೆಯ ಮನೆಗೆ ಹೋದ ಕೂಡಲೇ ಮೊದಲು ಕಣ್ಣಿಗೆ ಬಿದ್ದುದು ವೆಂಕಟರಮಣಸ್ವಾಮಿ.

ಆಕೆ "ತಿರುಪತಿ ತಿಮ್ಮಪ್ಪಾ. ನಾನು ನಿನ್ನನ್ನು ಎಂದಾದರೂ ಭಕ್ತಿ ಯಿಂದ ಪೂಜಿಸಿದ್ದೇ ನಿಜವಾದರೆ ಈ ಹಾಳು ಸಂಬಂಧವನ್ನು ತಪ್ಪಿಸಿಬಿಡು" ಎಂದು ಕೇಳಿಕೊಂಡರು,

# ೧೨

ತಾನು ಭಾಗ್ಯಳನ್ನು ಪ್ರೀತಿಸುತ್ತಿದ್ದೇನೆಂದೂ ಅವಳಿಲ್ಲದಿದ್ದರೆ ತನ್ನ ಜೀವನವು ಬರಡಾಗುತ್ತದೆಂದೂ ರಾಜಣ್ಣನಿಗೆ ಅರ್ಥವಾದದ್ದು ಭಾಗ್ಯಳನ್ನು ಆನಂದರಾಯನಿಗೆ ಕೊಡುತ್ತಾರೆಂಬುದು ನಿರ್ಣಯವಾದ ಮೇಲೆಯೇ.

ಒಂದಲ್ಲ ಹತ್ತು ಬಾರಿ ತೋರಿತು. ಭಾಗ್ಯಳನ್ನು ಮದುವೆ ಮಾಡಿ ಕೊಳ್ಳುತ್ತೇವೆಂದು ತಾನು ಮೊದಲೇ ಹೇಳಿದ್ದರೆ ಚೆನ್ನಾಗಿತ್ತೆಂದು. ಆದರೆ ಅವಳನ್ನು ಮದುವೆ ಮಾಡಿಕೊಳ್ಳುತ್ತೀಯಾ-ಎಂಬುದಾಗಿ ಅವನನ್ನು ಯಾರು ಕೇಳಿದ್ದರು,?

ಯಾರು ಕೇಳಿರಲಿಲ್ಲ. ಆದರೂ ಭಾಗ್ಯಳನ್ನು ತನಗೆ ಕೊಡಬೇಕೆಂದೇ ವಿಶಾಲಾಕ್ಷಮ್ಮನವರೂ ಗುಂಡೂರಾಯರೂ ತೀರ್ಮಾನಿಸಿಕೊಂಡಿದ್ದರೆಂದು ಅವನ ಮನಸ್ಸಿನ ಒಳದನಿಯು ಹೇಳುತ್ತಿದ್ದಿತು.

ಹೌದು. ಅದೇ ಕಾರಣವಿರಬೇಕು. ಇಲ್ಲದಿದ್ದರೆ ಅವರು ತನ್ನನ್ನೇಕೆ ಅಷ್ಟೊಂದು ವಿಶ್ವಾಸ ಮಾಡುತ್ತಿದ್ದರು ? ತನ್ನನ್ನೇಕೆ ಇಷ್ಟೊಂದು ಆದರ ದಿಂದ ನೋಡಿಕೊಳ್ಳುತ್ತಿದ್ದರು. ಸಂದೇಹವೇ ಇಲ್ಲ.

ಅದೂ ಅಲ್ಲದೇ ಮತ್ತೊಂದು ವಿಷಯವಿತ್ತು. ಅದು ಭಾಗ್ಯಳ ವಿಷಯ. ತಾನು ಈ ಮನೆಗೆ ಬಂದಾಗಿನಿಂದ ತನ್ನ ಬಗ್ಗೆ ಭಾಗ್ಯಳು ನಡೆದುಕೊಳ್ಳು ತ್ತಿದ್ದ ರೀತಿಗಳನ್ನೆಲ್ಲಾ ನೆನೆಸಿಕೊಂಡ. ಅದು ಪ್ರೀತಿಯ ಸಂಕೇತವೇ ಎಂದು ಬೋಧೆಯಾಗುತ್ತಿತ್ತು.

ಇಷ್ಟಾಗಿಯೂ ಯಾವುದೋ ಒಂದು ಕುಂಟುನೆವದಿಂದ ಅವನು ಹಿಂಜರಿದಿದ್ದ.

ತನ್ನ ಮಂಕುತನದಿಂದ ಎಷ್ಟು ಅನ್ಯಾಯವಾಗಿ ಹೋಯಿತು, ಗಿಣಿ ಯಂತಹ ಹುಡುಗಿಯು ಮಾರ್ಜಾಲ ಮುಂಡೇಮಗನ ಕೈಗೆ ಸಿಕ್ಕಿಕೊಳ್ಳುವು ದಕ್ಕೆ ತಾನೇ ಕಾರಣವಾದಂತೆ ಆಯಿತಲ್ಲ.

ಗುಂಡೂರಾಯರಂತೂ ತನ್ನ ವಿಷಯದಲ್ಲಿ ನಿರಾಸೆಗೊಂಡು ತತ್ಪರಿ

ಣಾಮವಾಗಿ ಅಸಮಾಧಾನಗೊಂಡಿರುವುದು ಒಡೆದು ಕಾಣುತ್ತಿದೆ. ವಿಶಾಲಾಕ್ಷಮ್ಮನವರೇನೋ ಮೊದಲಿನ ಆದರ ವಿಶ್ವಾಸಗಳನ್ನೇ ಮುಂದುವರಿಸಿಕೊಂಡು ಬರುತ್ತಿದ್ದಾರೆ. ಅದು ಅವರ ಒಳ್ಳೆಯತನ. ಆದರೆ ಆಕೆಯ ಮನಸ್ಸಿಗೆ ಎಷ್ಟೊಂದು ದುಃಖವಾಗಿರಬೇಕು. ಭಾಗ್ಯಳು ತನ್ನನ್ನು ಎಷ್ಟು ಶಪಿಸಿಕೊಳ್ಳುತ್ತಿರಬಹುದು.

ಅದೆಲ್ಲಾ ಇರಬಹುದು. ಆದರೆ ಯಾರೇ ಆಗಲೀ ಭಾಗ್ಯಳನ್ನು ಮದುವೆ ಮಾಡಿಕೊಳ್ಳಬೇಕೆಂದು ಬಾಯಿಬಿಟ್ಟು ಹೇಳಲಿಲ್ಲ. ಮನಸ್ಸಿನಲ್ಲಿಯೇ ಆ ಭಾವನೆಯನ್ನು ಇಟ್ಟುಕೊಂಡಿದ್ದರೆ ತನಗೆ ಗೊತ್ತಾಗುವುದು ಹೇಗೆ? ಒಂದುವೇಳೆ ಗೊತ್ತಾಗಿದ್ದರೂ ತಾನೇ ಸಂಕೋಚವಿಲ್ಲದೇ ಹೇಳುತ್ತೇನೆಂದು ಅವರು ನಿರೀಕ್ಷೆ ಮಾಡಿದುದಾದರೂ ಹೇಗೆ?

ಅವರೇನು ಮಾಡಿದರೋ? ಅವರ ಕತೆಯನ್ನು ಅವರು ಕಳೆದುಕೊಂಡರು. ಈಗ ತನ್ನ ಕತೆ ಹೇಗೆ?

ತನಗೇಕೆ ಮಂಕು ಮುಚ್ಚಿಕೊಂಡಿತು, ಮನಸ್ಸಿನಲ್ಲಿದ್ದ ಅಭಿಪ್ರಾಯವನ್ನು ತಾನೇ ಹೇಳಬಾರದಾಗಿತ್ತೇ?

ತಾನೇ ಹೇಳುವುದು ಹೇಗೆ ಸಾಧ್ಯವಾಗುತಿತ್ತು–ಎಂಬುದಾಗಿ ತೋರಿದರೂ ಮರುಕ್ಷಣವೇ ಅನ್ನಿಸಿತು. ಸೂಕ್ಷ್ಮವಾಗಿ ವಿಶಾಲಾಕ್ಷಮ್ಮನವರೊಂದಿಗೆ ಹೇಳಬಹುದಾಗಿತ್ತು. ವೆಂಕಟೇಶಯ್ಯನವರೊಡನೆ ಹೇಳಬಹುದಾಗಿತ್ತು.

ಅದಾವುದೂ ಇಲ್ಲದಿದ್ದರೆ ಭಾಗ್ಯಳೊಡನೆ ಹೇಳಬಹುದಾಗಿತ್ತು. ಆ ದಿನ ಕಾಲೇಜ್ ಬಳಿಯಿಂದ ನಡೆದುಕೊಂಡು ಬರುತ್ತಾ ತಾವಿಬ್ಬರೂ ಎಷ್ಟೋ ಮಾತನಾಡಿದ್ದರು. ಬಗೆಬಗೆಯಾದ ಮಾತುಗಳು ಬಂದಿದ್ದವು. ಆಗ ಮಾತಿಗೆ ಮಾತು ತೆಗೆದು "ಭಾಗ್ಯ. ನೀನೇನೋ ಉದ್ಯೋಗಶೀಲೆಯಾಗಬೇಕೆಂದು ಅಪೇಕ್ಷೆಪಡುತ್ತಿದ್ದೀಯೆ. ನೀನು ಹಾಗೆ ಮಾಡಿದರೆ ಇತರರ ಮನಸ್ಸಿಗೆ ಎಂತಹ ಪೆಟ್ಟು ಬೀಳುತ್ತದೆಂಬುದನ್ನು ಒಂದುಬಾರಿಯಾದರೂ ಯೋಚನೆ ಮಾಡಿದ್ದೀಯಾ ?" ಎಂದು ಕೇಳಬಹುದಾಗಿತ್ತು. ಆಗವಳು "ನಾನು ಕೆಲಸ ಮಾಡುವುದರಿಂದ ಯಾರಿಗೇಕೆ ಪೆಟ್ಟು ಬೀಳುತ್ತದೆ?" ಎಂದು ಕೇಳುತ್ತಿದ್ದಳು. ಆಗ "ನಾನು ನಿನ್ನನ್ನು ಪ್ರೀತಿಸುತ್ತಿದ್ದೇನೆ" ಎಂದು ಹೇಳಬಹುದಾಗಿದ್ದಿತು.

ಹಿಂದೆ ನಡೆದುದನ್ನೆಲ್ಲಾ ನೆನೆಸಿಕೊಳ್ಳುತ್ತಿದ್ದಂತೆಯೇ ಮುಂದೇನು ಮಾಡಬೇಕೆಂಬ ಆಲೋಚನೆಯೂ ಅವನಿಗೆ ಬಂದಿತು.

ವೆಂಕಟೇಶಯ್ಯನವರಿಗೆ ಇರುವ ವಿಷಯವನ್ನೆಲ್ಲಾ ಕಾಗದ ಬರೆಯುವುದೇ ? ಹೋಗಿ ಅವರನ್ನು ನೋಡಿ ಮನಸ್ಸಿನಲ್ಲಿರುವುದನ್ನೆಲ್ಲಾ ತೋರಿಸಿಕೊಳ್ಳುವುದೇ ? ವಿಶಾಲಾಕ್ಷಮ್ಮನವರೊಡನೆ ಅಥವಾ ಭಾಗ್ಯಳೊಡನೆ ಮಾತನಾಡುವುದೇ ?

ಅದಾವುದರಿಂದಲೂ ಏನೂ ಆಗುವುದಿಲ್ಲವೆಂದು ರಾಜಣ್ಣನಿಗೆ ತೋರಿತು. ವೆಂಕಟೇಶಯ್ಯನವರೂ ಗುಂಡೂರಾಯರೂ ಪರಮಾಪ್ತರು. ಅವರಿಬ್ಬರನ್ನೂ ನೋಡಿ ಕೆಲವೇ ದಿನಗಳಾಗಿದ್ದರೂ ಸಹ ಅವರುಗಳ ವಿಷಯವನ್ನು ಬಹಳವಾಗಿ ಕೇಳಿದ್ದ. ಬಹಳ ಹತ್ತಿರದಿಂದ ಅವರುಗಳನ್ನು ನೋಡಿದ್ದ. ಅವನಿಗೆ ತಿಳಿದಿದ್ದಂತೆ ಗುಂಡೂರಾಯರು ಏಳಬೇಕಾದರೂ ಕುಳಿತುಕೊಳ್ಳಬೇಕಾದರೂ ವೆಂಕಟೇಶಯ್ಯನವರನ್ನು ಕೇಳಿಯೇ ಮಾಡುತ್ತಿದ್ದರು. ಆದರೆ ಮದುವೆಯಂತಹ ಪ್ರಾಮುಖ್ಯವಾದ ಕೆಲಸದಲ್ಲಿ ಅವರು ವೆಂಕಟೇಶಯ್ಯನವರನ್ನು ಕರೆಸಿ ಅವರ ಸಲಹೆಯನ್ನು ತೆಗೆದುಕೊಳ್ಳಲಿಲ್ಲವೆಂದರೆ ಅವರವರಿಗೆ ಏನೋ ಅಸಮಾಧಾನವಾಗಿರುವಂತಿದೆ. ಇರಬೇಕು, ಇಲ್ಲದಿದ್ದರೆ ಹತ್ತು ಹನ್ನೆರಡು ದಿನಗಳ ಮೊದಲು ಬಂದಿದ್ದ ವೆಂಕಟೇಶಯ್ಯನವರು ಅಷ್ಟೊಂದು ಬೇಗ ಹೊರಟು ಹೋಗುತ್ತಿದ್ದರೆ ?

ಹಾಗೆ ವೆಂಕಟೇಶಯ್ಯನವರೊಡನೆ ಮಾತನಾಡಿ ಫಲವಿಲ್ಲ.

ವರ ಮನೆಗೆ ಬಂದು ಹೋಗಿ ಮೂರು ನಾಲ್ಕು ದಿನಗಳಾಗಿದ್ದವು. ಅಂದಿನಿಂದ ಮನೆಯ ಸ್ಥಿತಿಗತಿಗಳನ್ನು ಪರಿಶೀಲಿಸುತ್ತಿದ್ದಾನೆ. ಗುಂಡೂರಾಯರು ಸಮಾಧಾನದಿಂದ ಇರುವಂತೆ ಕಂಡರೂ ವಿಶಾಲಾಕ್ಷಮ್ಮನವರಾಗಲೀ, ಭಾಗ್ಯಳಾಗಲೀ ಸಮಾಧಾನದಿಂದ ಇರುವಂತೆ ಇಲ್ಲ. ವಿಶಾಲಾಕ್ಷಮ್ಮನವರು ದುಃಖಿನಿಯಾಗಿರುವಂತೆ ಕಂಡುಬರುತ್ತಿದ್ದಾರೆ. ಭಾಗ್ಯಳೂ ಸತ್ತವಳಂತೆ ಆಗಿಹೋಗಿದ್ದಾಳೆ. ಈಗವಳು ಕಾಲೇಜಿಗೆ ಸಹ ಹೋಗುತ್ತಿಲ್ಲ.

ಒಂದು ವಿಧವಾಗಿ ನೋಡಿದರೆ ಈ ಮದುವೆಯು ಆ ತಾಯಿ ಮಗಳಿಗೆ ಇಷ್ಟವಿದ್ದಂತೆ ಇಲ್ಲ. ಆದರೂ ಅವರು ವಿವಾಹಕ್ಕೆ ಒಪ್ಪಿಕೊಂಡಿದ್ದಾರೆ. ಹಾಗಿರುವಾಗ ತಾನು ಅವರೊಂದಿಗೆ ಮಾತನಾಡಿದರೆ ಫಲವೇನು ?

ಕಡೆಯ ಯೋಚನೆಯೂ ಸಹ ರಾಜಣ್ಣನ ಮನಸ್ಸಿಗೆ ಬರದೇ ಹೋಗಲಿಲ್ಲ.

ಭಾಗ್ಯಳನ್ನು ಆ ಮಾರ್ಜಾಲ ಮುಂಡೇಮಗನ ಕೈಗೆ ಸಿಕ್ಕಿಸುವುದು ಸರ್ವಥಾ ನ್ಯಾಯವಲ್ಲ. ಅವಳನ್ನು ಒಪ್ಪಿಸಿ ಕರೆದುಕೊಂಡು ಎಲ್ಲಿಯಾದರೂ ದೇಶಾಂತರ ಹೊರಟು ಹೋಗುವುದು. ಅವಳಿಗೂ ಮೆಜಾರಿಟಿ ಬಂದಿದೆ. ಗುಂಡೂರಾಯರು ತಮ್ಮನ್ನು ಏನು ಮಾಡುವುದಕ್ಕೂ ಆಗುವುದಿಲ್ಲ. ಅನಂತರ ಕೆಲವು ದಿನ ಬಿಟ್ಟುಕೊಂಡು ಬಂದರೆ ಅನಂತರ ಎಲ್ಲರೂ ಒಪ್ಪಿಕೊಂಡೇ ಒಪ್ಪಿಕೊಳ್ಳುತ್ತಾರೆ. ಆಮೇಲೆ ಬೇಕಾದರೆ ಮದುವೆ ಶಾಸ್ತ್ರವಾಗಲಿ. ಇಲ್ಲದಿದ್ದರೆ ಬೇಡ.

ಈ ಆಲೋಚನೆಯೇನೋ ಸರಿಯಾಗಿಯೇ ಇದೆ. ಆದರೆ ಭಾಗ್ಯ ಇದಕ್ಕೆ ಒಪ್ಪಿಕೊಳ್ಳುತ್ತಾಳೆಯೇ ? ಒಪ್ಪಿಕೊಳ್ಳದೇ ಏನು ? ಅವಳು ಅತ್ಯಾಧುನಿಕ ಭಾವನೆಗಳನ್ನು ಒಳಗೊಂಡ ಸುಧಾರಿತ ತರುಣಿ.

ಯಾವುದಕ್ಕೂ ಅವಳೊಡನೆ ಒಂದು ಬಾರಿ ಮಾತನಾಡಬೇಕು. ಆದರೆ ಈಗ ಮಾತನಾಡುವುದಕ್ಕೇ ಅವಕಾಶವು ಸಿಕ್ಕಲಿಲ್ಲ. ಅವಳು ಈಗ ಕಾಲೇಜಿಗೆ ಬರುತ್ತಿಲ್ಲ. ಸದಾ ಮನೆಯಲ್ಲಿಯೇ ಕುಳಿತುಕೊಂಡಿರುತ್ತಾಳೆ. ಅದೂ ಕೋಣೆಯಲ್ಲಿ ಗೋಷಾ ಹೆಂಗಸರಂತೆ ಕುಳಿತಿರುತ್ತಾಳೆ. ಕಣ್ಣಿಗೆ ಬೀಳುವುದು ಸಹ ಅಪರೂಪ. ಅಕಸ್ಮಾತ್ ಒಂದೊಂದು ಬಾರಿ ಓಡಿಯಾಡುವಾಗ ಅವಳು ಕಂಡುಬರುತ್ತಿದ್ದುದುಂಟು. ಆಗವಳನ್ನು ನೋಡಿದರೆ ದುಃಖಿತೆಯಾಗಿ ಕಾಣುತ್ತಾಳೆ.

ಭಾಗ್ಯಳನ್ನು ಪ್ರತ್ಯೇಕವಾಗಿ ಸಂಧಿಸಿ ಮಾತನಾಡಲು ರಾಜಣ್ಣ ಸಮಯವನ್ನು ಕಾಯುತ್ತಿದ್ದ.

ಇಂತಹ ಸಂದರ್ಭದಲ್ಲಿ ಒಂದಾನೊಂದು ಘಟನೆಯು ನಡೆಯಿತು.

ಬೆಳಗಾಗ ಒಂಬತ್ತು ಗಂಟೆಯ ಸಮಯವಿರಬಹುದು. ಬೀದಿಕೋಣೆಯಲ್ಲಿ ಕುಳಿತು ರಾಜಣ್ಣ ಓದಿಕೊಳ್ಳುತ್ತಿದ್ದ. ಆ ಸಮಯದಲ್ಲಿ ಅವನ ಸ್ನೇಹಿತ ಶಂಕರ ಬಂದ. ಶಂಕರ ಕೇವಲ ಸ್ನೇಹಿತನೇ ಅಲ್ಲ, ಪರಮಾಪ್ತ ಸ್ನೇಹಿತ, ರಾಜಣ್ಣನ ಜೊತೆಯಲ್ಲಿಯೇ ಲಾ ಕಾಲೇಜಿನಲ್ಲಿ ಓದುತ್ತಿದ್ದ.

ಕರೆದು ಕೂರಿಸಿ ರಾಜಣ್ಣನು "ಏನು ಅಪರೂಪವಾಗಿ ಬಂದಿರಿ" ಎಂದು ಕೇಳಿದ.

"ಏನೂ ಇಲ್ಲ. ನಿಮ್ಮನ್ನು ನೋಡಿಕೊಂಡು ಹೋಗೋಣವೆಂದು ಬಂದೆ, ಅಷ್ಟೆ"

ಹಿಂದಿನ ಸಾಯಂಕಾಲ ಕಾಲೇಜು ಬಿಟ್ಟಾಗ ಸದಸ್ಯದ ಹಂಚಿದರು. ಈಗ ನೋಡುವಂತಹ ಪ್ರಮೇಯವಾದರೂ ಏನಿದೆ ?

ಯಾವುದು ಹೇಗಾದರೂ ಇರಲಿ, ಅಪರೂಪವಾಗಿ ಬಂದಿದ್ದಾನೆ. ಒಂದು ಕಪ್ಪು ಕಾಫಿಯಾದರೂ ಕೊಡಿಸಬೇಕು. ಇಲ್ಲಿಯೇ ಕೊಡಿಸುವುದಕ್ಕೆ ಇದೇನು ತನ್ನ ಮನೆಯೇ. ಮನೆಯಲ್ಲಿ ಕೊಡುವುದಕ್ಕೆ ಅನುಕೂಲವಿಲ್ಲವೆಂದುಕೊಳ್ಳಬೇಕೇ ಹೊರತು ಕಾಫಿಗೇನು ಕೊರತೆ. ಎಷ್ಟೋ ಅತ್ತೇ ಮನೆಗಳಿವೆಯಲ್ಲ.

ಚಿಲ್ಲರೆ ತೆಗೆದು ಜೇಬಿನಲ್ಲಿ ಹಾಕಿಕೊಂಡು "ಬನ್ನಿ, ಹೀಗೇ ಹೋಗಿ ಬರೋಣ" ಎಂದ.

ಶಂಕರನಿಗೂ ಹೊರಗೆದ್ದು ಹೋಗುವುದೇ ಬೇಕಾಗಿದ್ದಿತೆಂದು ಕಾಣುತ್ತದೆ. ಸ್ನೇಹಿತ ಹೇಳಿದ ಕೂಡಲೇ ಎದ್ದು ನಿಂತ.

ಕೋಣೆಗೆ ರಾಜಣ್ಣ ಬೀಗ ಹಾಕಿದನಂತರ ಇಬ್ಬರೂ ಹೊರಗೆ ಬಂದರು.

ಬೀದಿಯಲ್ಲಿ ಹೊರಟನಂತರ ಶಂಕರನು "ನಿಮ್ಮೊಂದಿಗೆ ಬಹಳ ಜರೂರಾದ ವಿಷಯವೊಂದನ್ನು ಮಾತನಾಡಬೇಕಾಗಿತ್ತು" ಎಂದ.

"ಏನು ವಿಷಯ ಹೇಳಿರಿ"

"ಈಗ ನೀವು ಕೋಣೆಯಿಂದ ಎದ್ದು ಬಂದಿರಲ್ಲಾ. ಅದೇನು ಕಾರಣವೋ ಮೊದಲು ಹೇಳಿರಿ"

"ನೀವು ಅಪರೂಪವಾಗಿ ಬಂದಿರಲ್ಲಾ. ಒಂದು ಕಪ್ಪು ಕಾಫಿ ಕುಡಿಯೋಣವೆಂದು ಬಂದೆ"

"ಸರಿ. ನಡೆಯಿರಿ. ಮೊದಲು ಕಾಫಿ ಕುಡಿದುಬಿಡೋಣ ? ಅನಂತರ ನಾನು ಬಂದ ವಿಷಯವನ್ನು ಮಾತನಾಡೋಣ. ಆ ವಿಷಯ ನನ್ನ ಹೋಟೆಲಿನಲ್ಲಿ ಮಾತನಾಡುವುದು ನನಗೆ ಇಷ್ಟವಿಲ್ಲ"

ಅಂತಹ ಪ್ರಾಮುಖ್ಯ ವಿಷಯವೇನೆಂದು ತಿಳಿದುಕೊಳ್ಳಲು ರಾಜಣ್ಣ ನಿಗೆ ಬಹಳ ಆಸಕ್ತಿಯುಂಟಾಯಿತು.

"ಪರವಾಯಿಲ್ಲ, ಹೇಳಿ. ನಮ್ಮ ಮಾತು ಯಾರು ಕೇಳುವುದಕ್ಕೆ ಬರುತ್ತಾರೆ ? ನಮ್ಮಷ್ಟಕ್ಕೆ ನಾವು ಮಾತನಾಡೋಣ"

"ಅದಾಗುವುದಿಲ್ಲ. ಕಾಫೀ ಮುಗಿದು ಹೋಗಲಿ''

ಇಬ್ಬರೂ ಹೋಟಲಿಗೆ ಹೋದರು. ಕೇವಲ ಕಾಫಿಯಲ್ಲಿಯೇ ಮುಗಿಯಲಿಲ್ಲ. ತಿಂಡಿಯನ್ನೂ ತೆಗೆದುಕೊಂಡರು.

ಹೊರಗೆ ಬಂದ ಆಮೇಲೆ "ಇನ್ನು ಮಾತನಾಡಬಹುದಲ್ಲ, ಹೇಳಿರಿ" ಎಂದು ರಾಜಣ್ಣ ಕೇಳಿದ.

"ಹೇಳುತ್ತೇನೆ. ಅದಕ್ಕಾಗಿಯೇ ಬಂದಿದ್ದೇನೆ. ನನಗೆ ಈ ದಿನ ಸ್ವಲ್ಪ ಕೆಲಸವಿದೆ. ನೀವು ಕಾಲೇಜಿಗೆ ಹೋಗುವುದಕ್ಕೆ ಆಗುವುದಿಲ್ಲ"

ಗಳಿಗೆಯ ಕಾಲ ಯೋಚಿಸಿ ರಾಜಣ್ಣ ಉತ್ತರ ಹೇಳಿದ.

"ಬೇಡ ಬಿಡಿ. ಒಂದು ದಿನ ಕಾಲೇಜಿಗೆ ಹೋಗದಿದ್ದರೆ ಮುಳುಗಿ ಹೋಗುವುದು ತಾನೇ ಏನು ?"

ಗಾಂಧೀಬಜಾರಿನಲ್ಲಿ ಎರಡು ಕಡೆಯ ಪುಟ್‌ಪಾತುಗಳ ಮೇಲೆಯೂ ಸಾಲುಮರಗಳಿವೆ. ಯಾರೂ ನಿಂತಿಲ್ಲದೇ ಇದ್ದ ಮರದ ಕೆಳಗೆ ಹೋಗಿ ನಿಂತುಕೊಂಡನಂತರ ಶಂಕರ ಹೇಳಿದ.

"ನನ್ನ ತಂಗಿಯೊಬ್ಬಳಿದ್ದಾಳೆ. ಅವಳಿಗೆ ಮದುವೆಯ ವಯಸ್ಸು—"

ಅವಳನ್ನು ಮದುವೆ ಮಾಡಿಕೋ ಎಂದು ಕೇಳುವುದಕ್ಕೆ ಬಂದಿದ್ದಾನೆಯೋ ಇವನು. ರಾಜಣ್ಣ ಯೋಚಿಸುತ್ತಿದ್ದಂತೆಯೇ ಶಂಕರ ಮಾತು ಮುಂದುವರಿಸಿದ.

"ಅವಳಿಗೆ ಅಲ್ಲಲ್ಲಿ ವರಗಳನ್ನು ನೋಡುತ್ತಿದ್ದೇವೆ. ಈಗ ನಾಲ್ಕೈದು ದಿನಗಳ ಹಿಂದೆ ಒಬ್ಬಾನೊಬ್ಬ ವರ ಬಂದು ಅವಳನ್ನು ನೋಡಿದ ಅವನು ಹುಡುಗಿಯನ್ನು ನೋಡಿದ. ಹುಡುಗಿಯನ್ನೂ ಒಪ್ಪಿಕೊಂಡ. ನಮ್ಮ ಮನೆಯವರೂ ಒಂದು ವಿಧವಾಗಿ ಒಪ್ಪಿಕೊಂಡಿದ್ದರು. ಆದರೆ ವರ ನಿಗೆ ಸ್ವಲ್ಪ ವಯಸ್ಸಾಗಿದೆಯಲ್ಲಾ ಎಂದು ಹಿಂದೆಮುಂದೆ ನೋಡುತ್ತಿದ್ದರು ಆ ವರ ಬಂದು "ನಾವೆಲ್ಲಾ ಒಪ್ಪಿಕೊಂಡಾಗಿದೆಯಲ್ಲಾ. ಹುಡುಗಿಯನ್ನು

ನನ್ನೊಡನೆ ಕಳಿಸಿಕೊಡಿರಿ. ಸಿನಿಮಾಗೆ ಕರೆದುಕೊಂಡು ಹೋಗುತ್ತೇನೆ'' ಎಂದು ಹೇಳಿದ. ನಮ್ಮ ತಂದೆ ಖಡಾಖಂಡಿಯಾಗಿ "ಮದುವೆಯಾಗುವವರೆವಿಗೆ ನಾವು ನಮ್ಮ ಹುಡುಗಿಯನ್ನು ಹಾಗೆಲ್ಲಾ ಕಳಿಸಿಕೊಡುವುದಿಲ್ಲ" ಎಂದು ಹೇಳಿಬಿಟ್ಟರು.

ಅವನು ಮುಂದೇನೋ ಹೇಳುವಷ್ಟರಲ್ಲಿ ರಾಜಣ್ಣ "ಸರಿಯಾಗಿದೆ. ಈ ವಿಷಯ ಹೇಳುವುದಕ್ಕೆ ನನ್ನನ್ನು ಕರೆದೆಯಾ ?'' ಎಂದ.

"ಅಷ್ಟೇ ಆಗಿದ್ದರೆ ನಾನೇಕೆ ಈಗ ಬರಬೇಕಾಗಿತ್ತು. ಆತುರಪಡಬೇಡ. ಮುಂದಿನ ವಿಷಯವನ್ನು ಕೇಳು. ನನ್ನ ತಂಗೀ ಷಾರ್ಟ್‌ಹ್ಯಾಂಡ್, ಟೈಪ್ ರೈಟಿಂಗ್ ಕಲಿಯುತ್ತಿದ್ದಾಳೆ. ಆ ವಿಷಯವನ್ನೂ ವರನೊಂದಿಗೆ ಹೇಳಿದ್ದೆವು. ಅವನು ನಿನ್ನೆ ಬೆಳಗಾಗ ಟೈಪ್‌ರೈಟಿಂಗ್ ಇನ್‌ಸ್ಟಿಟ್ಯೂಟ್‌ಗೆ ಹೋಗಿ ನನ್ನ ತಂಗಿಯನ್ನು ನೋಡಬೇಕೆಂದು ಹೇಳಿ ಕಳಿಸಿದ್ದಾನೆ. ಯಾರೋ ಮನೆಯವರು ಬಂದಿರಬೇಕೆಂದು ಅವರು ಕರೆದರು. ನನ್ನ ತಂಗಿ ಹೊರಗೆ ಬಂದು ನೋಡಿದಳು. "ನಿನ್ನ ಜೊತೆಯಲ್ಲಿ ಮಾತನಾಡಬೇಕಾಗಿದೆ. ಸ್ವಲ್ಪ ಬರುತ್ತೀಯಾ ?'' ಎಂದು ಕರೆದ. ಅವಳು ಮಾತನಾಡದೇ ಹೆದರಿಕೊಂಡು ಒಳಗೆ ಹೋಗಿಬಿಟ್ಟಳು. ಅನಂತರ ತನ್ನೊಡನೆ ಟೈಪಿಂಗ್ ಕಲಿಯುತ್ತಿದ್ದ ಗೆಳತಿಯೊಬ್ಬಳೊಡನೆ ಮನೆಗೆ ಬಂದಳು. ನಿನ್ನೆಯಿಂದ ಒಂದೇ ಸಮನೆ ಅಳುತ್ತಾ ಕುಳಿತು ಬಿಟ್ಟಿದ್ದಾಳೆ''

''ಬಹಳ ಸ್ವಾರಸ್ಯವಾಗಿದೆ. ಆ ಮುಂಡೇಮಗ ಹಾಗೇಕೆ ಮಾಡಿದ ?"

"ಅದನ್ನೇ ಕೇಳಿ ಅವನಿಗೆ ಚೀಮಾರಿ ಹಾಕಬೇಕಾಗಿದೆ''

ಅದಕ್ಕೆ ರಾಜಣ್ಣ ಏನೂ ಹೇಳಲಿಲ್ಲ.

''ನಾನೊಬ್ಬನೇ ಹೋಗಬಹುದು. ಆದರೆ ಜೊತೆಯಲ್ಲಿ ಯಾರಾದರೂ ಒಬ್ಬರಿದ್ದರೆ ಒಳ್ಳೆಯದು. ಅದಕ್ಕಾಗಿ ನಿಮ್ಮನ್ನೂ ಕರೆಯುತ್ತಿದ್ದೇನೆ. ಏನು ಹೇಳುತ್ತೀರಿ ?"

"ಆಗತ್ಯವಾಗಿ ಆಗಬಹುದು''

"ಸರಿ. ನಡೆಯಿರಿ''

"ರೂಂವರೆವಿಗೆ ಹೋಗಿ ಕೋಟು ಹಾಕಿಕೊಂಡು ಬಂದುಬಿಡುತ್ತೇನೆ''

''ಕೋಟೇಕೆ ಬನ್ನಿರಿ. ನಾವೇನು ಹೆಣ್ಣು ನೋಡಲು ಹೋಗುತ್ತಿಲ್ಲವಲ್ಲ"

ಬೆಳಗಾಗ ಏಳುತ್ತಿದ್ದ ಹಾಗೆಯೇ ಒಳ್ಳೇ ಕೆಲಸ ಗಂಟು ಬಿದ್ದಿತಲ್ಲ- ಎಂದು ತೋರಿತು ರಾಜಣ್ಣನಿಗೆ.

“ಅಂದಹಾಗೆ. ಮುಖ್ಯವಾದ ವಿಷಯವನ್ನೇ ಕೇಳಲಿಲ್ಲವಲ್ಲ. ಆ ವರನ ಮನೆಯಲ್ಲಿದೆ ಎಂಬುದು ಗೊತ್ತೇನು ?”

“ಗೊತ್ತು. ವಿಲ್ಸನ್‌ಗಾರ್ಡನ್ ಎಕ್ಸ್‌ಟೆನ್‌ಷನ್‌ನಲ್ಲಿ”

‘‘ವರನ ಹೆಸರು”

‘‘ಆನಂದರಾಯನೆಂದು’’

ಇದ್ದಕ್ಕಿದ್ದಂತೆಯೇ ರಾಜಣ್ಣನ ಆಸಕ್ತಿಯು ಹೆಚ್ಚಾಯಿತು.

ಆತುರವನ್ನು ತೋರಿಸಿಕೊಳ್ಳದೇ ‘‘ನಡೆಯಿರಿ, ಹೋಗೋಣ” ಎಂದ.

ಆಟೋರಿಕ್ಷಾ ಮಾಡಿಕೊಂಡು ಇಬ್ಬರೂ ವಿಲ್ಸನ್‌ಗಾರ್ಡನ್ನಿಗೆ ಹೋದರು. ಶಂಕರ ಆನಂದರಾಯನ ಮನೆಯನ್ನು ಮೊದಲೇ ನೋಡಿದ್ದ. ಅದರಿಂದ ಅದನ್ನು ಗುರ್ತಿಸುವುದು ಅವನಿಗೆ ಕಷ್ಟವಾಗಲಿಲ್ಲ.

ಪೋರ್ಚ್ ಹೊಂದು ಮನೆ. ಅದೇ ಆನಂದರಾಯನದು. ಅದರ ಮುಂಬಾಗಿಲಿಗೆ ಬೀಗ ಹಾಕಿತ್ತು.

ಅದನ್ನು ನೋಡಿ ಶಂಕರನು ‘‘ಇಲ್ಲಿಯೇ ಸಮೀಪದಲ್ಲಿ ಅವನ ಭಾವನ ಮನೆಯಿದೆ. ಬನ್ನಿ. ಹೋಗೋಣ” ಎಂದ.

ಸರಿ. ಅದೇ ವ್ಯಕ್ತಿ. ಭಾಗ್ಯಳನ್ನು ವರಿಸಲು ಬಂದಿದ್ದ ಮಾರ್ಜಾಲ ಮುಂಜೇಮಗನೇ-ಎಂದುಕೊಂಡ ರಾಜಣ್ಣ. ಹೆಸರು ಮತ್ತು ವಾಸವಾಗಿರುವ ಸ್ಥಳಗಳನ್ನು ಕೇಳಿದಾಗಲೇ ಅವನಾರೆಂಬುದು ಮನಸ್ಸಿಗೆ ಬಂದಿತ್ತು. ಆದರೆ ಅವನ ಭಾವನೊಬ್ಬನು ಸಮೀಪದಲ್ಲಿದ್ದಾನೆಂದು ಹೇಳುತ್ತಲೇ ಅದು ಮತ್ತಷ್ಟು ಖಚಿತವಾಯಿತು.

ಪಕ್ಕದ ಬೀದಿಯಲ್ಲಿ ಆ ಭಾವನ ಮನೆ. ಅದೂ ಶಂಕರನಿಗೆ ಗೊತ್ತಿತ್ತು. ಅಲ್ಲಿಗೆ ಹೋದರು.

ಗೃಹಸ್ವಾಮಿಯು ಆಗ ತಾನೇ ಮನೆಗೆ ಬಂದಿದ್ದನೆಂದು ಕಾಣುತ್ತದೆ. ಮೈಮೇಲಿದ್ದ ಶಲ್ಯವನ್ನು ತೆಗೆದು ಗೋಡೆಗೆ ಹೊಡೆದಿದ್ದ ಗೂಟಕ್ಕೆ ನೇತು ಹಾಕುತ್ತಿದ್ದ.

ಯಾರೋ ಬಂದಿದ್ದಾರೆಂಬುದನ್ನು ಕಾಲುಸಪ್ಪಳದಿಂದ ಗುರ್ತಿಸಿ ತಿರುಗಿ ನೋಡಿದ ಅವನು ವಸಂತಯ್ಯ.

ಶಂಕರ, ರಾಜಣ್ಣ ಇಬ್ಬರೂ ಸೇರಿ ಬಂದುದನ್ನು ನೋಡಿ ಅವನಿಗೆ ಗಾಬರಿಯಾಯಿತು.

ಅದನ್ನು ತೋರಿಸಿಕೊಳ್ಳದೇ, ಇಲ್ಲದ ನಗುವನ್ನು ತಂದುಕೊಂಡು ''ಬನ್ನಿ, ಕುಳಿತುಕೊಳ್ಳಿ'' ಎಂದ,

ಇಬ್ಬರೂ ಹಜಾರದಲ್ಲಿ ಹಾಸಿದ್ದ ಚಾಪೆಯ ಮೇಲೆ ಕುಳಿತುಕೊಂಡರು.

ವಸಂತಯ್ಯ ಏನು ವಿಷಯವೆಂದು ವಿಚಾರಿಸಿದ.

ಶಂಕರನು ''ನಿಮ್ಮ ಭಾವಮೈದುನ ಆನಂದರಾಯರನ್ನು ನೋಡಲು ಬಂದಿದ್ದೇವೆ'' ಎಂದ.

ಇಬ್ಬರೂ ಬಂದಿದ್ದುದರಿಂದ ಏನೋ ಇರಬೇಕೆಂಬ ವಾಸನೆಯನ್ನು ಗ್ರಹಿಸಿ ವಸಂತಯ್ಯ ''ಅವರು ಇನ್ನೂ ಇಲ್ಲಿಗೆ ಬಂದಿಲ್ಲ. ಅವರ ಮನೆಯಲ್ಲಿ ನೋಡಿದಿರಾ ?" ಎಂದ.

"ನೋಡಿದೆವು. ಆ ಮನೆಗೆ ಬೀಗ ಹಾಕಿದೆ. ಅದರಿಂದಲೇ ಇಲ್ಲಿಗೆ ಬಂದೆವು"

''ಏನು ಮಾಡುವುದು ? ಅವರು ಇಲ್ಲಿಗೆ ಬಂದಿಲ್ಲ"

ಏನು ಮಾಡುವುದೆಂದು ರಾಜಣ್ಣ ಯೋಚಿಸತೊಡಗಿದ. ಆದರೆ ಶಂಕರನ ಬಳಿ ಉತ್ತರ ಸಿದ್ಧವಾಗಿತ್ತು.

''ಅವರು ಬರುವವರೆವಿಗೆ ಕಾಯುತ್ತಾ ಕುಳಿತಿರುತ್ತೇವೆ"

ಪ್ರಾಣಸಂಕಟಕ್ಕಿಟ್ಟುಕೊಂಡಿತು ವಸಂತಯ್ಯನಿಗೆ.

''ಬರುವುದು ಎಷ್ಟು ಹೊತ್ತಾಗುತ್ತದೆಯೋ ?''

"ಎಷ್ಟು ಹೊತ್ತಾದರೂ ಪರವಾಯಿಲ್ಲ. ನೋಡಿಕೊಂಡೇ ಹೋಗಬೇಕೆಂದು ಬಂದಿದ್ದೇವೆ. ಬರುವವರೆವಿಗೆ ಕಾಯುತ್ತೇವೆ"

ವಸಂತಯ್ಯನಿಗೆ ಇನ್ನೇನು ಮಾಡುವುದಕ್ಕೂ ಸಾಧ್ಯವಿರಲಿಲ್ಲ. ಎರಡು ಮೂರು ಬಾರಿ ಒಳಗೆ ಹೋದ. ಪುನಃ ಹೊರಗೆ ಬಂದ ಬೆಂಕಿಯಲ್ಲಿ ಬಿದ್ದ ಹುಳವಿನಂತೆ ಪತರಗುಟ್ಟತೊಡಗಿದ.

ಅರ್ಧ ಗಂಟೆಯಾಯಿತು. ಒಂದು ಗಂಟೆಯಾಯಿತು. ಒಂದೂವರೆ ಗಂಟೆಯಾಯಿತು. ಬಂದು ಕುಳಿತುಕೊಂಡವರು ಹೊರಗೆ ಹೊರಡಲೇ ಇಲ್ಲ.

ವಸಂತಯ್ಯ ಪುನಃ ಒಳಗೆ ಹೋಗಿ ಬಂದ.

ಅದೊಂದು ರೀತಿ ನಗುತ್ತಾ "ನೀವು ಬಂದಾಗಲೇ ನಾನು ಮನೆಗೆ ಬಂದುದು. ಅಷ್ಟು ಹೊತ್ತಿನಲ್ಲಿ ಆನಂದರಾಯರು ಮನೆಯಲ್ಲಿರುವ ಪದ್ಧತಿಯಿಲ್ಲ. ಮಧ್ಯಾಹ್ನ, ರಾತ್ರಿ ಊಟಕ್ಕೆ ಮಾತ್ರ ಇಲ್ಲಿ ಬರುತ್ತಾರೆ. ನನಗೆ ಗೊತ್ತಿರಲಿಲ್ಲ. ಇಲ್ಲಿಲ್ಲವೆಂದು ಹೇಳಿಬಿಟ್ಟೆ. ಏನೋ ಈ ದಿನ ಅಕಸ್ಮಾತ್ ಬೆಳಗಾಗ ಮನೆಗೆ ಬಂದರೆಂದು ನನ್ನ ಹೆಂಡತಿ ಈಗ ತಾನೇ ಹೇಳಿದಳು. ಅವರು ತಲೇನೋವೆಂದು ಮಲಗಿದ್ದಾರಂತೆ" ಎಂದ ವಸಂತ.

ಆ ಮನೆಯಿಂದ ಹೊರಗೆ ಹೋಗಲು ಇದ್ದುದು ಮುಂಬಾಗಿಲೊಂದೇ ಎಂದು ತೋರುತ್ತದೆ. ಮುಂಬಾಗಿಲಿನಲ್ಲಿಯೇ ಇವರುಗಳು ಬಂದು ಕುಳಿತು ಕೊಂಡುಬಿಟ್ಟಿದ್ದಾರೆ. ವಸಂತಯ್ಯ ವಿಧಿಯಿಲ್ಲದೇ ನಿಜವನ್ನು ಹೇಳಬೇಕಾಗಿ ಬಂದಿತು.

"ತಲೇನೋವು ಬಿಟ್ಟ ಮೇಲೆ ಅವರು ಎದ್ದು ಬರಲಿ, ಮಾತನಾಡಿಕೊಂಡು ಹೋಗುತ್ತೇವೆ. ನಮಗೇನೂ ಕೆಲಸವಿಲ್ಲ. ಪುರುಸತ್ತಾಗಿದ್ದೇವೆ"

ವಸಂತಯ್ಯ ತಿದ್ದಿಕೊಳ್ಳುತ್ತಾ "ಹಾಗೇನೂ ಇಲ್ಲ. ಆತ ಮನೆಯಲ್ಲಿದ್ದಾನೆಂಬ ವಿಷಯ ಗೊತ್ತಾಗುತ್ತಲೇ ಎಬ್ಬಿಸಿ ನೀವು ಬಂದಿರುವುದನ್ನು ಹೇಳಿದೆ. ಇನ್ನೇನು ಬರುತ್ತಾರೆ'' ಎಂದ.

ಶಂಕರನು 'ಬರಲಿ' ಎಂದು ಅತ್ಯಂತ ಸಮಾಧಾನವನ್ನು ಪ್ರದರ್ಶಿಸುತ್ತಾ ಹೇಳಿದ.

ಸುಮಾರು ಎರಡು ನಿಮಿಷಗಳಲ್ಲಿ ಆನಂದರಾಯರು ಹೊರಗೆ ಬಂದ. ಅವನನ್ನು ನೋಡಿದರೆ ತಲೆಯ ನೋವಿನಿಂದ ಮಲಗಿದ್ದವನಂತೆ ಕಂಡುಬರಲಿಲ್ಲ. ಹೊರಗೆ ಹೋಗಲು ಸಿದ್ಧವಾಗಿದ್ದವನಂತೆ ಮಡಿಯ ಪಂಚೆ ಮತ್ತು ಷರಟುಗಳನ್ನು ಧರಿಸಿದ್ದ. ಅದರ ಮಡಿಕೆಗಳು ಸಹ ಮಾಸಿರಲಿಲ್ಲ.

ಇವರಿಬ್ಬರೂ ಒಟ್ಟಾಗಿ ಬಂದಿರುವುದೂ, ನೋಡಿಕೊಂಡೇ ಹೋಗುತ್ತೇವೆಂದು ಹಟ ಹಿಡಿದು ಕುಳಿತ ಕೊಂಡಿರುವುದೂ ಇವುಗಳನ್ನೂ ನೋಡಿದರೆ ಏನೋ ವಿಶೇಷವಿರಬೇಕೆಂದೂ ಆ ವಿಶೇಷವು ತನಗೆ ಅನುಕೂಲವಾದುದಲ್ಲವೆಂದೂ ಆನಂದರಾಯನಿಗೆ ಅರ್ಥವಾಯಿತು.

ಆದರೂ ಸಹ ಭಂಡತನದಿಂದ "ಏನು ಸಮಾಚಾರ. ಏನು ಬಂದಿರಿ ?' ಎಂದು ಲೋಕಾಭಿರಾಮವಾಗಿ ಕೇಳಿದ ಆನಂದರಾಯ.

ತನ್ನ ಗೆಳೆಯನು ಅದಕ್ಕೇನು ಹೇಳುತ್ತಾರೆಯೋ – ಎಂದು ಶಂಕರ ಯೋಚಿಸತೊಡಗಿದ.

ಇಷ್ಟು ಹೊತ್ತೂ ಸಮಾಧಾನವನ್ನು ನಟಿಸುತ್ತಿದ್ದ ಶಂಕರ ಉದ್ರೇಕವಾಗಿ "ನಿನ್ನೆಯ ದಿನ ಬೆಳಗಾಗ ಟೈಪ್‌ರೈಟಿಂಗ್ ಇನ್‌ಸ್ಟಿಟ್ಯೂಟಿನ ಬಳಿ ಹೋಗಿ ನನ್ನ ತಂಗಿಗೆ ಕರೆಕಳಿಸಿದರಂತೆ. ಅದೇಕೆ ಎಂದು ಕೇಳಿಕೊಂಡು ಹೋಗುವುದಕ್ಕೆ ಬಂದೆ" ಎಂದ.

ಈ ಪ್ರಸಂಗವು ರಾಜಣ್ಣನ ಎದುರಿಗೆ ನಡೆಯುವುದು ಆನಂದರಾಯನಿಗೆ ಇಷ್ಟವಿರಲಿಲ್ಲ. ಆದರೆ ಗತ್ಯಂತರವಿಲ್ಲ, ಪ್ರಾಪ್ತವಾಗಿಬಿಟ್ಟಿದೆ.

ಏನೂ ಆಗದಿದ್ದರೆ ಹೇಗೋ ಹಾಗೆ ಸಮಾಧಾನದಿಂದ "ನಾನು ಇತರ ಕಡೆಯೂ ಹೆಣ್ಣುಗಳನ್ನು ನೋಡುತ್ತಿದ್ದೇನೆ. ನಿಮ್ಮ ತಂಗಿ ನನ್ನನ್ನು ಮದುವೆಯಾಗುತ್ತಾಳೆಯೋ ಇಲ್ಲವೋ ಸ್ಪಷ್ಟವಾಗಿ ಕೇಳಿ ತಿಳಿದುಕೊಳ್ಳಬೇಕೆನ್ನಿಸಿತು. ಅದರಿಂದ ಹೋಗಿದ್ದೆ" ಎಂದ,

ಆನಂದರಾಯ ಶಂಕರನಿಗೆ ನಿದಾನದ್ರೋಹಿಯಂತೆ ಕಂಡುಬಂದ.

ಶಂಕರ ಒಳ್ಳೆಯ ದೃಢಕಾಯ. ಗರಡಿಯಲ್ಲಿ ಸಾಮು ಮಾಡಿ ಗಟ್ಟಿಯಾಗಿದ್ದ.

ಆನಂದರಾಯ ಮಾತನಾಡುವ ತರಹ ನೋಡಿ, ಕೋಪ ಉಕ್ಕಿಬಂದು. ಅವನ ಷರಟು ಹಿಡಿದುಕೊಂಡು "ಲವಡೀ ಮಗನೇ. ನಾಟಕದಲ್ಲಿ ಮಾತನಾಡುವಂತೆ ಆಡುತ್ತೀಯಾ ? ನಿನಗೇನು ಜ್ಞಾನವಿದೆಯೋ ಇಲ್ಲವೋ ? ಯಾರೊಂದಿಗೆ ಮಾತನಾಡುತ್ತಿದ್ದೀ ಎಂದು ತಿಳಿದುಕೊಂಡಿದ್ದೀಯೆ. ಕೈ ಕಾಲು ಮುರಿದುಬಿಟ್ಟೇನು ? ಹುಡುಗಿ ಒಪ್ಪಿದ್ದಾಳೆಯೋ ಇಲ್ಲವೋ ತಿಳಿದುಕೊಳ್ಳಬೇಕಾಗಿದ್ದರೆ ನಮ್ಮ ಮನೆಯಲ್ಲಿ ಬಂದು ಕೇಳಬೇಕಾಗಿತ್ತು. ಅದು ಬಿಟ್ಟು ಟೈಪ್‌ರೈಟಿಂಗ್ ಇನ್‌ಸ್ಟಿಟ್ಯೂಟ್‌ಗೆ ಹೋಗಿ, ಹುಡುಗಿಯನ್ನು ಕರೆದು ಮಾತನಾಡಿಸಲು ನಿನಗೆ ಎಷ್ಟು ಧೈರ್ಯ ?" ಎಂದು ಕೂಗು ಹಾಕಿದ.

ವಿಷಯ ಪ್ರಕೋಪಕ್ಕೆ ಬರುತ್ತಲೂ ವಸಂತಯ್ಯ ಭಾವಮೈದುನನ್ನು ಬಿಡಿಸಿಕೊಳ್ಳುವುದಕ್ಕೆ ಮುಂದೆ ಬಂದ.

ಬಲಗೈಯ್ಯಲ್ಲಿ ಆನಂದರಾಯನ ಬಟ್ಟೆಯನ್ನು ಹಿಡಿದುಕೊಂಡಿದ್ದ ಶಂಕರ ಎಡ ಮೊಳಕೈಯಿಂದ ತಳ್ಳಲು ವಸಂತಯ್ಯ ಅಷ್ಟು ದೂರ ಹೋಗಿ ಬಿದ್ದ.

ಅಯ್ಯೋ ಎಂದು ಅರಚಿಕೊಳ್ಳುತ್ತಾ ಗಿರಿಜಮ್ಮನೂ, ಅವಳ ಇಬ್ಬರು ಮಕ್ಕಳೂ ಹೊರಗೆ ಬಂದರು.

ವಸಂತಯ್ಯನಿಗೆ ದಿಗಿಲಾಯಿತು. ಇನ್ನು ಬೀದಿಯಲ್ಲಿ ಹೋಗುವ ಜನ ಸಹ ಬಂದು ನೆರೆದುಬಿಡುತ್ತಾರೆಂದು ಹೆದರಿದವನು ಕೂಡಲೇ ಮುಂದೆ ಬಂದು ಶಂಕರನ ಎರಡು ಕಾಲುಗಳನ್ನೂ ಹಿಡಿದುಕೊಂಡು "ನನಗೆ ಒಂದೂ ಗೊತ್ತಿಲ್ಲ. ಏನು ವಿಷಯ ವಿಚಾರಿಸೋಣ. ದಯವಿಟ್ಟು ಅವನನ್ನು ಬಿಟ್ಟು ಬಿಡಿ'' ಎಂದ.

ಕಾಲು ಕಟ್ಟಿಕೊಂಡ ಮೇಲೆ ಇನ್ನೇನು ಮಾಡುವುದು.

ಆದರೂ ಶಂಕರನಿಗೆ ಕೋಪವು ಇಳಿಯದೇ ಷರಟು ಬಿಟ್ಟು ಅದೇ ಕೈ ಯಿಂದಲೇ ರಪ್ಪನೆ ಆನಂದರಾಯನ ಮುಖದ ಮೇಲೆ ಹೊಡೆದು "ನಿಮ್ಮ ಭಾವ ಕಾಲು ಕಟ್ಟಿಕೊಂಡುದರಿಂದ ಈ ದಿನ ಬಿಟ್ಟಿದ್ದೇನೆ, ಇನ್ನೊಂದು ದಿನ ನಮ್ಮ ಮನೆಯ ಬೀದಿಯಲ್ಲಿಯೋ, ಇನ್ಸ್ಟಿಟ್ಯೂಟ್‌ನ ಬೀದಿಯಲ್ಲಿಯೋ ನೀನು ಬಂದರೆ ಕಾಲು ಮುರಿದು ಕೈಗೆ ಕೊಡುತ್ತೇನೆ'' ಎಂದು ಹೇಳಿದ.

ತಾನು ಹೆಚ್ಚುಕಡಿಮೆ ಮಾಡಿದರೆ ತನಗೆ ಹೊಡೆತಗಳು ಬೀಳುತ್ತ ವೆಂದು ಆನಂದರಾಯ ಪೆಚ್ಚುಮೋರೆ ಹಾಕಿ ಕುಳಿತುಕೊಂಡ,

ಶಂಕರನು ಅಲ್ಲಿಗೂ ಬಿಡದೇ ವಸಂತಯ್ಯನನ್ನು ಉದ್ದೇಶಿಸಿ "ಅವ ನಂತೂ ಗುಂಡುಗೋವಿ ಮುಂಡೇಮಗ. ನೀನು ಸಂಗೀತದ ಮೇಷ್ಟ್ರು ಎನ್ನುತ್ತೀಯೆ ? ನಿನಗೆ ಹೆಂಡತಿ ಮಕ್ಕಳು ಬೇರೇ ಇರುವಂತಿದೆ. ಇಂತಹ ಅಯೋಗ್ಯನನ್ನು ಮನೆಗೆ ಯಾಕೆ ಸೇರಿಸುತ್ತೀಯೆ ?" ಎಂದ.

ಆನಂದರಾಯನಿಗೆ ತಗುಲಿಕೊಂಡಿದ್ದವನು !ತನಗೇ ತಗುಲಿಕೊಂಡ ನಲ್ಲಾ ಎಂಬ ಭಯದಿಂದ ವಸಂತಯ್ಯ ತನ್ನ ಭಾವಮೈದುನನ ಕಡೆಗೆ ನೋಡಿ "ಅದೇಕೆ, ಆ ಹುಡುಗಿಯನ್ನು ಮಾತನಾಡಿಸುವುದಕ್ಕೆ ಹೋದೆ, ಆನಂದ. ಒಟ್ಟಿನಲ್ಲಿ ನಿನಗೆ ಬುದ್ಧಿಯಿಲ್ಲ" ಎಂದ.

ಅದಕ್ಕೂ ಆನಂದರಾಯ ಏನೂ ಹೇಳಲಿಲ್ಲ.

ಶಂಕರನು ಪುನಃ "ಅವನಿಗೆ ಬುದ್ಧಿಯಿಲ್ಲದಿದ್ದರೆ ನಾನು ಕಲಿಸುತ್ತೇನೆ. ಆದರೆ ನೀನು ಹುಷಾರಾಗಿರು. ಇನ್ನೊಂದು ದಿನ ಈ ಮುಂಡೇ ಮಗನನ್ನು ಕಟ್ಟಿಕೊಂಡು ಎಲ್ಲಿಯಾದರೂ ಹೆಣ್ಣು ಕೇಳುವುದಕ್ಕೆ ಹೋದೆಯೋ ಮನೆ

ಯಿಂದ ಎಳೆದುಕೊಂಡುಹೋಗಿ ನಿನ್ನನ್ನು ಹೊಡೆಯುತ್ತೇನೆ. ಅಷ್ಟೇ ಅಲ್ಲ. ಸಂಗೀತ ಪಾಠಗಳಿಗೆ ಹೋಗುವ ಮನೆಗಳಿಗೆಲ್ಲಾ ಬಂದು ಅವರಿಗೆಲ್ಲಾ ನಿನ್ನ ಯೋಗ್ಯತೆಯನ್ನು ಹೇಳಿ, ಅವರುಗಳ ಎದುರಿಗೇ ಹೊಡೆದು ಜೀವ ತೆಗೆಯುತ್ತೇನೆ, ಹುಷಾರ್" ಎಂದ.

ವಸಂತಯ್ಯನು ದೈನ್ಯದಿಂದ "ಈ ಸಲಕ್ಕೆ ಕ್ಷಮಿಸಿಬಿಡಿ, ಸ್ವಾಮಿ. ಇನ್ನು ಮುಂದೆ ಸ್ವಲ್ಪವೂ ಹೆಚ್ಚು ಕಡಿಮೆಯಾಗದಂತೆ ನೋಡಿಕೊಳ್ಳುತ್ತೇನೆ" ಎಂದು ಅಂಗಲಾಚಿ ಕೇಳಿಕೊಂಡ.

ಅಷ್ಟೇಅಲ್ಲದೇ ರಾಜಣ್ಣನ ಕಡೆಗೂ ದೈನ್ಯತೆಯಿಂದ ನೋಡಿದ.

ರಾಜಣ್ಣ ಗೆಳೆಯನನ್ನು ಎಬ್ಬಿಸಿ ಹೊರಗೆ ಕರೆದುಕೊಂಡು ಬಂದ.

ದಾರಿಯಲ್ಲಿ ಹೋಗುತ್ತಾ "ಶಂಕರ, ಈ ಆನಂದರಾಯ ಘಾಟೀ ಆಸಾಮಿ ಇರುವಂತಿದ್ದಾನಪ್ಪ. ನಾಲ್ಕೈದು ದಿನಗಳ ಹಿಂದೆ ನಾನು ಬಾಡಿಗೆಗೆ ಇರುವವರ ಮನೆಗೆ ಬಂದು ಅವರ ಹುಡುಗಿಯನ್ನು ನೋಡಿ ಮದುವೆ ಮಾಡಿಕೊಳ್ಳಲು ಒಪ್ಪಿಕೊಂಡು ಬಂದಿದ್ದಾನೆ'' ಎಂದ.

ಶಂಕರನು ಪುನಃ ಹಿಂದೆ ತಿರುಗಿಕೊಂಡು "ಆಗಲೇ ಯಾಕೆ ಹೇಳಲಿಲ್ಲ. ಅವನಿಗೆ ಗ್ರಹಚಾರ ಬಿಡಿಸಿ ಬರುತ್ತಿದ್ದೆ. ಈಗೇನು ಮುಳುಗಿಹೋದುದು,. ವಿಚಾರಿಸಿಕೊಂಡು ಬರೋಣ'' ಎಂದು ಹೇಳಿದ.

ಶಂಕರನನ್ನು ಸಮಾಧಾನಪಡಿಸಿ ಮನೆಗೆ ಕರೆದುಕೊಂಡು ಹೋಗಬೇಕಾದರೆ ರಾಜಣ್ಣನಿಗೆ ಸಾಕುಸಾಕಾಗಿ ಹೋಯಿತು.

## ೧೩

ಈ ಘಟನೆಯು ನಡೆದ ಮೇಲೆ ಒಂದು ಕ್ಷಣ ಕೂಡಾ ತಡ ಮಾಡುವುದು ರಾಜಣ್ಣನಿಗೆ ಸಾಧ್ಯವಾಗಲಿಲ್ಲ. ಅವನು ಮನೆಗೆ ಬರುವ ವೇಳೆಗೆ ಎಲ್ಲರಿಗೂ ಊಟಗಳಾಗಿದ್ದವು.

ಅವನು ಬಂದುದನ್ನು ನೋಡಿದ ವಿಶಾಲಾಕ್ಷಮ್ಮನವರು ಒಗೆದು ಬಡಿಸುತ್ತಾ ಕೇಳಿದರು.

"ರಾಜಣ್ಣ. ಈ ದಿನ ಕಾಲೇಜು ಇಲ್ಲವೇನು ?"

"ಇದೆಯಮ್ಮ. ತಲೇನೋಯುತಿತ್ತು. ಅದಕ್ಕಾಗಿ ಹೋಗಲಿಲ್ಲ"

"ಇಷ್ಟು ಹೊತ್ತು ಎಲ್ಲಿ ಹೋಗಿದ್ದೆ"

"ಯಾರೋ ಸ್ನೇಹಿತ ಬಂದಿದ್ದ. ಅವನೊಂದಿಗೆ ಮಾತನಾಡಿಕೊಂಡು ಹೊರಟುಹೋದೆ"

ಆಕೆ ಒಂದು ಪ್ರಶ್ನೆಗೂ ಮತ್ತೊಂದು ಪ್ರಶ್ನೆಗೂ ಸಂಬಂಧವಿಲ್ಲದಂತೆ ಕೇಳಿದ್ದರು. ಅವನೂ ಅದೇ ರೀತಿಯಾಗಿ ಉತ್ತರ ಕೊಟ್ಟಿದ್ದ. ಅನಂತರ ಎರಡು ಪ್ರಶ್ನೆಗಳನ್ನೂ ಗಂಟುಹಾಕಿ ಕೇಳಿದರು.

"ತಲೇನೋವಾಗಿದ್ದರೆ ಹಾಯಾಗಿ ಮಲಗಿಕೊಂಡಿರದೇ ಅನ್ಯಾಯವಾಗಿ ಬಿಸಿಲು ಹೋಗುತ್ತದೆಯಲ್ಲಾ ಎಂದು ಅಲೆಯುವುದಕ್ಕೆ ಹೋಗಿದ್ದೆಯಾ ?"

ಈಗ ತಾನು ಕೊಟ್ಟ ಉತ್ತರಗಳೆಷ್ಟು ಪರಸ್ಪರ ಎಷ್ಟು ಅಸಂಬದ್ಧ ವೆಂದು ರಾಜಣ್ಣನಿಗೆ ಅರಿವಾಯಿತು. ಏನೊಂದು ಉತ್ತರವನ್ನೂ ಕೊಡದೇ ಸುಮ್ಮನಾದ.

ತಮ್ಮ ಪ್ರಶ್ನೆಗೆ ಉತ್ತರ ಕೊಡಲು ಅವನಿಗೇನೋ ಸಂಕೋಚವೆಂದು ಕೊಂಡು ವಿಶಾಲಾಕ್ಷಮ್ಮನವರು ಸುಮ್ಮನಾದರು.

ಊಟ ಮುಗಿಸಿಕೊಂಡ ರಾಜಣ್ಣ ಕೋಣೆಯಲ್ಲಿ ಬಂದು ಕುಳಿತು ಕೊಂಡ. ಬೆಳಗಾಗ ನಡೆದ ಘಟನೆಯೇ ಮನಸ್ಸಿನಲ್ಲಿ ಕುದಿಯುತ್ತಿತ್ತು. ಇಂತಹ ಘಾತುಕನಿಂದ ಭಾಗ್ಯಳನ್ನು ಉಳಿಸುವುದು ಹೇಗೆಂಬುದೇ ಮರು ಕಳಿಸಿ ಅವನಿಗೆ ಬರುತ್ತಿದ್ದ ಯೋಚನೆ.

ಯೋಚನೆ ಯಾವ ರೀತಿಯಾಗಿಯೂ ಬಗೆಹರಿಯುವಂತಿರಲಿಲ್ಲ.

ಭಾಗ್ಯಳನ್ನು ನೋಡಿ, ಎಲ್ಲಾ ವಿಷಯಗಳನ್ನು ಅವಳಿಗೆ ತಿಳಿಸಿ, ಅವಳೇನು ಹೇಳುತ್ತಾಳೆಯೋ ಕೇಳೋಣವೆಂದು ತೋರಿತು.

ಆದರೆ ಗುಂಡೂರಾಯರು ಹಜಾರದಲ್ಲಿಯೇ ಕುಳಿತುಕೊಂಡಿದ್ದಾರೆ.

ಎಷ್ಟು ಹೊತ್ತಿಗೆ ಸಂಜೆಯಾಗುತ್ತದೆ, ಯಾವಾಗ ಅವರು ಹೊರಗೆ ಹೋಗುತ್ತಾರೆ ಎಂದೇ ಕಾಯುತ್ತಿದ್ದ.

ಎಷ್ಟು ಕಾದರೂ ಸಂಜೆಯಾಗುವಂತೆ ಕಂಡುಬರಲಿಲ್ಲ.

ಓದುವ ಪುಸ್ತಕವನ್ನು ತೆಗೆದುಕೊಂಡ. ಓದಲಾಗಲಿಲ್ಲ. ನಿದ್ದೇ ಮಾಡೋಣವೆಂದು ಮಲಗಿಕೊಂಡ, ನಿದ್ದೆ ಬರಲಿಲ್ಲ. ಎದ್ದು ಕುಳಿತು

ಕೊಂಡ. ಪರದಾಡುತ್ತಿದ್ದ ಮನಸ್ಸು ಸಾವಧಾನವಾಗಿ ಕುಳಿತುಕೊಳ್ಳಲು ಅವಕಾಶಕೊಡಲಿಲ್ಲ.

ಏನು ಮಾಡುವುದಕ್ಕೂ ಆಗದೇ, ಏನು ಮಾಡದೇ ಇರುವುದಕ್ಕೂ ಆಗದೇ, ಅವನು ಒದ್ದಾಡುತ್ತಿದ್ದ ಹಾಗೆಯೇ ವಿಶಾಲಾಕ್ಷಮ್ಮನವರು ಒಳಗಡೆ ಯಿಂದ "ರಾಜಣ್ಣ" ಎಂದು ಕೂಗಿದರು.

ಆ ಧ್ವನಿಯು ಕಾಫಿಯ ಕರೆಯೆಂಬುದು ಅವನಿಗೆ ಗೊತ್ತಾಯಿತು. ರಜಾ ದಿನಗಳಲ್ಲಿ ಮಧ್ಯಾಹ್ನದ ಹೊತ್ತು ಅವನು ಮನೆಯಲ್ಲಿಯೇ ಇರುತ್ತಿದ್ದ ನಷ್ಟೇ. ಆಗೆಲ್ಲಾ ಹಾಗೆ ಕರೆದಾಗ ಆಕೆ ಕಾಫಿಯನ್ನು ಕೊಡುತ್ತಿದ್ದರು.

ರಾಜಣ್ಣ ಒಳಗೆದ್ದು ಹೋದ.

ಅವನು ಊಹಿಸಿದ್ದು ಸರಿ. ಕಾಫಿಯನ್ನುಕೊಟ್ಟರು. ಅವನು ಆ ಮನೆಯಲ್ಲಿ ಬಂದಿರಲಾರಂಭಿಸಿದ ಮೊದಲಲ್ಲಿ ಹಜಾರದಲ್ಲಿ ಚಾಪೆಯ ಮೇಲೆ ಕುಳಿತ ಗುಂಡೂರಾಯರೊಂದಿಗೇ ಅವನಿಗೆ ಕಾಫಿಯಾಗುತಿತ್ತು. ಈಗ ಅವರಿಗೆ ಅಸಮಾಧಾನವಾದ ಮೇಲೆ ಬೆಳಗಾಗಿನ ಹೊತ್ತು, ಮನೆಯಲ್ಲಿದ್ದ ದಿನಗಳಲ್ಲಿ ಮಧ್ಯಾಹ್ನದ ಹೊತ್ತು ನಡುಮನೆಯಲ್ಲಿಯೇ ಕುಳಿತು ಕಾಫೀ ಕುಡಿಯುತ್ತಿದ್ದ.

ಡಿಕಾಕ್ಷನ್ ಶೋಧಿಸಿ, ಹಾಲು ಬೆರಸಿದ ಕೂಡಲೇ ವಿಶಾಲಾಕ್ಷಮ್ಮ ಗಂಡ ನಿಗೆ ಕಾಫಿಯನ್ನುಕೊಟ್ಟು, ಹಜಾರದಿಂದ ಹಿಂತಿರುಗುತ್ತಾ ಅವನನ್ನು ಕರೆದಿ ದ್ದರು. ರಾಜಣ್ಣ ಒಳಗೆ ಹೋದೊಡನೆಯೇ ಕಾಫಿಯನ್ನು ಕೊಟ್ಟರು. ಅದನ್ನು ಕುಡಿದು ಕೋಣೆಗೆ ಹೊರಟ.

ಬರುತ್ತಾ ಇರುವಾಗ ಗುಂಡೂರಾಯರು ಕೋಟು ಹಾಕಿಕೊಂಡು ಪೇಟಾ ಧರಿಸುತ್ತಿರುವುದನ್ನು ನೋಡಿದ. ಅವನಿಗೆ ಅಮಿತಾನಂದವಾಯಿತು. ಅವರು ಎಲ್ಲಿಗೋ ಹೊರಟು ಹೋಗುತ್ತಿದ್ದಾರೆ. ಇನ್ನು ಭಾಗ್ಯಳೊಂದಿಗೆ ಮಾತನಾಡಲು ಸಾಯಂಕಾಲದವರೆವಿಗೆ ಕಾಯಬೇಕಾಗಿಲ್ಲ. ಸಂಜೆ ಅವರು ವಾಕಿಂಗ್‌ಗೆ ಹೋಗುವುದನ್ನು ನಿರೀಕ್ಷಿಸಬೇಕಾಗಿಲ್ಲ. ಏನು ಕೆಲಸವಿದೆಯೋ ಆತ ಈಗಲೇ ಹೊರಟು ಹೋಗುತ್ತಿದ್ದಾರೆ.

ಮನಸ್ಸಿಗಾದ ಆನಂದವನ್ನು ಒಳಗೇ ಮುಚ್ಚಿಟ್ಟುಕೊಂಡು ಕೋಣೆಗೆ ಹೋಗಿ ನಿರೀಕ್ಷಿಸಿದ.

ಎರಡುಮೂರು ನಿಮಿಷಗಳೊಳಗಾಗಿ ಗುಂಡೂರಾಯರು "ಬೀದಿಯ ಬಾಗಿಲು ಹಾಕಿಕೋ" ಎಂದು ಹೆಂಡತಿಯನ್ನು ಕೂಗಿ ಹೊರಟು ಹೋದರು.

ಅವರು ಹೊರಗೆ ಹೋದನಂತರ ಕೆಲವು ನಿಮಿಷಗಳನ್ನು ರಾಜಣ್ಣ ಅದು ಹೇಗೆ ಕಳೆದನೋ ದೇವರಿಗೇ ಗೊತ್ತು. ಬೆಳಗಿನಿಂದ ಅಷ್ಟು ಹೊತ್ತು ಕಾದಿದ್ದ ಆ ಕೆಲವು ನಿಮಿಷಗಳನ್ನು ಕಾದಷ್ಟು ತೊಂದರೆಯಾಗಲಿಲ್ಲ.

ಗುಂಡೂರಾಯರು ಕೂಗು ಹಾಕಿ ಹೋದನಂತರ ವಿಶಾಲಾಕ್ಷಮ್ಮನವರೋ ಭಾಗ್ಯಳೋ ಬಂದು ಬೀದಿಯ ಬಾಗಿಲು ಹಾಕಿಕೊಂಡಿದ್ದರು. ಆಗಲೇ ನೋಡಬೇಕೆನ್ನಿಸಿತು. ನೋಡುವುದು ಚೆನ್ನಾಗಿರುವುದಿಲ್ಲವೆಂದು ಸುಮ್ಮನಾಗಿದ್ದ.

ಈಗ ಗುಂಡೂರಾಯರು ಹೊರಗೆ ಹೋದ ಸ್ವಲ್ಪ ಹೊತ್ತಿನವರೆವಿಗೆ ಕಷ್ಟದಿಂದ ತಡೆದುಕೊಂಡಿದ್ದು ಬೀದಿಯ ಕೋಣೆಯಿಂದ ಹಜಾರಕ್ಕೆ ಹೋಗುವ ಬಾಗಿಲು ತೆಗೆದುಕೊಂಡು ಒಳಗೆ ಬಂದ. ಹಜಾರದಲ್ಲಿ ಸುತ್ತಲೂ ನೋಡಿದ. ಯಾರೂ ಇರಲಿಲ್ಲ. ಹಾಗೆಯೇ ನಡುಮನೆಗೆ ಪ್ರವೇಶಮಾಡಿ ವಿಶಾಲಾಕ್ಷಮ್ಮನವರು ಏನು ಮಾಡುತ್ತಿದ್ದಾರೆಂದು ನೋಡಿದ. ಆಕೆ ಅಡಿಗೆ ಮನೆಯಲ್ಲಿ ಕುಳಿತು ಏನೋ ಹುರಿಯುತ್ತಿದ್ದರು. ಸಂಜೆ ತಿಂಡಿಗಾಗಿ ಅಡಿಗೆ ಮಾಡುತ್ತಿದ್ದರೆಂದು ಕಂಡುಬರುತ್ತದೆ.

ಭಾಗ್ಯಳೊಡನೆ ಮಾತನಾಡಲು ಪರಿಸ್ಥಿತಿಯು ಸರಿಯಾಗಿದೆಯೆಂದುಕೊಂಡವನು ಪುನಃ ಹಜಾರಕ್ಕೆ ಬಂದು ಬಲಗಡೆಯಿದ್ದ ಒಳಕೋಣೆಗೆ ಪ್ರವೇಶಮಾಡಿದ.

ಚಾಪೆಯ ಮೇಲೆ ದಿಂಬು ಹಾಕಿಕೊಂಡು ಭಾಗ್ಯ ಮಲಗಿದ್ದಳು. ಎಚ್ಚರವಾಗಿಯೇ ಇದ್ದಳು. ಯಾವ ಹೊತ್ತೂ ರಾಜಣ್ಣ ಆ ಕೋಣೆಯೊಳಗೆ ಪ್ರವೇಶಿಸಿಯೇ ಇರಲಿಲ್ಲ. ಅಂತಹವನು ಬಂದುದರಿಂದ ಗಾಬರಿಗೊಂಡು ಹಠಾತ್ತನೆ ಎದ್ದು ಕುಳಿತುಕೊಂಡಳು.

"ಇಲ್ಲೇಕೆ ಬಂದಿರಿ ?" ಎಂಬುದಾಗಿ ಕೇಳಬೇಕೆಂದು ಅವಳ ಮನಸ್ಸಿಗೆ ಬಂದಿತ್ತು. ಗಾಬರಿಗೊಂಡಿದ್ದ ಅವಳಿಂದ ಮಾತನಾಡುವುದಕ್ಕೆ ಆಗಲಿಲ್ಲ.

ಆದರೆ ಅವಳ ಮುಖಭಾವದಲ್ಲಿಯೂ, ನೋಡುತ್ತಿದ್ದ ತರಹದಲ್ಲಿಯೂ ಆ ಪ್ರಶ್ನೆಯು ಸ್ಪಷ್ಟವಾಗಿ ಎದ್ದು ಕಾಣುತಿತ್ತು.

"ನಿಮ್ಮೊಂದಿಗೆ ಸ್ವಲ್ಪ ಮಾತನಾಡಬೇಕಾಗಿದೆ"

ಭಾಗ್ಯ ಅವನನ್ನು ಕುಳಿತುಕೊಳ್ಳುವಂತೆ ಹೇಳಲಿಲ್ಲ. ಸೌಜನ್ಯಕ್ಕಾಗಿ ಹೇಳಬೇಕಾದ ಆ ಮಾತು ತೋರಲಿಲ್ಲ.

"ಏನು ಹೇಳಿ"

"ದಯವಿಟ್ಟು ಹೊರಗಡೆ ಬನ್ನಿ"

ಗಳಿಗೆಯ ಕಾಲ ಯೋಚಿಸಿದಳು. ಈ ಕೋಣೆಯಲ್ಲಿ ಅವನೊಂದಿಗೆ ಮಾತನಾಡುವುದಾದರೆ ಅದಕ್ಕೆ ಸಂಕೋಚಿಸಬೇಕಾಗಿದೆ. ಹೊರಗಡೆ ಹೋಗಿ ಮಾತಾಡುವುದಕ್ಕೆ ಯೋಚಿಸಬೇಕಾದ್ದು ತಾನೇ ಏನಿದೆ ?

ನೇರವಾಗಿ ಎದ್ದು ಹೊರಗಡೆ ಹೋದಳು. ರಾಜಣ್ಣ ಬೀದಿಯ ಕೋಣೆಗೆ ಹೋದ. ಅಲ್ಲಿಗೂ ಅನುಸರಿಸಿ ಹೋದಳು.

ಭಾಗ್ಯಳನ್ನು ಕುಳಿತುಕೊಳ್ಳುವಂತೆ ಹೇಳಿ, ತಾನೂ ಕುಳಿತುಕೊಂಡು ಬೆಳಗಾಗ ನಡೆದ ಪ್ರಸಂಗವೆಲ್ಲವನ್ನೂ ವಿವರವಾಗಿ ಅವಳೊಂದಿಗೆ ಹೇಳಿದ. ಕೇಳಿದ ಭಾಗ್ಯಳಿಗೆ ಸಖೇದ ಆಶ್ಚರ್ಯಗಳುಂಟಾದವು.

ಕಡೆಯದಾಗಿ "ಏನಿಲ್ಲವೆಂದರೂ ನಾನು ನಿಮ್ಮ ಮನೆಯಲ್ಲಿ ನಾಲ್ಕು ಹೊತ್ತು ಊಟ ಮಾಡಿದ್ದೇನೆ ಅವನ ವಿಷಯ ಗೊತ್ತಾದ ಮೇಲೆಯೂ ಅದನ್ನು ಹೇಳದೇ ಇರುವುದು ಅನ್ಯಾಯವೆಂದುಕೊಂಡವನು ನಿಮಗೆಲ್ಲಾ ಹೇಳಿದ್ದೇನೆ" ಎಂದ.

ಅವನು ಹೇಳಿದ್ದೆಲ್ಲವನ್ನೂ ಕೇಳಿದ್ದಳು. ಆದರೆ ಅದಕ್ಕೆ ಏನು ಹೇಳ ಬೇಕೆಂಬುದು ಅವಳಿಗೆ ತೋರಲಿಲ್ಲ. ಸುಮ್ಮನಿದ್ದಳು.

"ಆ ದಿನ ಬಂದವನು ಒಪ್ಪಿಕೊಂಡು ಹೋದ. ಲಗ್ನಪತ್ರಿಕೆ ಯಾವತ್ತು ಮಾಡುವುದೆಂದು ಸಹ ಕೇಳಿದ. ಅಂತಹವನು ಅವರ ಮನೆಗೆ ಹೋಗಿ ಹೆಣ್ಣೇಕೆ ನೋಡಬೇಕು ? ಆದಾಯಿತಲ್ಲ, ಇನ್ನೂ ಮಾತನಾಡಿ ಗೊತ್ತಾಗುವುದಕ್ಕೇ ಇಲ್ಲ. ಅಂತಹದರಲ್ಲಿ ಅವಳನ್ನು ಸಿನಿಮಾಕ್ಕೆ ಕರೆದುಕೊಂಡು ಹೋಗುವುದಾಗಿಯೂ, ಕಳಿಸಬೇಕೆಂದೂ ಕೇಳಿದ, ಅದು ಅಲ್ಲಿಗೂ ನಿಲ್ಲಲಿಲ್ಲ. ಆ ಹುಡುಗಿ ಟೈಪ್‌ರೈಟಿಂಗ್ ಇನ್‌ಸ್ಟಿಟ್ಯೂಟ್‌ನಲ್ಲಿದ್ದರೆ ಅಲ್ಲಿಗೆ ಹೋಗಿ ಕರೆದು ಅವಳೊಡನೆ ಮಾತನಾಡಿದ್ದಾನೆ. ಇವೆಲ್ಲವನ್ನೂ ನೋಡಿದರೆ ಅವನ ನಡತೆ ಸರಿಯಾಗಿಲ್ಲವೆಂದು ಕಂಡುಬರುತ್ತದೆ. ಹೀಗಿರುವಾಗ ರಾತ್ರಿ ಕಂಡ ಭಾವಿ

ಯಲ್ಲಿ ಹಗಲು ಬಿದ್ದಹಾಗೆ— — — — —"

ಅಲ್ಲಿಗೂ ಏನು ಹೇಳಬೇಕೆಂದು ಭಾಗ್ಯಳಿಗೆ ತೋರಲಿಲ್ಲ. ಅಷ್ಟಕ್ಕೂ ಅವಳೇನು ತಾನೇ ಹೇಳಬಲ್ಲಳು ? ಮದುವೆ ಮಾಡಿಕೊಳ್ಳುವುದು, ಅದರಲ್ಲಿಯೂ ಆ ಆನಂದರಾಯನನ್ನು ಮದುವೆ ಮಾಡಿಕೊಳ್ಳುವುದು ಅವಳಿಗೆ ಸರ್ವಥಾ ಇಷ್ಟವಿರಲಿಲ್ಲ. ಆದರೆ ಅವಳ ತಂದೆ ಅವನನ್ನು ಮದುವೆಯಾಗಲೇ ಬೇಕೆಂದು ಹಟ ಹಿಡಿದು ಕುಳಿತಿದ್ದರು. ಮದುವೆ ಮಾಡಿಕೊಳ್ಳದಿದ್ದರೆ ಕೊರಳು ಹಿಸುಕಿಕೊಂಡು ಪ್ರಾಣತ್ಯಾಗ ಮಾಡುವುದಾಗಿ ಹೆದರಿಸಿದ್ದರು. ಆ ತಂದೆಯ ಹೊಟ್ಟೆಯಲ್ಲಿ ಹುಟ್ಟಿದ್ದಕ್ಕಾಗಿ ಆತನ ಇಷ್ಟಕ್ಕಾಗಿ ಬಲಿದಾನವಾಗಿ ಹೋಗುವುದೆಂದು ಮಾತ್ರ ಭಾಗ್ಯ ನಿರ್ಧರ ಮಾಡಿಕೊಂಡಿದ್ದಳು.

ಅಂತಹದರಲ್ಲಿ ಅವಳೇನು ಹೇಳಬಲ್ಲಳು ?

ಆದರೆ ಇದ್ದಕ್ಕಿದ್ದ ಹಾಗೆಯೇ ವಿಶಾಲಾಕ್ಷಮ್ಮನವರು ಒಳಗೆ ಪ್ರವೇಶಿಸಿದರು.

ಒಲೆಯ ಮುಂದೆ ಕುಳಿತು ಹುರಿಯುತ್ತಿದ್ದರೂ ಯಾರೋ ಬಂದು ಇಣಿಕಿ ನೋಡಿದ್ದನ್ನು ಆಕೆ ಗಮನಿಸಿದ್ದರು. ಕೂಡಲೇ ಆಕೆ ತಿರುಗಿ ನೋಡಿದ್ದರು. ಆದರೆ ಆ ವೇಳೆಗೆ ರಾಜಣ್ಣನೂ ಹಿಂತಿರುಗಿದ್ದರಿಂದ ಆಕೆ ನೋಡಿದನ್ನು ಅವನು ಗಮನಿಸಲಿಲ್ಲ. ಬಾಣಲೆಯನ್ನು ಕೆಳಗಿರಿಸಿ, ಕೆಲಸವನ್ನು ಅರ್ಧದಲ್ಲಿಯೇ ನಿಲ್ಲಿಸಿ, ಆಕೆ ನಡು ಮನೆಗೆ ಬಂದು ನಿಂತುಕೊಂಡರು. ರಾಜಣ್ಣ ಒಳಕೋಣೆಗೆ ಹೋದುದನ್ನೂ, ಅನಂತರ ಭಾಗ್ಯಳೂ ರಾಜಣ್ಣನೂ ಬೀದಿಯ ರೂಮಿಗೆ ಹೋದುದನ್ನೂ ನೋಡಿದರು.

ವಿಶಾಲಾಕ್ಷಮ್ಮನವರಿಗೆ ಕೋಪ ಬಂದಿತು. ಅವರ ಹಿಂದೆಯೇ ಬೀದಿಯ ಕೋಣೆಯ ಬಾಗಿಲಿನವರೆವಿಗೂ ಬಂದರು.

ಮಗಳೂ ರಾಜಣ್ಣನೂ ಒಳಗೆ ಹೋದನಂತರ ಕೋಣೆಯ ಬಾಗಿಲನ್ನು ಹಾಕಿಕೊಳ್ಳದೇ ಇದ್ದುದನ್ನು ನೋಡಿ ಅವರ ನಿರೀಕ್ಷೆ ತಲೆಕೆಳಗಾಯಿತು. ಹೀಗೆ ರಹಸ್ಯವಾಗಿ ಒಳಗೆ ಹೋದವರು ಯಾಕೆ ಬಾಗಿಲು ಹಾಕಿಕೊಳ್ಳಲಿಲ್ಲವೆಂದು ಅಚ್ಚರಿಯೂ ಆಯಿತು.

ಮುಂದೇನಾಗುತ್ತದೆಯೋ ನೋಡೋಣವೆಂದು ಕುತೂಹಲದಿಂದ ಅಲ್ಲಿಯೇ ನಿಂತುಕೊಂಡರು.

ಆಗ ರಾಜಣ್ಣ ಮಾತನಾಡತೊಡಗಿದ್ದ. ಆ ದಿನ ಬೆಳಗಾಗ ತನ್ನ ಗೆಳೆಯ ಶಂಕರ ಬಂದದ್ದರಿಂದ ಮೊದಲುಗೊಂಡು ತಾನು ಮನೆಗೆ ಬರುವ ವರೆವಿಗೆ ನಡೆದ ಘಟನೆಗಳೆಲ್ಲವನ್ನೂ ಹೇಳಿದ್ದ. ತೆರೆದಿದ್ದ ಬಾಗಿಲಿನಿಂದ ಪ್ರತಿಯೊಂದು ಮಾತೂ ಕೇಳಿಬರುತ್ತಿತ್ತು. ಆಕೆ ನಿಂತು ಎಲ್ಲವನ್ನೂ ಕೇಳಿಸಿಕೊಂಡರು.

ಆ ಪ್ರಸಂಗವೆಲ್ಲವನ್ನೂ ಹೇಳಿ, ಆಮೇಲೆ ಎರಡು ಮಾತುಗಳನ್ನು ರಾಜಣ್ಣ ಹೇಳಿದುದನ್ನೂ ಕೇಳಿಸಿಕೊಂಡರು.

ಅನಂತರ ಆಕೆ ಆ ಕೋಣೆಯನ್ನು ಪ್ರವೇಶಿಸಿದ್ದರು.

ಇದ್ದಕ್ಕಿದ್ದಂತೆಯೇ ಆಕೆ ಒಳಗೆ ಬಂದುದು ರಾಜಣ್ಣನಿಗೂ ಭಾಗ್ಯಳಿಗೂ ಆಶ್ಚರ್ಯವನ್ನುಂಟುಮಾಡಿತು.

ವಿಶಾಲಾಕ್ಷಮ್ಮನವರು "ಆ ಮುಂಡೇಮಗನ ಮೂತಿಯನ್ನು ನೋಡುತ್ತಲೇ ಅವನು ಘಾತುಕನೆಂದು ಗೊತ್ತಾಯಿತು. ಈಗ ನೀನು ಹೇಳಿದುದೆಲ್ಲವನ್ನೂ ಕೇಳಿದನಂತರ ನನ್ನ ಮನಸ್ಸಿನಲ್ಲಿದ್ದುದು ಸ್ಥಿರವಾಯಿತು. ದೇವರೇ ನಮಗೀಗ ಈ ಎಚ್ಚರಿಕೆಯನ್ನು ಕೊಟ್ಟಿದ್ದಾನೆ. ರಾಜಣ್ಣ, ನೀನು ಹೊರಗಿನವನಾದರೂ ನನ್ನ ತಮ್ಮನಿದ್ದಂತೆ. ಈಗೇನು ಮಾಡೋಣ ಹೇಳು" ಎಂದು ಕೇಳಿದರು.

ಆಕೆ ಬಂದುದರಿಂದ ಉಂಟಾಗಿದ್ದ ಗಾಬರಿಯು ಆಕೆಯಾಡಿದ ಮಾತಿನಿಂದ ಪರಿಹಾರವಾಗಿತ್ತು. ಅವನು ಹೇಳಿದ.

"ಅವನ ತರಹವನ್ನು ನೋಡಿದರೆ ಫ್ರೋಕಾ ಆಸಾಮಿ ಇದ್ದಂತೆ ತೋರುತ್ತದೆ. ಅಂತಹ ಭಂಡನಿಗೆ ಇವರನ್ನು ಕೊಟ್ಟು ಮದುವೆ ಮಾಡುವುದು ಸರ್ವಥಾ ನನಗೆ ಯೋಗ್ಯವಾಗಿ ಕಂಡುಬರುವುದಿಲ್ಲ"

"ಅದು ಸರಿ. ಅವರು ನಿನ್ನೆಯ ದಿನ ಕೃಷ್ಣಜೋಯಿಸರ ಬಳಿ ಲಗ್ನ ಕಟ್ಟಿಸಲು ಹೋಗಿದ್ದರು. ಈ ದಿನ ಹೇಳುವುದಾಗಿ ಹೇಳಿದ್ದರಂತೆ. ಅದರಿಂದ ಈಗ ಉರಿಯುವ ಬಿಸಿಲಿನಲ್ಲಿ ಹೋಗಿದ್ದಾರೆ. ನನಗೆ ಇದೇ ಯೋಚನೆಯಾಗಿದೆ"

"ನಿಮ್ಮೊಂದಿಗೆಲ್ಲಾ ವಿಷಯವನ್ನೂ ಹೇಳಿ ಯೋಚನೆ ಮಾಡಬೇಕೆಂದುಕೊಂಡಿದ್ದೆ. ನೀವು ಒಪ್ಪಿಕೊಂಡರೆ ನಾನು ಈ ವಿಷಯವನ್ನು ಗುಂಡೂರಾಯರೊಡನೆ ಮಾತನಾಡುತ್ತೇನೆ"

ರಾಜಣ್ಣ ಹೇಳಿದ ಆಲೋಚನೆಯು ಆಕೆಗೆ ತೃಪ್ತಿಕರವಾಗಿ ತೋರಲಿಲ್ಲ ವೆಂಬುದು ಅವರ ಮುಖಭಾವದಿಂದಲೇ ಗೊತ್ತಾಯಿತು.

"ಯಾಕೆ, ನಾನು ಅವರೊಂದಿಗೆ ಎಲ್ಲವನ್ನೂ ಹೇಳಬಾರದೇನು ?''

"ಹೇಳಬಾರದೆಂದೇನೂ ಇಲ್ಲ. ಇಂದಲ್ಲ, ನಾಳೆಯಾದರೂ ಅವರಿಗೆ ಹೇಳಬೇಕಾದುದೇ., ಆದರೆ———"

''ಅವರಿಗೆ ಹೇಳಿದರೆ ಪ್ರಯೋಜನವಾಗುವುದಿಲ್ಲ-ಎನ್ನುತ್ತೀರೇನು ?''

''ಅದೇ ನನಗೆ ಇರುವ ಸಂದೇಹ. ರಾಜಣ್ಣ, ನಾನು ಮೊದಲೇ ಹೇಳಿದಂತೆ ನೀನು ನನ್ನ ತಮ್ಮನಂತೆ. ನೀನೂ ನನ್ನೊಂದಿಗೆ ಹಾಗೇ ನಡೆದುಕೊಳ್ಳುತ್ತಿದ್ದೀಯೆ. ನಿನ್ನಲ್ಲಿ ಹೇಳುವುದಕ್ಕೆ ಸಂಕೋಚವೇನು ಬಂದಿತು, ಎಲ್ಲವನ್ನೂ ಹೇಳುತ್ತೇನೆ, ಕೇಳು. ಈ ವರ ಸುತರಾಂ ನನಗೆ ಇಷ್ಟವಿಲ್ಲ. ಭಾಗ್ಯಳಿಗೂ ಅವನನ್ನು ಮದುವೆಯಾಗುವುದು ಇಷ್ಟವಿಲ್ಲ. ಅದನ್ನು ಅವರೂ ಬಲ್ಲರು. ಆದರೆ ಅವರಿಗೆ ಯಮ ಹಟ. ತಾವು ಹಿಡಿದ ಮೊಲಕ್ಕೆ ಮೂರೇ ಕಾಲೆಂದು ಹಟ ಹಿಡಿಯುವ ಸ್ವಭಾವ ಅವರದು. ನಾವೆಲ್ಲಾ ಸೇರಿಕೊಂಡು ಅವನ ಮೇಲೆ ಇಲ್ಲದ ಆರೋಪಗಳನ್ನು ಮಾಡುತ್ತಿದ್ದೇವೆಂದೂ, ಈ ಮದುವೆಯನ್ನು ತಪ್ಪಿಸಲು ಸುಳ್ಳು ಕತೆಯನ್ನು ಕಟ್ಟಿ ಹೇಳುತ್ತಿದ್ದೇವೆಂದೂ ಅವರು ಭಾವಿಸಿದರೆ ಏನು ಗತಿಯೆಂದು ಯೋಚನೆ ಮಾಡುತ್ತಿದ್ದೇನೆ"

ಇದಕ್ಕೇನು ಮಾಡಬೇಕೆಂದು ರಾಜಣ್ಣನೂ, ವಿಶಾಲಾಕ್ಷಮ್ಮನವರೂ ಯೋಚನೆ ಮಾಡತೊಡಗಿದರು. ಅವರ ಆಲೋಚನೆಗಳೆಲ್ಲದರಲ್ಲಿಯೂ ತನಗೆ ಒಪ್ಪಿಗೆ ಇರುವಂತೆ ಭಾಗ್ಯ ಕೇಳುತ್ತಾ ಕುಳಿತುಕೊಂಡಿದ್ದಳು.

ಕಡೆಯಲ್ಲಿ ರಾಜಣ್ಣ "ವೆಂಕಟೇಶಯ್ಯನವರನ್ನು ಕರೆಯಿಸಿ ಅವರಿಗೆಲ್ಲವನ್ನೂ ಹೇಳುವುದು. ಅವರು ಹೇಗೆ ಹೇಳುತ್ತಾರೆಯೋ ಹಾಗೆ ನಡೆದುಕೊಳ್ಳುವುದೇ ಸೂಕ್ತವೆಂದು ನನಗೆ ಕಂಡುಬರುತ್ತದೆ''

ಬೇರಾವ ಮಾರ್ಗವೂ ಕಂಡು ಬರದೇ ಇದ್ದುದರಿಂದ ವಿಶಾಲಾಕ್ಷಮ್ಮನವರು ಅದಕ್ಕೆ ಒಪ್ಪಿಕೊಂಡರು.

"ನಿನ್ನ ಈ ಆಲೋಚನೆಯೇ ಸರಿಯೆಂದು ತೋರುತ್ತದೆ. ಆದರೆ ಅವರನ್ನು ಈಗ ಬರಮಾಡಿಕೊಳ್ಳುವುದು ಹೇಗೆ ? ನೀನೇ ಬಸ್ಸಿಗೆ ಹೋಗಿ ಅವರನ್ನು ಕರೆದುಕೊಂಡು ಬರುತ್ತೀಯಾ ?''

"ಬೇಡ. ನಾನು ಹೋಗಿ ಕರೆದುಕೊಂಡು ಬಂದರೆ ಗುಂಡೂರಾಯರಿಗೆ ಸಂದೇಹವು ಬರಬಹುದು. ಈಗಲೇ ಹೋಗಿ ಅವರಿಗೆ ಎಕ್ಸ್‌ಪ್ರೆಸ್ ಟೆಲಿಗ್ರಾಂ ಕೊಟ್ಟು ಅವರು ನಾಳೇ ಬೆಳಗಾಗಿನ ಬಸ್ಸಿಗೆ ಬರುವಂತೆ ಮಾಡುತ್ತೇನೆ"

"ಹಾಗೆ ಮಾಡಪ್ಪಾ. ಅವರು ಬಂದರೆ ಏನಾದರೂ ಮಾಡುತ್ತಾರೆ"

ಕೂಡಲೇ ಎಕ್ಸ್‌ಪ್ರೆಸ್ ಟೆಲಿಗ್ರಾಂ ಕೊಡುವುದಕ್ಕಾಗಿ ರಾಜಣ್ಣ ಹೊರಟು ಹೋದ.

## ೧೪

ಮಾರನೆಯ ದಿನ ಬೆಳಗಾಗ ಎಂಟು ಗಂಟೆಯ ವೇಳೆಗೆಲ್ಲಾ ರಾಜಣ್ಣ ಮನೇ ಬಿಟ್ಟು ಹೊರಟು ಹೋದ. ನೇರವಾಗಿ ಬಸ್‌ಸ್ಟ್ಯಾಂಡಿಗೆ ಹೋಗಿ ಮಾಗಡಿಯ ಬಸ್ಸಿಗಾಗಿ ಕಾಯತೊಡಗಿದ. ಅದು ಸಮಯಕ್ಕೆ ಸರಿಯಾಗಿ ಬಂದಿತು. ಅವನ ನಿರೀಕ್ಷೆಗೆ ತಕ್ಕಂತೆ ವೆಂಕಟೇಶಯ್ಯನವರೂ ಬಸ್‌ನಲ್ಲಿದ್ದರು.

ಬಸ್ ಇಳಿಯುತ್ತಿದ್ದವರೇ "ಏಕೆ, ರಾಜಣ್ಣ. ಏನು ಸಮಾಚಾರ? ಕೂಡಲೇ ಬರಬೇಕೆಂದು ತಂತಿಯನ್ನು ಕೊಡುವಂತಹ ಪ್ರಮೇಯವೇನು ಬಂದಿತು?" ಎಂದರು.

"ಬನ್ನಿ, ಎಲ್ಲವನ್ನೂ ಹೇಳುತ್ತೇನೆ" ಎಂದು ಅವರನ್ನು ಕರೆದುಕೊಂಡು ಹೊರಟ.

ಅವರು ಕೃಷ್ಣರಾಜೇಂದ್ರ ರಸ್ತೆಯಲ್ಲಿ ನಡೆದುಕೊಂಡೇ ಹೊರಟರು. ಹೋಗುತ್ತಾ ರಾಜಣ್ಣ ಅವರಿಗೆ ಹಿಂದಿನ ದಿನ ನಡೆದ ಘಟನೆಗಳನ್ನು ಹೇಳಿದ. ತಾನು ಅದನ್ನು ಭಾಗ್ಯಳಿಗೂ ಮತ್ತು ವಿಶಾಲಾಕ್ಷಮ್ಮನವರಿಗೂ ತಿಳಿಸಿದ ಸಂಗತಿಯನ್ನೂ ಹೇಳಿದ.

ಆಮೇಲೆ "ನೀವು ಬಂದರೆ ಆ ಮದುವೆಯನ್ನು ತಪ್ಪಿಸಬಲ್ಲಿರೆಂದು ವಿಶಾಲಾಕ್ಷಮ್ಮನವರು ಸಹ ಅಭಿಪ್ರಾಯ ಪಟ್ಟರು. ಆದರಿಂದಲೇ ನಿಮಗೆ ಟೆಲಿಗ್ರಾಂ ಕೊಟ್ಟು ಕರೆಸಿದ್ದಾಯಿತು. ಈಗ ನಿಮಗೆ ಹೇಗೆ ಸೂಕ್ತವೋ

ಹಾಗೆ ಮಾಡಿರಿ. ಆನಂದರಾಯ ಮಾಡಿದುದು ತಪ್ಪೆಂದೂ, ಅವನ ನಡತೆಯು ಸರಿಯಲ್ಲವೆಂದೂ ನಮ್ಮಗಳ ಅಭಿಪ್ರಾಯ. ಒಂದು ವೇಳೆ ಅದು ಸರಿಯೆಂದೇ ನಿಮಗೆ ಭಾಸವಾಗುವುದಾದರೂ ಸಹ ಮದುವೆಯಾಗಬೇಕಾದ ಹುಡುಗಿಗೂ, ಅವರಮ್ಮನಿಗೂ ಈ ವರನು ಇಷ್ಟವಿಲ್ಲ. ಆ ಕಾರಣದಿಂದಲಾದರೂ ಈ ಮದುವೆಯನ್ನು ತಪ್ಪಿಸಿರಿ'' ಎಂದು ಉದ್ರೇಕದಿಂದ ಹೇಳಿದ.

ಅಷ್ಟು ಹೊತ್ತಿಗೆ ಅವರುಗಳು ಗುಂಡೂರಾಯರ ಮನೆಗೆ ತಿರುಗುವವರೆವಿಗೆ ಬಂದುಬಿಟ್ಟಿದ್ದರು.

ವೆಂಕಟೇಶಯ್ಯನವರು ನಗುತ್ತಾ "ನೀನು ಒಳ್ಳೆಯ ಗೆಣೆಯನಯ್ಯಾ. ನೂರು ಸುಳ್ಳು ಹೇಳಿ ಒಂದು ಮದುವೆ ಮಾಡಿಸಬೇಕೆಂದು ಶಾಸ್ತ್ರ. ಹಾಗಿರುವಾಗ ವಿವಾಹಕ್ಕೆ ವಿಘಾತವನ್ನು ಏರ್ಪಡಿಸು ಎಂದು ಹೇಳುತ್ತಿದ್ದೀ. ಆಗಲಿ, ನಮಗೆ ಬೇಕಾದವರಿಗಾಗಿ ನಾವು ಎಷ್ಟೋ ಮಾಡಬೇಕಾಗುತ್ತದೆ. ಬಾ, ಏನಾಗುತ್ತದೆಯೋ ನೋಡೋಣ" ಎಂದರು.

"ನಾನು ನಿಮ್ಮ ಜೊತೆಯಲ್ಲಿಯೇ ಬಂದರೆ ಗುಂಡೂರಾಯರಿಗೆ ಸಂದೇಹವು ಬರುತ್ತದೆ. ಅದರಿಂದ ಹಾಗೆ ಬೇಡ. ನೀವು ಹೋಗಿ. ಅನಂತರ ಬರುತ್ತೇನೆ ನಾನು ಟೆಲಿಗ್ರಾಂ ಕೊಟ್ಟುದರಿಂದ 'ನೀವು ಬಂದಿರೆಂಬುದು ಗುಂಡೂರಾಯರಿಗೆ ತಿಳಿಯುವುದು ಬೇಡ. ನೀವಾಗಿಯೇ ಬಂದಂತೆ ಇದ್ದರೆ ಒಳ್ಳೆಯದು"

"ಹಾಗೆಯೇ ಆಗಲಿ'' ಎಂದು ವೆಂಕಟೇಶಯ್ಯನವರು ಹೊರಟರು.

ವೆಂಕಟೇಶಯ್ಯನವರು ಈ ಸಮಯದಲ್ಲಿ ಬರುತ್ತಾರೆಂದು ಗುಂಡೂರಾಯರು ನಿರೀಕ್ಷೆ ಮಾಡಿರಲಿಲ್ಲ. ಆತನನ್ನು ನೋಡಿ ಆಶ್ಚರ್ಯವಾಯಿತು. ಹಾಗೆಯೇ ಗುಂಡೂರಾಯರಿಗೆ ಸ್ವಲ್ಪ ನಿರಾಸೆಯೂ ಆಯಿತು. ಲಗ್ನಪತ್ರಿಕೆ ಮಾಡಿಸಿ, ಅದನ್ನು ಪ್ರಿಂಟ್‌ಮಾಡಿಸಿ, ಮೊದಲನೆಯ ಪತ್ರಿಕೆಯನ್ನು ವೆಂಕಟೇಶಯ್ಯನವರಿಗೆ ಕಳುಹಿಸಿ ಆತ ಚಕಿತನಾಗುವಂತೆ ಮಾಡಬೇಕು—ಎಂದಿದ್ದರು. "ನೀನು ಸಹಾಯ ಮಾಡದಿದ್ದರೂ ನಾನು ನನ್ನ ಮಗಳಿಗೆ ವರನನ್ನು ಹುಡುಕಿಕೊಂಡೆ" ಎಂಬುದಾಗಿ ಅವರ ಮುಖದ ಮೇಲೆ ಹೊಡೆದಂತೆ ಲಗ್ನಪತ್ರಿಕೆಯನ್ನು ಕಳಿಸಬೇಕು–ಎಂದಿತ್ತು.

ಆದರ ಮೊದಲೇ ವೆಂಕಟೇಶಯ್ಯನವರು ಬಂದುದರಿಂದ ಗುಂಡೂರಾಯರಿಗೆ ಸ್ವಲ್ಪ ನಿರಾಸೆಯಾಯಿತು.

ಆದರೇನು ? ಗೆಳೆಯ ಬಂದು ಬಿಟ್ಟಿದ್ದಾನೆ.

"ಬಾರಯ್ಯ, ಬಾ. ನಾನೇ ನಿನಗೆ ಕಾಗದ ಬರೆದು ಕರೆಸಿಕೊಳ್ಳೋಣ ಎಂದುಕೊಂಡಿದ್ದೆ"

ಕುಳಿತುಕೊಳ್ಳುತ್ತಾ "ಏನು ಸಮಾಚಾರ ?" ಎಂದು ಕೇಳಿದರು ವೆಂಕಟೇಶಯ್ಯ.

"ಇದ್ದಕ್ಕಿದ್ದ ಹಾಗೆಯೇ ನೀನು ಇಳಿದ ಸಮಾಚಾರವೇನು, ಮೊದಲು ಹೇಳು. ಆಮೇಲೆ ನಾನು ಕಾಗದ ಬರೆಯಬೇಕೆಂದಿದ್ದ ವಿಷಯವನ್ನು ಹೇಳುತ್ತೇನೆ"

ಯಾವಾಗಲಾದರೂ ಆಡಲೇಬೇಕಾದ ಮಾತಷ್ಟೇ ಎಂದುಕೊಂಡು ವೆಂಕಟೇಶಯ್ಯನವರೆಂದರು.

"ನಿನ್ನ ಮಗಳ ಮದುವೆ ಗೊತ್ತಾಯಿತೆಂದು ಕೇಳಿದೆ. ವರನು ಯಾರೋ, ಏನು ಕತೆಯೋ ವಿಚಾರಿಸಿಕೊಂಡು ಹೋಗೋಣವೆಂದು ಬಂದೆ"

ಗುಂಡೂರಾಯರು ಹೆಮ್ಮೆಯಿಂದ "ಹುಂ. ದೇವರ ದಯದಿಂದ ಗೊತ್ತಾಯಿತಪ್ಪ. ಇನ್ನು ಹತ್ತು ದಿನಗಳಿಗೆ ಮದುವೆ. ಇನ್ನಿರುವುದು ಅದೊಂದೇ ಲಗ್ನವಂತೆ. ನಿನ್ನೆ ತಾನೇ ಕೃಷ್ಣಜೋಯಿಸರು ಲಗ್ನ ಇಟ್ಟು ಕೊಟ್ಟರು. ನಾಳೇ ಲಗ್ನಪತ್ರಿಕೆ. ನೀನು ಬಂದುದು ಬಹಳ ಸಂತೋಷ. ಅದಿರಲಿ, ಭಾಗ್ಯಳಿಗೆ ಮದುವೆ ಗೊತ್ತಾದ ವಿಷಯ ನಿನಗೆ ಹೇಗೆ ತಿಳಿಯಿತು" ಎಂದರು.

"ನೀನು ವಿಷಯ ಗುಟ್ಟುಮಾಡಿದರೆ ನನಗೆ ಗೊತ್ತಾಗುವುದಿಲ್ಲವೇನಯ್ಯ, ಹೇಗೋ ಗೊತ್ತಾಯಿತು. ವರನಾರು, ಏನು ವಿಷಯ ?"

ಗುಂಡೂರಾಯರು ವಿಷಯವೆಲ್ಲವನ್ನೂ ವಿವರಿಸಿದರು.

ವೆಂಕಟೇಶಯ್ಯನವರು "ಗುಂಡಣ್ಣಾ. ನಿನಗೆ ವಯಸ್ಸಾಯಿತೆ ವಿನಾ ಬುದ್ಧಿ ಬರಲಿಲ್ಲ. ನೀನು ಆ ವರನನ್ನು ಗೊತ್ತುಮಾಡಿದ್ದೀ ಎಂದೂ ಅವನ ನಡತೆ ಸರಿಯಾಗಿಲ್ಲವೆಂದೂ ನನ್ನ ಕಿವಿಗೆ ಬಿದ್ದಿತು. ಅದರಿಂದಲೇ ಓಡಿ ಬಂದೆ" ಎಂದರು.

"ಯಾರು ಹೇಳಿದರು ? ಅವನ ನಡತೆಯೇನು ಸರಿಯಿಲ್ಲವಂತೆ ?"

"ಇಲ್ಲಿಯೇ ಬಸವನಗುಡಿಯಲ್ಲಿ ಚನ್ನಕೇಶವಯ್ಯ ಎಂಬೊಬ್ಬರಿದ್ದಾರೆ. ಅವರಿಗೆ ಜಾನಕಿ ಎಂಬೊಬ್ಬ ಮಗಳಿದ್ದಾಳೆ. ನಿಮ್ಮ ಆನಂದರಾಯ ಅವರ ಮನೆಗೆ ಹೋಗಿ ಹೆಣ್ಣು ನೋಡಿದ. ಅದು ನಿಮ್ಮ ಮನೆಯಲ್ಲಿ ಹೆಣ್ಣೊಪ್ಪಿ ಕೊಂಡು ಹೋದ ಮೇಲೆ"

"ಅದಕ್ಕೇನು? ಹೆಣ್ಣು ನೋಡುವವರು ಒಂದೇ ಹೆಣ್ಣು ನೋಡು ತ್ತಾರೆಯೇ? ಗಂಡು ನೋಡುವವರು ಒಂದೇ ಗಂಡು ನೋಡುತ್ತಾರೆಯೇ? ಎಷ್ಟೋ ಕಡೆ ನೋಡುತ್ತಾರೆ. ಆದರೆ ಒಬ್ಬರು ಮದುವೆಯಾಗುವುದು ಒಬ್ಬರನ್ನೇ"

"ಅದು ನನಗೂ ಗೊತ್ತಿದೆ. ಮಹಾ ಬುದ್ಧಿವಂತನಂತೆ ಮಾತನಾಡ ಬೇಡಯ್ಯ. ಅವಳನ್ನು ತನ್ನೊಡನೆ ಸಿನಿಮಾಕ್ಕೆ ಕಳಿಸಬೇಕೆಂದು ಕೇಳಿದ ನಂತೆ. ಯೋಗ್ಯನಾದವನು ಹಾಗೆ ಕೇಳಬಹುದೇನಯ್ಯಾ? ಯಾವಳನ್ನೋ ಮದುವೆಯಾಗಲು ಸಿದ್ಧವಾಗಿ, ಅವಳನ್ನು ಸಿನಿಮಾಗೆ ಸಹ ಕರೆದುಕೊಂಡು ಹೋಗಲು ತಯಾರಾಗಿರುವವನಿಗೆ ನೀನು ತಾನೇ ಹೇಗೆ ಮಗಳನ್ನು ಕೊಡು ತ್ತೀಯಯ್ಯಾ"

"ನಿನಗೆ ಯಾರೋ ಇಲ್ಲದ ಮಾತನ್ನು ಹೇಳಿದ್ದಾರೆ"

"ಇಲ್ಲದ ಮಾತುಗಳು ಹುಟ್ಟುವುದೇ ಇಲ್ಲ. ಅಷ್ಟೇ ಅಲ್ಲ. ಆ ರಮಾ ಯಾವುದೋ ಇನ್‌ಸ್ಟಿಟ್ಯೂಟ್‌ನಲ್ಲಿ ಟೈಪಿಂಗ್ ಕಲಿಯುತ್ತಿದ್ದಾಳಂತೆ. ಅಲ್ಲಿಗೆ ಹೋಗಿ ಅವಳೊಡನೆ ಮಾತನಾಡಲು ಪ್ರಯತ್ನ ಮಾಡಿದನಂತೆ. ಇವೆಲ್ಲಾ ಯೋಗ್ಯನ ಲಕ್ಷಣಗಳಲ್ಲ. ನನ್ನ ಮಾತು ಕೇಳು. ಅಂತಹ ಗುಣಗಳಿರುವ ವನಿಗೆ ಕಣ್ಣುಮುಚ್ಚಿಕೊಂಡು ಮಗಳನ್ನು ಕೊಡುವುದು ಶುದ್ಧ ಅವಿವೇಕ"

ಗಳಿಗೆಯ ಕಾಲ ಯೋಚನೆ ಮಾಡಿ "ನಾನೊಂದು ಮಾತು ಹೇಳು ತ್ತೇನೆ, ಕೇಳು. ನಿನಗೆ ಯಾವುದೋ ಕಾರಣದಿಂದ ಈ ಮದುವೆ ಇಷ್ಟವಿಲ್ಲ. ಅಥವಾ ನಿನ್ನ ಸಹಾಯವನ್ನು ಪಡೆಯದೇ ನಾನೇ ಎಲ್ಲವನ್ನೂ ಮಾಡಿಕೊಂ ಡೆನಲ್ಲಾ–ಎಂಬ ಉದ್ದೇಶದಿಂದ ಹೇಳುತ್ತಿದ್ದೀಯೆ?" ಎಂದು ಹೇಳಿದರು.

"ಅದೆಲ್ಲಾ ಇಲ್ಲ, ಗುಂಡಣ್ಣ. ಆ ವರನ ಮೇಲೆ ಇಂತಹ ಅಪವಾದ ಗಳು ಬಂದಿರುವಾಗ ಅವನಿಗೆ ಮಗಳನ್ನು ಕೊಡುವುದು ತಪ್ಪು"

"ಆ ಅಪವಾದಗಳೇ ಸುಳ್ಳು ಎಂದು ನಾನು ಹೇಳುತ್ತಿರುವಾಗ"

"ಅವು ನಿಜವಾದರೆ ಭಾಗ್ಯಳನ್ನು ಅವನಿಗೆ ಕೊಡುವುದಿಲ್ಲವೆಂದು ಒಪ್ಪಿಕೊಳ್ಳುತ್ತೀಯೋ ?"

ಗುಂಡೂರಾಯರು ಆ ಮಾತಿಗೆ ಒಪ್ಪಿಕೊಂಡರು.

"ಹಾಗಾದರೆ ನಡೆ. ಚನ್ನಕೇಶವಯ್ಯನವರ ಮನೆಗೆ ಹೋಗೋಣ. ಅಷ್ಟೇ ಅಲ್ಲ, ಮೊನ್ನೆಯ ದಿನ ಅವರ ಮಗ ಶಂಕರ ನೀನು ನೋಡಿರುವ ವರನಿಗೆ ಮರ್ಯಾದೆ ಮಾಡಿ ಬಂದನಂತೆ. ಅವನ ಬಾಯಿಂದಲೇ ಹೇಳಿಸುತ್ತೇನೆ"

"ನಡಿ ಹೋಗೋಣ" ಎಂಬುದಾಗಿ ಗುಂಡೂರಾಯರು ಮೇಲೆದ್ದರು.

ಮನೆಯಿಂದ ಹೊರಗಡೆ ಹೋಗುವಾಗ ಗುಂಡೂರಾಯರಿಗೆ ಒಂದು ಆಲೋಚನೆಯು ತೋರಿತು.

"ಅವರಿವರ ಹತ್ತಿರ ಯಾಕಯ್ಯ ಹೋಗಬೇಕು. ನೇರವಾಗಿ ಹೋಗಿ ಆನಂದರಾಯನನ್ನೇ ಕೇಳೋಣ"

"ಅದೂ ಆಗಲಿ" ಎಂದುಕೊಂಡು ವೆಂಕಟೇಶಯ್ಯ ಹೊರಟರು.

ಅದೃಷ್ಟವಶಾತ್ ಆನಂದರಾಯ ತನ್ನ ಮನೆಯಲ್ಲಿಯೇ ಇದ್ದ.

ಒಳಗೆ ಬಂದವರನ್ನು ಆದರದಿಂದ ಸ್ವಾಗತಿಸಿ ಕುಳ್ಳಿರಿಸಿದ. ಎರಡು ದಿನದ ಹಿಂದೆ ಗಲಾಟೆಯಾದಾಗ ರಾಜಣ್ಣನೂ ಇದ್ದನಷ್ಟೇ. ಅದ್ದರಿಂದ ಆ ವೇಳೆಗಾಗಲೇ ಆನಂದರಾಯ ಭಾಗ್ಯಳ ಆಸೆಯನ್ನು ಪೂರ್ಣವಾಗಿ ಬಿಟ್ಟು ಬಿಟ್ಟಿದ್ದ. ಈಗ ಇದ್ದಕ್ಕಿದ್ದಂತೆಯೇ ಗುಂಡೂರಾಯರು ಬಂದುದು ಅವನಿಗೆ ಆಶ್ಚರ್ಯವನ್ನುಂಟುಮಾಡಿತು. ಅಷ್ಟೇ ಅಲ್ಲ. ಅದು ಅವನ ಆಸೆಯನ್ನು ಪುನಃ ಚಿಗುರಿಸಿತು.

ವೆಂಕಟೇಶಯ್ಯನವರನ್ನು ತಮ್ಮ ಪರಮಾಪ್ತರೆಂದು ಪರಿಚಯ ಮಾಡಿಸಿದನಂತರ ಗುಂಡೂರಾಯರು ಹೇಳಿದರು.

"ನಿಮ್ಮೊಂದಿಗೆ ಸ್ವಲ್ಪ ಮಾತನಾಡಬೇಕಾಗಿದ್ದಿತು. ಅದರಿಂದ ಬಂದೆವು"

"ಅದಕ್ಕೇನು ಹೇಳಿ"

"ಬಸವನಗುಡಿಯಲ್ಲಿ ಚನ್ನಕೇಶವಯ್ಯನವರು ಅಂತ ಒಬ್ಬರಿದ್ದಾರೆಯಲ್ಲಾ. ಅವರ ಮಗಳು ಜಾನಕಿಯನ್ನು ನೋಡುವುದಕ್ಕೆ ಹೋಗಿದ್ದಿರಾ ?"

"ಹೌದು. ಮದುವೆಯಾಗಬೇಕಾದ ವರ ಎಷ್ಟೋ ಕಡೆ ಹೆಣ್ಣುಗಳನ್ನು

ನೋಡುತ್ತಾನೆ, ಹಾಗೆಯೇ ಹೆಣ್ಣಿನವರೂ ಅನೇಕ ಕಡೆ ವರಗಳನ್ನು ನೋಡುತ್ತಾರೆ. ಅದರಲ್ಲಿ ಏನು ತಪ್ಪಿದೆಯೋ ನನಗೆ ಅರ್ಥವಾಗುವುದಿಲ್ಲ"

"ತಪ್ಪು ಎಂದು ನಾವು ಹೇಳಲಿಲ್ಲ. ನಮ್ಮ ಹುಡುಗಿಯನ್ನು ಒಪ್ಪಿಕೊಂಡನಂತರ ನೀವು ಅವರ ಮನೆಗೆ ಹೋಗಿ ನೋಡಿದ್ದಿರಾ-ಎಂದು ಕೇಳಿದೆ"

"ಅದೇ ನೀವು ಹೇಳುವುದು. ನಿಜ. ಅದೊಂದು ಕೆಲಸವಾಯಿತು. ನಿಮ್ಮ ಮನೆಗೆ ಬರುವ ಮೊದಲೇ ಅವರ ಕಡೆಯಿಂದಲೂ ಕರೆ ಬಂದಿದ್ದಿತು. ಅವರುಗಳು ಹೇಳಿಕಳಿಸಿದರು. ಹೋಗಿ ನೋಡಿಕೊಂಡು ಬಂದೆ. ಲಗ್ನ ಪತ್ರಿಕೆಯಾಗಿ ಮದುವೆಯು ಖಚಿತವಾಗುವವರೆವಿಗೂ ಬೇರೆ ಹೆಣ್ಣುಗಳನ್ನು ನೋಡುವುದರಲ್ಲಿ ತಪ್ಪಿಲ್ಲವೆಂದುಕೊಂಡೆ. ನಾನು ಈ ರೀತಿಯಾಗಿ ಹೇಳಿದೆನೆಂದು ನೀವು ಅನ್ಯಥಾ ಭಾವಿಸಬಾರದು"

ಗುಂಡೂರಾಯರು ಇನ್ನೇನನ್ನೂ ಹೇಳುವುದಕ್ಕಾಗದೇ ಸುಮ್ಮನಾಗಿಬಿಟ್ಟರು.

ವೆಂಕಟೇಶಯ್ಯನವರು "ಅದು ಸರಿ. ನೀವು ಆ ಹುಡುಗಿಯನ್ನು ಸಿನಿಮಾಗೆ ಕಳಿಸಬೇಕೆಂದು ಹೇಳಿದರಂತೆ. ಮದುವೆಯಾಗುವವರೆವಿಗೆ ಅದೊಂದೂ ಆಗುವುದಿಲ್ಲವೆಂದು ಚನ್ನಕೇಶವಯ್ಯನವರು ಹೇಳಿದರಂತೆ" ಎಂದರು.

"ಹಾಗಲ್ಲ ಹೇಳುವುದರಲ್ಲಿ ಅವರು ಸ್ವಲ್ಪ ಹೆಚ್ಚು ಕಡಿಮೆಯಾಗಿ ಹೇಳಿದ್ದಾರೆ. ಧಾರಾಳವಾಗಿ ಗಂಡನೊಡನೆ ಸಿನಿಮಾಗಳಿಗೂ, ಕ್ಲಬ್ಬುಗಳಿಗೂ ಬರುವಂತಿರಬೇಕು-ಎಂದು ಹೇಳಿದೆ. ನಾನು ಸಾಧಾರಣವಾಗಿ ಪ್ರಯಾಣ ಮಾಡುತ್ತಲೇ ಇರುತ್ತೇನೆ. ಆದ್ದರಿಂದ ಅವಶ್ಯಕ ಬಿದ್ದರೆ ನನ್ನೊಡನೆ ಪ್ರವಾಸ ಮಾಡುವುದಕ್ಕೂ ತಯಾರಾಗಿರಬೇಕೆಂದು ಹೇಳಿದೆ, ಅಷ್ಟೇ. ಅವರಿಗೆ ಹೆಣ್ಣು ಕೊಡುವುದು ಇಷ್ಟವಿಲ್ಲದಿದ್ದರೆ ಬೇಡ ಆದರೆ ಇಲ್ಲದ ವಿಷಯಗಳನ್ನೆಲ್ಲಾ ಯಾಕೆ ಹೇಳಿಕೊಂಡು ಬರುತ್ತಾರೆಯೋ ಈ ಜನ, ನನಗೆ ಅರ್ಥವಾಗುವುದಿಲ್ಲ"

ಇವನು ಕೇವಲ ಅಯೋಗ್ಯ ಮಾತ್ರವೇ ಅಲ್ಲ, ಠಕ್ಕಾಠಕ್ಕಿಯೂ ಆಗಿದ್ದಾನೆಂದು ವೆಂಕಟೇಶಯ್ಯನವರಿಗೆ ಕೋಪ ಬಂದಿತು,

"ನೀವು ಟೈಪ್‌ರೈಟಿಂಗ್ ಇನ್‌ಸ್ಟಿಟ್ಯೂಟ್‌ಗೆ ಹೋಗಿ ಜಾನಕಿಯನ್ನು ಮಾತನಾಡಿಸಲು ಪ್ರಯತ್ನಪಟ್ಟುದಾಗಿಯೂ, ಅದರಿಂದ ಅವಳ ಅಣ್ಣ ನಿನ್ನೆ ಇಲ್ಲಿಗೆ ಬಂದು ಆಕ್ಷೇಪಣೆ ಮಾಡಿದನೆಂದೂ ಕೇಳಿದೆವು. ಆ ವಿಷಯ ಹೇಳಿ"

ಆನಂದರಾಯನು ಸಾವಧಾನವಾಗಿ "ಓಹೋ! ಆ ವಿಷಯವನ್ನು ಕೇಳುತ್ತೀರಾ? ನಾನು ಚನ್ನಕೇಶವಯ್ಯನವರ ಮನೆಯಿಂದ ಹುಡುಗಿಯನ್ನು ನೋಡಿಕೊಂಡು ಹೊರಗೆ ಬಂದೆ. ನನ್ನ ಜೊತೆಯಲ್ಲಿ ಹುಡುಗಿಯ ಅಣ್ಣನೂ ಬಂದರು. ಅವರ ಹೆಸರೇನೋ ನನಗೆ ತಿಳಿಯದು. "ಹುಡುಗಿ ನನ್ನನ್ನು ಒಪ್ಪಿದ್ದಾಳೆಯೇ?" ಎಂದು ಕೇಳಿದೆ. ಅದಕ್ಕೆ ಅವರು ಸರಿಯಾಗಿ ಉತ್ತರ ಕೊಡದೇ ತಡವಡಿಸಿದರು. ಆದರಿಂದ ನಾನು "ನಿಮಗೆ ಸಂಕೋಚವಾದರೆ ನಾನೇ ಅವರನ್ನು ಕೇಳುತ್ತೇನೆ" ಎಂದೆ. "ನೀವು ನಮ್ಮ ಹುಡುಗಿಯನ್ನು ಕೇಳುವುದೆಂದರೇನು" ಮುಂತಾಗಿ ಮಾತನಾಡಿದರು. ಅನಂತರ ಅದೇನು ಕಾರಣವೋ ತಿಳಿಯದು. ಅವರೂ ನಿಮ್ಮ ಮನೆಯಲ್ಲಿ ರಾಜಣ್ಣ ಎಂದಿದ್ದಾರೆಯಲ್ಲಾ–ಅವರೂ ಬಂದು ಇಲ್ಲದ ಕೀಟಲೆ ವ್ಯಾಜ್ಯವನ್ನು ತೆಗೆದರು. ನನಗೆ ಗೊತ್ತಿರುವುದು ಇಷ್ಟೇ" ಎಂದು ಹೇಳಿದ.

ಅವನು ಠಕಾಯಿಸುತ್ತಿದ್ದಾನೆಂದು ವೆಂಕಟೇಶಯ್ಯನವರಿಗೆ ಚೆನ್ನಾಗಿ ಗೊತ್ತಾಯಿತು. ಆದರೆ ಅವರೇನು ಮಾಡುವುದು? ಅವನ ಮಾತಿಗೆ ಸರಿಯಾಗಿ ಜವಾಬು ಕೊಡುವವರು ಜೊತೆಯಲ್ಲಿಲ್ಲ.

ಆದರೂ ವೆಂಕಟೇಶಯ್ಯನವರು "ಮೂರು ದಿನಗಳ ಹಿಂದೆ ನೀವು ಟೈಪ್‌ರೈಟಿಂಗ್ ಇನ್‌ಸ್ಟಿಟ್ಯೂಟ್ ಹೋಗಿ ಜಾನಕಿಯನ್ನು ಹೊರಗೆ ಕರೆಯಿಸಲಿಲ್ಲವೇ?" ಎಂದರು.

ಆನಂದರಾಯ ಅಲ್ಲಿ ವೆಂಕಟೇಶಯ್ಯ ಕುಳಿತಿದ್ದಾರೆಂದೂ, ಆಗತಾನೇ ಅವರೊಂದು ಪ್ರಶ್ನೆಯನ್ನು ಕೇಳಿದರೆಂದು ಗಮನಿಸದೇ ಇದ್ದವನಂತೆ ಗುಂಡುರಾಯರನ್ನು ಉದ್ದೇಶಿಸಿ "ಸ್ವಾಮಿ. ತಾವೇ ನನ್ನ ಮನೆಗೆ ಬಂದು ನಿಮ್ಮ ಮಗಳನ್ನು ಬಂದು ನೋಡಬೇಕೆಂದೂ, ಮದುವೆ ಮಾಡಿಕೊಳ್ಳಬೇಕೆಂದೂ ಪ್ರಾರ್ಥನೆ ಮಾಡಿದಿರಿ ಅದರಂತೆ ನಾನು ಬಂದೆ. ಆದರೆ ನೀವು ನನ್ನ ಮೇಲೆ ಇಂತಹ ಇಲ್ಲಸಲ್ಲದ ಆರೋಪಣೆಗಳನ್ನು ಹೊರಿಸುತ್ತೀರೆಂದುಕೊಂಡಿರಲಿಲ್ಲ. ಇದಕ್ಕೆಲ್ಲಾ ಕಾರಣ ನಿಮ್ಮ ಮನೆಯಲ್ಲಿರುವ ರಾಜಣ್ಣನವರೆಂದು ಕಾಣುತ್ತದೆ. ಅವರು ಯಾವ ದುರುದ್ದೇಶವನ್ನಿಟ್ಟುಕೊಂಡು ಈ ರೀತಿಯಾಗಿ ಮಾಡುತ್ತಿದ್ದಾರೆಯೋ ನನಗೆ ಗೊತ್ತಿಲ್ಲ. ಕಡೆಯದಾಗಿ ನಾನು ಹೇಳುವುದಿಷ್ಟೇ. ಇಷ್ಟವಿದ್ದರೆ ನಿಮ್ಮ ಮಗಳನ್ನು ಕೊಡಿರಿ, ಇಲ್ಲದಿದ್ದರೆ ಬೇಡ. ಅದಿಲ್ಲದೇ ಹೀಗೆಲ್ಲಾ ನನ್ನನ್ನು ಅಪಮಾನಗೊಳಿಸಬೇಡಿರಿ" ಎಂದ.

ಅವನು ಹೇಳಿದ ಧ್ವನಿಯು ನೊಂದುಕೊಂಡು ಹೇಳುವಂತಿತ್ತು. ಅದನ್ನು ಕೇಳಿದರೆ ಯಾರಿಗಾದರೂ ಮರುಕವು ಬರುವಂತೆ ಇದ್ದಿತು.

ಆಗ ಗುಂಡರಾಯರೂ "ನೀವು ತಪ್ಪು ತಿಳಿದುಕೊಳ್ಳಬೇಡಿ. ನಮ್ಮ ಕಿವಿಯಲ್ಲಿ ವಿಷಯ ಬಿದ್ದಿತು. ಹಾಗೆ ಬಿದ್ದನಂತರ ಅದನ್ನು ಸ್ಪಷ್ಟವಾಗಿ ಕೇಳಿ ತಿಳಿದುಕೊಳ್ಳದೇ ಮನಸ್ಸಿನಲ್ಲಿಯೇ ಇಟ್ಟುಕೊಂಡಿರುವುದು ನನಗೆ ಇಷ್ಟ ವಿಲ್ಲ. ನಾನು ಯಾವುದನ್ನು ಖಡಾಖಡಿಯಾಗಿ ಮಾತನಾಡುವ ಮನುಷ್ಯ. ಆದರಿಂದಲೇ ನಿಮ್ಮಲ್ಲಿಗೆ ನೇರವಾಗಿ ಬಂದು ಕೇಳಿದೆ. ಈಗ ಎಲ್ಲ ವಿಷಯ ಗಳೂ ಕೂಲಂಕಷವಾಗಿ ಗೊತ್ತಾಯಿತಲ್ಲ. ನಾಳೆ ಲಗ್ನಪತ್ರಿಕೆ ಮಾಡುವು ದೆಂದು ಗೊತ್ತು ಮಾಡಿದ್ದೇನೆ. ನಾಳೆಯ ದಿನ ಮಧ್ಯಾಹ್ನ ನಾಲ್ಕು ಗಂಟೆಗೆ ಸರಿಯಾಗಿ ಬಂದುಬಿಡಿ. ಬರುತ್ತಾ ನಿಮ್ಮ ಭಾವನವರನ್ನೂ ತಂಗಿಯು ರನ್ನೂ ಕರೆದುಕೊಂಡು ಬನ್ನಿರಿ" ಎಂದರು,

ಒಂದೆರಡು ಲೋಕಾಭಿರಾಮದ ಮಾತುಗಳನ್ನಾಡಿದನಂತರ ಗುಂಡೂ ರಾಯರು ಅಲ್ಲಿಂದ ಹೊರಟರು.

ದಾರಿಯಲ್ಲಿ ಬರುತ್ತಾ ವೆಂಕಟೇಶಯ್ಯನವರು "ಅವನ ವಿಷಯವನ್ನು ಪೂರ್ಣವಾಗಿ ವಿಚಾರಿಸದೇ ನಾಳೆಯ ದಿನ ಲಗ್ನಪತ್ರಿಕೆಯೆಂದು ಯಾಕೆ ಹೇಳಿ ದೆಯಯ್ಯಾ" ಎಂದರು.

"ಇನ್ನು ವಿಚಾರಿಸುವುದೇನಿದೆ ? ಅವನು ಹೇಳಿದುದನ್ನು ಕೇಳಿದೆಯೋ ಇಲ್ಲವೋ ?"

ಅಸಮಾಧಾನವಾಗಿದ್ದರೂ ವೆಂಕಟೇಶಯ್ಯನವರು ಸಮಾಧಾನವನ್ನು ತಂದುಕೊಂಡು "ಗುಂಡಣ್ಣಾ. ನೀನು ಒಂದು ಕಡೆಯುವ ಹೇಳಿದ ಮಾತು ಗಳನ್ನು ಕೇಳಿಕೊಂಡಿದ್ದೀಯೆ, ಇನ್ನೊಂದು ಪಕ್ಷದವರು ಏನು ಹೇಳುತ್ತಾ ರೆಂಬುದನ್ನು ಕೇಳಿಲ್ಲ. ನಿನ್ನೆಯ ದಿನ ಇವನಿಗೆ ಚೀಮಾರಿ ಹಾಕಿದ ಶಂಕರ ನೊಂದಿಗೆ ರಾಜಣ್ಣನೂ ಬಂದಿದ್ದ. ಅವನೇನು ಹೇಳುತ್ತಾನೆಯೋ ಕೇಳ ಬೇಡವೇ ?" ಎಂದರು.

"ರಾಜಣ್ಣ. ರಾಜಣ್ಣ. ಅವನಿಂದಲೇ ಈ ಕಷ್ಟಗಳೆಲ್ಲಾ ನನಗೆ ಬಂದಿದ್ದು. ಚಿಕ್ಕಪ್ಪ ತಾನೂ ಇಕ್ಕ, ಭಿಕ್ಷವೂ ಬೇಡಲೀಸ,-ಎಂಬಂತೆ ಅವನೂ ಮದುವೆ ಮಾಡಿಕೊಳ್ಳುವುದಿಲ್ಲ. ಮದುವೆಯಾಗುವವರಿಗೂ ಅಡ್ಡಿ ಬರುತ್ತಾನೆ. ಈ

ದಿನವೇ ಅವನನ್ನು ಕರೆದು ಬೇರೇ ರೂಂ ನೋಡಿಕೋ ಎಂದು ಹೇಳುತ್ತೇನೆ. ಇನ್ನು ಮೇಲೆ ಅವನ ಮಾತನ್ನೇ ನನ್ನ ಮುಂದೆ ಎತ್ತಬೇಡ''

## ೧೫

ಅದೇ ಸಾಯಂಕಾಲ ವೆಂಕಟೇಶಯ್ಯನವರೂ ರಾಜಣ್ಣನೂ ವಿಲ್ಸನ್ ಗಾರ್ಡ್‌ನ್ ಕಡೆಗೆ ಹೋಗುತ್ತಿದ್ದ ಹಾಗೆಯೇ ಎದುರಿಗೆ ವಸಂತಯ್ಯ ಸಿಕ್ಕಿದ.

ದೂರದಿಂದ ಬರುತ್ತಿದ್ದವನನ್ನು ನೋಡಿ ''ಅವನೇ ವಸಂತಯ್ಯ" ಎಂದು ಹೇಳಿದ ರಾಜಣ್ಣ,

ಆದರೂ ವಿಷಯವನ್ನು ಖಚಿತ ಮಾಡಿಕೊಳ್ಳಲು"ಸರಿಯಾಗಿ ನೋಡಿ ಹೇಳಯ್ಯ, ಪ್ರಮಾದವಾದೀತು. ಅವನೇ ವಸಂತಯ್ಯನೋ. ಆ ಆನಂದ ರಾಯನ ಭಾವನೋ" ಎಂದರು.

"ಇದೇನು ಹೀಗೆ ಕೇಳುತ್ತೀರಿ, ವೆಂಕಟೇಶಯ್ಯನವರೇ ?"

"ಒಂದುಬಾರಿ ಕೇಳುವುದನ್ನು ನಾಲ್ಕು ಬಾರಿ ಕೇಳಿ ತಿಳಿದುಕೊಂಡರೆ ತಪ್ಪೇನು ?"

ರಾಜಣ್ಣ ಏನೋ ಹೇಳಬೇಕೆಂದಿರುವಷ್ಟರಲ್ಲಿ ವಸಂತಯ್ಯ ಸಮೀಪ ಗತನಾದ.

ಪರಿಚಯವಿಲ್ಲದಿದ್ದರೂ ವೆಂಕಟೇಶಯ್ಯನವರೇ ಅವನನ್ನು ಉದ್ದೇಶಿಸಿ ''ಸ್ವಲ್ಪ ನಿಂತುಕೊಳ್ಳಿರಿ. ನಿಮ್ಮೊಂದಿಗೆ ನಾನು ಸ್ವಲ್ಪ ಮಾತನಾಡಬೇಕಾಗಿದೆ" ಎಂದರು.

ರಾಜಣ್ಣನೊಡನೆ ಮತ್ತೊಬ್ಬ ಮುದುಕ ಬಂದು ಏನೋ ಮಾತನಾಡ ಬೇಕಾಗಿದೆ-ಎಂದು ಹೇಳುತ್ತಿದ್ದಾನೆ. ಆ ಮಾತು ಕೇಳಿ ವಸಂತಯ್ಯ ತರ ತರನೆ ನಡುಗತೊಡಗಿದ.

"ನಾನು ಮಾತನಾಡಬೇಕೆಂದಿದ್ದ ವಿಷಯವೇನೆಂದರೆ— —"

ವಸಂತಯ್ಯ ಹಿಂದೆ ಮುಂದೆ ತಿರುಗಿ ನೋಡಿದ. ಬೀದಿಯಲ್ಲಿ ಓಡಿ ಯಾಡುವ ಜನರಲ್ಲದೇ ಬೇರೆ ಯಾರೂ ಇರಲಿಲ್ಲ.

ವಸಂತಯ್ಯನು "ಇಲ್ಲಿ ಬೇಡ. ಲಾನ್ ಬಾಗಿನಲ್ಲಿ ಕುಳಿತುಕೊಂಡು ಮಾತನಾಡೋಣ, ನಡೆಯಿರಿ" ಎಂದ,

ಮೂರು ಮಂದಿಯೂ ಹೊರಟರು.

ನಾಲ್ಕು ಹೆಜ್ಜೆ ಹಾಕುವುದರೊಳಗಾಗಿ "ತಪ್ಪು ತಿಳಿದುಕೊಳ್ಳಬೇಡಿ. ನಾವೆಲ್ಲರೂ ಒಟ್ಟಿಗೆ ಹೋಗುವುದು ಬೇಡ. ನಾನು ಮುಂದೆ ಹೋಗುತ್ತೇನೆ. ನೀವು ಹಿಂದೆ ಹಿಂದೆ ಬನ್ನಿರಿ" ಎಂದು ಅವರ ಉತ್ತರವನ್ನು ಸಹ ನಿರೀಕ್ಷೆ ಮಾಡದೇ ವಸಂತಯ್ಯ ಮುಂದೆ ಮುಂದೆ ಹೊರಟುಬಿಟ್ಟ.

ವೆಂಕಟೇಶಯ್ಯನವರೂ ರಾಜಣ್ಣನೂ ಅವನನ್ನು ಅನುಸರಿಸಿ ಹೊರಟರು.

ರಾಜಣ್ಣ ಮೆಲ್ಲನೆಯ ದನಿಯಿಂದ "ವೆಂಕಟೇಶಯ್ಯನವರೇ! ನಿಮಗೆ ಗೊತ್ತಿಲ್ಲ. ಈ ಭಾವ-ಮೈದುನ ಇಬ್ಬರೂ ಶುದ್ಧ ಪಟಿಂಗರು ಜಂಟೀ ಕಳ್ಳರಿದ್ದ ಹಾಗೆ. ಅವನು ನಮ್ಮ ಕಣ್ಣು ತಪ್ಪಿಸಿ ಹೋಗಲು ಪ್ರಯತ್ನಪಡುತ್ತಿರುವಂತಿದೆ" ಎಂದ.

ಅವರು ನಗುತ್ತಾ "ನನ್ನ ಕಣ್ಣು ತಪ್ಪಿಸಿಕೊಂಡು ಇದುವರೆವಿಗೆ ಯಾರೂ ಹೋಗಿಲ್ಲ, ರಾಜಣ್ಣ. ಅವನು ಹೋಗಲಿ ನೋಡೋಣ. ಈಗ ಹೊರಟುಹೋದರೆ ನಾಳೆಯ ದಿನ ಲಗ್ನಪತ್ರಿಕೆಯ ವೇಳೆಗಾದರೂ ಬರುತಾನೆಯೋ ಇಲ್ಲವೋ? ಗುಂಡಣ್ಣಾ ಏನೋ ಅಂದುಕೊಂಡಿದ್ದಾನೆ ಈ ವಿಷಯ ಇತ್ಯರ್ಥವಾಗುವವರೆವಿಗೆ ನಾನು ಲಗ್ನಪತ್ರಿಕೆಯಾಗಲು ಬಿಡುತ್ತೇನೆಂದುಕೊಂಡಿದ್ದೀಯಾ? ಚನ್ನಕೇಶವಯ್ಯನವರು ನನಗೆ ಪರಿಚಯವಿಲ್ಲದಿರಬಹುದು. ಆದರೂ ಅವರ ಮಗಳು ಜಾನಕಿಯನ್ನು ನನ್ನೊಂದಿಗೆ ಕರೆದು ತರಬಲ್ಲೆ. ಆನಂದರಾಯನ ಜೊತೆಯಲ್ಲಿ ಕಳುಹಿಸುವುದಿಲ್ಲವೆಂದು ಹೇಳಿದಂತೆ ಅವರು ನನ್ನೊಂದಿಗೆ ಕಳುಹಿಸುವುದಿಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ಆ ಹುಡುಗಿಯನ್ನು ಎದುರಿಗೆ ಕುಳ್ಳಿರಿಸಿಕೊಂಡು ಆನಂದರಾಯನ ಬಾಯಿಗ ನೀರು ಇಳಿಸುತ್ತೇನೆ. ನೀನು ನೋಡುತ್ತಿರು. ಆನಂದರಾಯ ಟೈಪ್ ರೈಟಿಂಗ್ ಇನ್‌ಸ್ಟಿಟ್ಯೂಟ್‌ಗೆ ಹೋಗಿ ಆ ಹುಡುಗಿಯನ್ನು ಹೋಟಲಿಗೆ ಕರೆಸಿದ್ದು ನಿಜ ತಾನೇ"

"ದೇವರಾಣೆಗೂ ನಿಜ. ಶಂಕರ ಚೀಮಾರಿ ಹಾಕುತ್ತಿದ್ದರೆ ಈ ಭಾವ-ಮೈದುನ ಇಬ್ಬರೂ ಸುಮ್ಮನೆ ಕುಳಿತುಕೊಂಡಿದ್ದರು.

ವಸಂತಪ್ಪ ಲಾಲ್‌ಬಾಗಿನವರೆಗೆ ಹೋಗದೇ ಡಬ್ಬಲ್ ರೋಡಿನ ಎದುರಿಗೆ ಸಿಗುತ್ತಿದ್ದ ಮೊದಲ ಬಂಗಲೆಯ ಕಡೆ ತಿರುಗಿದ.

''ಅಂದಹಾಗೆ, ಇದರ ಇನ್ನೊಂದು ಮುಖ್ಯವಾದ ವಿಷಯವಿದೆ, ರಾಜಣ್ಣ. ಈ ಶ್ರಾವಣದಲ್ಲಿಯೇ ಮದುವೆ ಮಾಡಿಬಿಡಬೇಕೆಂದು ಗುಂಡು ಹಟ ತೊಟ್ಟುಬಿಟ್ಟಿದ್ದಾನೆ. ಇನ್ನಿರುವುದು ಒಂದೇ ಲಗ್ನ. ಇನ್ನು ಹತ್ತು ದಿನಗಳಿವೆ. ಈ ವರವನ್ನು ತಪ್ಪಿಸಿದರೆ ನಮ್ಮ ಜವಾಬ್ದಾರಿ ತೀರಲಿಲ್ಲ. ಭಾಗ್ಯಳಿಗೆ ಸರಿಯಾದ ಇನ್ನೊಬ್ಬ ವರನನ್ನು ಹುಡುಕಬೇಕು''

ರಾಜಣ್ಣ ಏನೂ ಹೇಳದೇ ಸುಮ್ಮನಿದ್ದ.

''ಇಷ್ಟು ಬೇಗನೆ ಇನ್ನೊಬ್ಬ ವರನನ್ನು ಹುಡುಕುವುದು ಕಷ್ಟ. ನಿನಗೇನಾದರೂ ಆಲೋಚನೆ ತೋರುವುದಾದರೆ ಹೇಳು''

ಕಡೆಗೂ ತಾನು ನಿರೀಕ್ಷಿಸಿದ ಅವಕಾಶವು ಸಮೀಪಗತವಾಗಿ ಬಂದಿರುವಂತೆ ರಾಜಣ್ಣನಿಗೆ ತೋರಿತು. ತಾನು ಹಿಂದಿನಂತೆ ಸುಮ್ಮನಿದ್ದರೆ ಅವಕಾಶ ತಪ್ಪಿಹೋಗುತ್ತದೆ ಏನು ಮಾಡುವುದು? ಮನಸ್ಸಿನಲ್ಲಿರುವುದನ್ನು ಹೇಳಿಯೇ ಬಿಡಬೇಕೆಂದು ತೀರ್ಮಾನ ಮಾಡಿದ.

"ನೀವು ತಪ್ಪು ತಿಳಿದುಕೊಳ್ಳದಿದ್ದರೆ ಒಂದು ಮಾತು ಹೇಳುತ್ತೇನೆ"

"ನನ್ನೊಂದಿಗೆ ಮಾತನಾಡುವುದರಲ್ಲಿ ನೀನು ಸಂಕೋಚಪಡಬೇಕಾಗಿಲ್ಲ. ಎಂತಹ ವಿಷಯವಿದ್ದರೂ ನಾನು ತಪ್ಪು ತಿಳಿದುಕೊಳ್ಳುವುದಿಲ್ಲ"

''ಗುಂಡೂರಾಯರು ಒಪ್ಪಿಕೊಳ್ಳುವುದಾಗಿದ್ದರೆ ನಾನು ಭಾಗ್ಯಳನ್ನು ಮದುವೆ ಮಾಡಿಕೊಳ್ಳಲು ಸಿದ್ಧನಾಗಿದ್ದೇನೆ"

ಬಲು ದಿನಗಳಿಂದ ವೆಂಕಟೇಶಯ್ಯನವರು ನಿರೀಕ್ಷಿಸುತ್ತಿದ್ದ ಸಮಯವು ಬಂದಿತು,

"ಮೊದಲೇ ಯಾಕೆ ಈ ವಿಷಯ ಹೇಳಲಿಲ್ಲ, ರಾಜಣ್ಣ. ಹೇಳಿದ್ದರೆ ಇಷ್ಟೊಂದು ತಾಪತ್ರಯಗಳೇ ಇರುತ್ತಿರಲಿಲ್ಲವಲ್ಲೋ"

''ಹೇಳಬೇಕೆಂದುಕೊಂಡೇ ಇದ್ದೆ. ಆದರೆ ಈ ಪರೀಕ್ಷೆಯಲ್ಲಿ ಪಾಸಾಗುವವರೆವಿಗೆ . ಮದುವೆ ಮಾಡಿಕೊಳ್ಳುವುದಿಲ್ಲವೆಂದು ಹೇಳುತ್ತಿದ್ದೆನಲ್ಲಾ ಎಂದು--- — —''

"ಹುಚ್ಚ, ಹುಚ್ಚ. ಪರೀಕ್ಷೆಗೇನು ಕೊಳ್ಳೆ ಹೋಗುತ್ತದೆ. ಹೇಳು, ಈ

ವರ್ಷವಿಲ್ಲದಿದ್ದರೆ ಮುಂದಿನ ವರ್ಷ. ಮುಂದಿನ ವರ್ಷವೂ ಇಲ್ಲದಿದ್ದರೆ ನಾಲ್ಕು ವರ್ಷ ಬಿಟ್ಟುಕೊಂಡು. ಆದರೆ ಸಮಯದಲ್ಲಿ ಬಿಟ್ಟುಬಿಟ್ಟರೆ ಬಂಗಾರದಂತಹ ಹುಡುಗಿ ಸಿಕ್ಕುತ್ತದೆಯೇನೋ? ಅದಕ್ಕೇ ಹುಡುಗರಿಗೆ ಬುದ್ಧಿಯಿಲ್ಲವೆಂದು ಹೇಳುವುದು"

ಡಬ್ಬಲ್ ರೋಡಿನ ಎದುರಿಗೆ ನೇರವಾಗಿ ಹೋದರೆ ದೊಡ್ಡದೊಂದು ಕಾಂಪೌಂಡ್ ನಿರ್ಮಿಸುತ್ತಿದ್ದಾರೆ ಅದನ್ನು ದಾಟಿ ಹೋದರೆ ಗುಡ್ಡದಂತೆ ಬೆಳೆದಿರುವುದೊಂದು ಒಂದೇ ಕಲ್ಲು ಕಂಡುಬರುತ್ತದೆ. ಕೆಂಪೇಗೌಡ ಕಟ್ಟಿದ ಪೂರ್ವದಿಶೆಯ ಮಂಟಪವು ಇರುವುದು ಅಲ್ಲಿಯೇ.

ಆ ಬಂಡೆಯ ಬಳಿ ಹೋಗಿ ನಿಂತುಕೊಂಡಿದ್ದ ವಸಂತಯ್ಯ.

ವೆಂಕಟೇಶಯ್ಯನವರೂ ರಾಜಣ್ಣನೂ ಹೋಗಿ ಅವನನ್ನು ಕೂಡಿಕೊಂಡರು.

ಮೂವರೂ ಹೋಗಿ ಮರೆಯಾದ ಒಂದು ಜಾಗದಲ್ಲಿ ಕುಳಿತುಕೊಂಡರು.

ವೆಂಕಟೇಶಯ್ಯನವರು ಮಾತು ಮೊದಲು ಮಾಡಿ "ನಿಮ್ಮ ಭಾವ ಮೈದುನ ಆನಂದರಾಯ ಮೊನ್ನೆಯ ದಿನ ಇನ್ಸ್ಟಿಟ್ಯೂಟ್ ಬಳಿ ಹೋಗಿ ಜಾನಕಿಯನ್ನು ಹೊರಗೆ ಕರೆಸಿ ಮಾತನಾಡುವುದಕ್ಕೆ ಪ್ರಯತ್ನ ಮಾಡಿದನಂತೆ, ಅದು ಯೋಗ್ಯ ವರನ ಲಕ್ಷಣವಲ್ಲವೆಂದು ನನ್ನ ಅಭಿಪ್ರಾಯ. ಅವನಿಗೆ ಗುಂಡೂರಾಯರು ತಮ್ಮ ಮಗಳನ್ನು ಕೊಡಬೇಕೆಂದಿದ್ದಾರೆ. ಅವರು ನನ್ನ ಪರಮಾಪ್ತ ಗೆಳೆಯರು. ಅವರ ಮಗಳು ಯೋಗ್ಯನಾದವನನ್ನೇ ಮದುವೆಯಾಗಬೇಕೆಂಬುದು ನನ್ನ ಅಭಿಮತ. ಬೇಗಾಗ ನಾನೂ ಗುಂಡೂರಾಯರೂ ಹೋಗಿ ಅವನನ್ನು ಕಂಡಿದ್ದೆವು. ಠಕಾಯಿಸಿ ಮಾತನಾಡಿಬಿಟ್ಟೆ. ನಿನ್ನೆಯ ದಿನ ಈ ಹುಡುಗನೂ, ಜಾನಕಿಯ ಅಣ್ಣನೂ ನಿಮ್ಮ ಮನೆಗೆ ಬಂದಿದ್ದರು. ನಿಮಗೆ ನಿಜವು ತಿಳಿದಿದೆ. ನೀವು ಸಂಪನ್ನರೆಂದೂ, ಇರುವ ವಿಷಯವನ್ನು ಹೇಳುತ್ತೀರೆಂದು ನಿಮ್ಮ ಬಳಿಗೆ ಬಂದೆ" ಎಂದರು.

ವಸಂತಯ್ಯನು "ಓಹೋ! ಆ ವಿಷಯವನ್ನು ಕೇಳಲು ಈಗಾಗ ಗುಂಡೂರಾಯರು ಬಂದಿದ್ದರೋ? ಅದೊಂದನ್ನೂ ಅವನು ನನ್ನೊಂದಿಗೆ

ಹೇಳಲಿಲ್ಲ. ನಾಳೇ ಲಗ್ನಪತ್ರಿಯಿದೆ ಎಂದೂ, ಅದಕ್ಕಾಗಿ ಕರೆಯುವುದಕ್ಕೆ ಬಂದಿದ್ದರೆಂದೂ ಹೇಳಿದ" ಎಂದ.

"ನೋಡಿದಿರಾ, ಇದರಲ್ಲಿಯೇ ಎಷ್ಟು ಠಕಾವಣೆ ಇದೆ. ಈಗಲಾದರೂ ಹೇಳಿ. ಅವನು ಜಾನಕಿಯನ್ನು ಕರೆದು ಮಾತನಾಡಿಸಿದ್ದು ನಿಜ ತಾನೇ ?"

ವಸಂತಯ್ಯ ಏನೂ ಮಾತನಾಡದೇ ಗಳಿಗೆಯ ಕಾಲ ಸುಮ್ಮನೆ ಕುಳಿತುಕೊಂಡ,

"ಯಾಕೆ ವಸಂತಯ್ಯನವರೇ ! ನೀವೇನೂ ಮಾತೇ ಆಡುವುದಿಲ್ಲ"

ಸುಮ್ಮನಾಗಿ ಹೋಗಿದ್ದ ವಸಂತಯ್ಯ ಬಡಬಡನೆ ಮಾತನಾಡ ತೊಡಗಿದ.

"ಏನು ಮಾತನಾಡಲಿ, ಸ್ವಾಮಿ. ನನ್ನ ಗೋಳನ್ನು ಏನೆಂದು ಹೇಳಿಕೊಳ್ಳಲಿ. ಈ ಆನಂದರಾಯ ಇದ್ದಾನೆಲ್ಲಾ ಮಾರೀಚನಿದ್ದ ಹಾಗೆ. ನನ್ನ ಹೆಂಡತಿ ಇದ್ದಾಳೆಯಲ್ಲಾ. ಅವಳು ತಾಟಕಿಯಿದ್ಧ ಹಾಗೆ. ಈ ಇಬ್ಬರ ಕೈಯಲ್ಲಿ ಸಿಕ್ಕಿ ಹಾಕಿಕೊಂಡು ನಾನು ಪಡುತ್ತಿರುವ ಪಾಡು ಅಷ್ಟಿಷ್ಟಲ್ಲ"

ದಡಬಡನೆ ಹರಿಯ ತೊಡಗಿದ ಮಳೆಯ ನೀರು ಇದ್ದಕ್ಕಿದ ಹಾಗೆಯೇ ನಿಂತುಹೋಗುವಂತೆ ಅವನು ಬಡಬಡನೆ ಆರಂಭಮಾಡಿದ ಮಾತ ಹಠಾತ್ತನೆ ನಿಂತುಹೋಯಿತು.

ವೆಂಕಟೇಶಯ್ಯನವರು ಸಾವಧಾನದಿಂದ "ಹೇಳಿ, ವಸಂತಯ್ಯನವರೇ. ಎಂತಹ ವಿಷಯವನ್ನಾದರೂ ಒಬ್ಬರು ಮತ್ತೊಬ್ಬರೊಡನೆ ಹೇಳಿಕೊಳ್ಳಬೇಕು. ಅದರಿಂದ ಮನಸ್ಸಿಗೂ ಸಮಾಧಾನವಾಗುವುದಲ್ಲದೇ ಎಷ್ಟೋ ಪ್ರಯೋಜನವೂ ಆಗುತ್ತದೆ, ಹೇಳಿ. ನಿಮಗೇನು ತೊಂದರೆಯಾಗುತ್ತಿದೆ ? ನೀವೇನು ಪಡುಪಾಟಲು ಪಡುತ್ತಿದ್ದೀರಿ ?" ಎಂದು ಕೇಳಿದರು.

"ನಿಮಗೆ ನಮ್ಮನಮ್ಮ ಸಂಬಂಧವು ಸರಿಯಾಗಿ ತಿಳಿದಿದೆಯೋ ಇಲ್ಲವೋ ಕಾಣೆ. ಈ ದಿನ ಬೆಳಗ್ಗೆ ನೀವು ಆನಂದರಾಯನೆಂಬುವನನ್ನು ಹೋಗಿ ನೋಡಿದಿರೋ ಇಲ್ಲವೋ ? ನಿಮ್ಮ ಸ್ನೇಹಿತರು ಗುಂಡೂರಾಯರ ಮಗಳನ್ನು ಮದುವೆ ಮಾಡಿಕೊಳ್ಳಲು ಒಡಿಯಾಡುತ್ತಿರುವವನು. ಅವನು ನನ್ನ ಭಾವ ಮೈದುನ. ಅಂದರೆ ಅವನ ತಂಗಿಯನ್ನೇ ನಾನು ಮದುವೆ ಮಾಡಿಕೊಂಡಿರುವುದು. ನನಗೆ ಮದುವೆಯಾಗಿ ಹನ್ನೆರಡು ಹದಿಮೂರು ವರ್ಷಗಳಾಗುತ್ತ

ಬಂದುವು. ಒಂದೆರಡು ವರ್ಷ ಸುಖವಾಗಿ ಸಂಸಾರ ಮಾಡಿದೆ. ಆಗ ಈ ಆನಂದರಾಯ; ಶಿವಮೊಗ್ಗ ಜಿಲ್ಲೆಯಲ್ಲಿ ಎಲ್ಲಿಯೋ ಕೋಆಪರೇಟೀವ್ ಸೊಸೈಟಿಗಳ ಇನ್ಸ್‌ಪೆಕ್ಟರ್ ಕೆಲಸ ಮಾಡುತ್ತಿದ್ದ.

"ನನಗೆ ಮದುವೆಯ ವಯಸ್ಸಿನ ಒಬ್ಬ ತಂಗಿಯಿದ್ದಳು. ನನಗೆ ಈ ಪ್ರಪಂಚದಲ್ಲಿರುವ ಬಂಧುಬಾಂಧವರೂ, ಸರ್ವರೂ ಅವಳೊಬ್ಬಳೇ. ಬಹಳ ಗುಣವಂತೆ. ಹೆಸರಿಗೆ ತಕ್ಕ ಹಾಗೆಯೇ ಸುಶೀಲೆ. ಎಲ್ಲರೂ ಒಂದೇ ಕಡೆ ಇರೋಣ ಎಂಬ ಆಶಯದಿಂದ ಸುಶೀಲೆಯನ್ನು ಕೊಟ್ಟು ಆನಂದರಾಯನಿಗೆ ಮದುವೆ ಮಾಡಿದೆ,

"ಅಂದಿನಿಂದ ನನ್ನ ಹೆಗಲ ಮೇಲೆ ಏಳರಾಟ ಶನಿಯು ಹತ್ತಿಕೊಂಡ ಹಾಗೆಯೇ ಆಯಿತು. ಅಷ್ಟೇಕೆ, ಇವರಪ್ಪ ನರಸಿಂಗರಾಯರು ಎನ್ನುತ್ತಾರೆಯಲ್ಲಾ—ಆ ಮುಂಡೇಮಗನಿಗೆ ನರಸಿಂಗರಾಯ ಎಂದು ಹೆಸರಿರುವುದಕ್ಕಿಂತಲೂ ಕಳಿಂಗರಾಯ ಎಂದಿದ್ದರೆ ಎಷ್ಟೋ ಚೆನ್ನಾಗಿತ್ತು. ಈ ಕಳಿಂಗರಾಯನ ಮಗಳನ್ನು ಮದುವೆಯಾದಂದಿನಿಂದಲೂ ನನಗೆ ಶನಿಯೇ ಬೆನ್ನು ಹತ್ತಿದ್ದಾನೆಂದುಕೊಳ್ಳಿರಿ. ಅಂದಿನಿಂದ ನನ್ನ ಜೀವನದಲ್ಲಿ ಸುಖವೆಂಬುದೇ ಲುಪ್ತವಾಗಿ ಹೋಯಿತು.

"ವಿಷಯ ಎಲ್ಲೆಲ್ಲಿಗೋ ಹೋಯಿತು. ಈ ಆನಂದರಾಯನಿಗೆ ನನ್ನ ತಂಗಿ ಸುಶೀಲೆಯನ್ನು ಕೊಟ್ಟು ಮದುವೆ ಮಾಡಿದೆನಷ್ಟೇ. ಅದಾದ ಕೆಲವು ದಿನಗಳಲ್ಲಿಯೇ ಯಾವುದೋ ಸೊಸೈಟಿಯ ದುಡ್ಡು ತಿಂದು ಡಿಸ್‌ಮಿಸ್ ಆಯಿತು. ತಾನು ಬ್ರಾಹ್ಮಣನಾದುದರಿಂದ ಇಲ್ಲದ ಅಪಾದನೆ ತಂದು ಡಿಸ್‌ಮಿಸ್ ಮಾಡಿದರು ಎನ್ನುತ್ತಾನೆ. ಸರಕಾರಕ್ಕೇನು ಕಣ್ಣಿಲ್ಲವೇ ? ಎಷ್ಟೋ ಮಂದಿ ಬ್ರಾಹ್ಮಣರು ಕೆಲಸಮಾಡಿ ಸಂಬಳ ತೆಗೆದುಕೊಳ್ಳುತ್ತಾ ಇಲ್ಲವೇ ? ಅವೆಲ್ಲವೂ ಸುಳ್ಳು, ಎನ್ನಿ. ದುಡ್ಡು ತಿಂದು ಸಿಕ್ಕಿಹಾಕಿಕೊಂಡ. ಇವನಿಗೆ ಡಿಸ್‌ಮಿಸ್ ಆಯಿತು.

"ಅದಕ್ಕೆ ನನ್ನ ತಂಗಿ ಏನು ಮಾಡುತ್ತಾಳೆ. ನೀವೇ ಹೇಳಿ, ಸ್ವಾಮಿ. ಅವಳ ದೌರ್ಭಾಗ್ಯದಿಂದ ತನ್ನ ಕೆಲಸ ಹೋಯಿತು ಎನ್ನುತ್ತಾನೆ. ಅವಳೇನು ಇವನನ್ನು ದುಡ್ಡು ತಿನ್ನು ಎಂದಳೇ ? ಅಂದಿನಿಂದಲೂ ಒಂದಲ್ಲ ಅನೇಕ ಬಗೆಯಾಗಿ ನನ್ನ ತಂಗಿಯನ್ನು ಚಿತ್ರಹಿಂಸೆ ಮಾಡತೊಡಗಿದ. ಅದಕ್ಕೆ ತಾಟಕಿ ನನ್ನ ಹೆಂಡತಿಯಿದ್ದಾಳೆಯಲ್ಲಾ ಅವಳು ಸಾವಿರಾಲು"

"ಹಾಗಾದರೆ ಈ ಆನಂದರಾಯನಿಗೆ ಒಬ್ಬ ಹೆಂಡತಿಯೂ ಇದ್ದಾಳೆಯೇನು ?"

"ಹೂಂ. ಹೆಂಡತಿಯೊಬ್ಬಳೇ ಏನು ? ಮೂರು ಮಂದಿ ಮಕ್ಕಳೂ ಇದ್ದಾರೆ. ನಾನು ಬನ್ನೇರುಗಟ್ಟದವನು. ಅಲ್ಲಿ ನಮ್ಮ ಪೂರ್ವಿಕರದೊಂದು ಮನೆಯಿದೆ. ಅದರಲ್ಲಿ ಸ್ವಲ್ಪ ಭಾಗವನ್ನು ಬಾಡಿಗೆಗೆ ಕೊಟ್ಟು ಅದರಲ್ಲಿ ಬರುವುದರಲ್ಲಿಯೇ ಜೀವನ ಮಾಡಿಕೊಂಡಿರುವಂತೆ ನನ್ನ ತಂಗಿಗೆ ಹೇಳಿದ್ದೇನೆ. ಅವಳು ಅಲ್ಲಿಯೇ ಇದ್ದಾಳೆ.

"ಸುಶೀಲೆಯನ್ನೂ, ಮೂರು ಮಕ್ಕಳನ್ನೂ ನಡುನೀರಿನಲ್ಲಿ ಕೈ ಬಿಟ್ಟ ಹಾಗೆ ಬಿಟ್ಟು ಇವನು ಬೇರೊಂದು ಮದುವೆಯನ್ನು ಮಾಡಿಕೊಳ್ಳುವುದಕ್ಕೆ ಪ್ರಯತ್ನ ಪಡುತ್ತಿದ್ದಾನೆ. ಅದಕ್ಕೆ ನನ್ನ ಹೆಂಡತಿಯದು ಸಹಾಯ''

"ನಿಮ್ಮ ತಂಗಿಯನ್ನೇ ಅವನು ಬಿಟ್ಟು ಬಿಟ್ಟಿರುವಾಗ ನೀವೇಕೆ ಅವನ ಮದುವೆಗೆ ಓಡಾಡುತ್ತಿದ್ದೀರಿ ?''

"ವಾಸ್ತವವಾಗಿ ಓಡಿಯಾಡುತ್ತಿಲ್ಲ, ಸ್ವಾಮಿ. ಆದರೆ ಈ ಮುಂಡೇ ಮಗ ಎಲ್ಲಿದರೂ ಒಂದು ಕನ್ಯೆಯನ್ನು ಹುಡುಕಿಕೊಂಡು ಬರುತ್ತಾನೆ. ಅಣ್ಣ ತಂಗಿಯರು ನೋಡಿ ಮಾತನಾಡಿಕೊಂಡು ಬರಲು ಸಿದ್ಧವಾಗುತ್ತಾರೆ. ನಾನು ಜೊತೆಯಲ್ಲಿ ಹೊರಡದಿದ್ದರೆ ನನ್ನ ಹೆಂಡತಿ ಕೊರಳು ಹಿಸುಕುತ್ತಾಳೆ. ವಿಧಿಯಿಲ್ಲದೇ ಅವರೊಂದಿಗೆ ಹೋಗಬೇಕಾಗಿ ಬಂದಿದೆ''

"ಈ ಆನಂದರಾಯನಿಗೆ ಏನಾದರೂ ಆಸ್ತಿಯಿದೆಯೇನು ?"

"ಏನು ಆಸ್ತಿಯೋ ಬಿಡಿ, ಸ್ವಾಮಿ. ಇವರಪ್ಪ ನರಸಿಂಗರಾಯನಿಗೆ ಕೊಳ್ಳೇಗಾಲದಲ್ಲಿ ಒಂದಿಷ್ಟು ಮಗ್ಗಗಳಿದ್ದುದು ನಿಜ. ಅಲ್ಲಿ ಒಂದು ಮನೆಯೂ ಇತ್ತು. ಕೆಲಸ ಹೋದ ಮೇಲೆ ಅವೆಲ್ಲವನ್ನೂ ಮಾರಿ ಈ ಊರಿಗೆ ಬಂದ. ಒಂದು ಮನೆ ಕಟ್ಟಬೇಕೆಂದು ಪ್ರಯತ್ನ ಮಾಡಿದ. ಅವನ ಬಳಿ ಇದ್ದುದೇ ಹತ್ತು ಸಾವಿರ ರೂಪಾಯಿ. ನನ್ನ ಹತ್ತಿರ ಸ್ವಲ್ಪ ದುಡ್ಡಿತ್ತು. ಅದನ್ನು ಕೊಡ್ಬೇಕೆಂದು ಅಣ್ಣ ತಂಗಿಯರು ನನ್ನ ಬೆನ್ನು ಹತ್ತಿದರು. ಇವನು ಅದನ್ನು ತೀರಿಸುತ್ತಾನೆಂದು ನನಗೆ ಭರವಸೆಯಿರಲಿಲ್ಲ. ಆದರೂ ನನ್ನ ತಂಗಿಗೂ ತಂಗಿಯ ಮಕ್ಕಳಿಗೂ ಆಗುತ್ತದೆಂದುಕೊಂಡು ನಾನು ಹದಿನೈದು ಸಾವಿರ ರೂಪಾಯಿ ಕೊಟ್ಟೆ. ಮನೇ ಕಟ್ಟಿ ಆದನಂತರ ಶನಿ

ಮುಂಡೇಮಗ ಹೆಂಡತಿಮಕ್ಕಳನ್ನು ಬಿಟ್ಟುಬಿಟ್ಟು ಬೇರೆ ಮದುವೆ ಮಾಡಿಕೊಳ್ಳಲು ಓಡಿಯಾಡುತ್ತಿದ್ದಾನೆ. ನಾನು ಮಾಡಿದ್ದು ಸುಶೀಲೆಗೂ ಪ್ರಯೋಜನವಾಗಲಿಲ್ಲ. ಕೈಯ್ಯಲ್ಲಿದ್ದ ದುಡ್ಡೂ ಹೋಯಿತು, ಹೀಗಾಗಿದೆ ನನ್ನ ಗತಿ”

ಈ ವೃತ್ತಾಂತವೆಲ್ಲವನ್ನೂ ಕೇಳಿದ ವೆಂಕಟೇಶಯ್ಯನವರು “ನಮ್ಮದು ಬಿಡಿ, ನಿಮ್ಮದು ಹೃದಯವಿದ್ರಾವಕವಾದ ಕತೆ” ಎಂದು ಹೇಳಿದರು.

“ಅದನ್ನು ಸಾವಿರ ಸಲ ಹೇಳಿ. ನನ್ನ ತಂಗೀ ಗೋಳುಗರೆಯುತ್ತಿದ್ದು ಈ ಮುಂಡೇಮಗ ಬೇರೆಯ ಮದುವೆಗೆ ಓಡಿಯಾಡುತ್ತಿದ್ದರೆ, ನಾನು ಇವೆಲ್ಲವನ್ನೂ ಸಹಿಸಿಕೊಂಡು ಹೇಗಿರಲಿ. ಎರಡುಮೂರು ಕಡೆ ಕನ್ಯೆಗಳು ಗೊತ್ತಾಗಿದ್ದವು. ಹೋದ ಬಾರಿ ಮದುವೆಯ ಕಾಲದಲ್ಲಿಯೇ ಆ ಮದುವೆಗಳಾಗಲು ಗೊತ್ತಾಗಿದ್ದವು. ಹೆಣ್ಣು ಕೊಡಬೇಕೆಂದು ಗೊತ್ತಾಗಿದ್ದ ಕಡೆಗೆ ಈ ಸಮಾಚಾರ ತಿಳಿಯುವಂತೆ ಮಾಡಿದೆ. ಇಲ್ಲದಿದ್ದರೆ ಅವನಿಗೀ ವೇಳೆಗೆ ಮದುವೆಯಾಗಿ ಹೋಗುತಿತ್ತು”

“ಹಾಗಾದರೆ ನೀವು ಈ ವಿಷಯಗಳನ್ನೆಲ್ಲಾ ಗುಂಡೂರಾಯರಿಗೇಕೆ ತಿಳಿಸಲಿಲ್ಲ ?”

“ನೇರವಾಗಿ ಹೋಗಿ ನಾನು ಹೇಳಿದರೆ ಇವರು ಸುಮ್ಮನೆ ಬಿಡುತಾರೆಯೆ ? ಅದಕ್ಕಾಗಿ ಸಮಯ ಕಾಯುತ್ತಿದ್ದೆ. ಆ ಮನೆಯವರು ಯಾರೂ ಸಿಕ್ಕಲಿಲ್ಲ. ಆದರೂ ಮದುವೆಯಾಗುವುದರೊಳಗಾಗಿ ಹೇಗಾದರೂ ಗುಂಡೂರಾಯರಿಗೆ ಈ ವಿಷಯವನ್ನು ತಿಳಿಸಿ ಮದುವೆ ಮುರಿದು ಬಿಡುತ್ತಿದ್ದೆ”

ಮಾತು ಮುಗಿಸುತ್ತಾ ವೆಂಕಟೇಶಯ್ಯನವರು “ನಿಮ್ಮಿಂದ ಬಹಳ ಉಪಕಾರವಾಯಿತು, ವಸಂತಯ್ಯನವರೇ ! ನಿಮಗೆ ನಾನು ಎಷ್ಟು ಧನ್ಯವಾದಗಳನ್ನು ಸಮರ್ಪಿಸಿದರೂ ಸಾಲದು” ಎಂದರು.

“ಇದರಲ್ಲಿ ಉಪಕಾರವೇನು ಬಂದಿತು ? ನನ್ನ ತಂಗಿಗಾಗಿ ನಾನು ನನ್ನ ಕರ್ತವ್ಯವನ್ನು ಮಾಡುತ್ತಿದ್ದೇನೆ. ಆದರೆ ನನ್ನದೊಂದೇ ಒಂದು ಪ್ರಾರ್ಥನೆ. ನಾನು ಈ ವಿಷಯವನ್ನು ತಿಳಿಸಿದೆನೆಂದೂ ನೀವು ಯಾರೊಂದಿಗೂ ಹೇಳಬಾರದು. ಗುಂಡೂರಾಯರಿಗೆ ವಿಷಯವನ್ನೆಲ್ಲಾ ಹೇಳಿ, ಬೇಡವೆನ್ನುವುದಿಲ್ಲ. ಆದರೆ ನಾನು ಹೇಳಿದೆನೆಂದು ಆ ಅಣ್ಣ ತಂಗಿಯರಿಗೆ ಗೊತ್ತಾದರೆ ನನ್ನನ್ನು ಜೀವದೊರಸೆ ಬಿಡುವುದಿಲ್ಲ”

"ಅದನ್ನು ನನಗೆ ಬಿಡಿ, ನಾನು ನೋಡಿಕೊಳ್ಳುತ್ತೇನೆ''

ಕಟ್ಟಕಡೆಯಲ್ಲಿ ರಾಜಣ್ಣನು "ನನ್ನದೊಂದು ಪ್ರಶ್ನೆಯಿದೆ. ಗುಂಡೂರಾಯರ ಮಗಳನ್ನು ಕೊಡುವುದಾಗಿ ಗೊತ್ತಾಗಿದ್ದರೂ ಈ ಅನಂದರಾಯ ಚನ್ನಕೇಶವಯ್ಯನವರ ಮಗಳನ್ನು ನೋಡುವುದಕ್ಕೇಕೆ ಹೋದ ?" ಎಂದನು.

''ಇದೆಂತಹ ಪ್ರಶ್ನೆಯೋ. ಏನೋ ಹೋದ. ಹಾಳಾಗಿ ಹೋಗಲಿ ಬಿಡು'' ಎಂದರು ವೆಂಕಟೇಶಯ್ಯನವರು.

ವಸಂತಯ್ಯನು "ಹಾಗಲ್ಲ, ಸ್ವಾಮಿ. ಅವರು ಕೇಳುವುದರಲ್ಲಿ ಒಂದು ಅರ್ಥವಿದೆ. ಎರಡು ತಿಂಗಳ ಹಿಂದೆ ಮದುವೆಯ ಕಾಲದಲ್ಲಿ ಖಚಿತವಾಗಿ ಗೊತ್ತಾಗಿದ್ದ ಮದುವೆಗಳು ಒಡೆದು ಹೋದುವು. ಈ ಶ್ರಾವಣದಲ್ಲಿ ಲಗ್ನ ಪತ್ರಿಕೆಯಾಗಿದ್ದ ಮದುವೆಯೂ ನಿಂತುಹೋಯಿತು. ಅವುಗಳಿಗೆಲ್ಲಾ ನಾನೇ ಕಾರಣನೆಂಬುದು ಅವನಿಗೆ ತಿಳಿಯದು. ಎಲ್ಲಾ ಗೊತ್ತಾಗಿದ್ದರೂ ಮದುವೆ ಆಗದೇ ಹೋದುದರಿಂದ ಅವನಿಗೆ ಜನಗಳ ಮಾತಿನಲ್ಲಿ ಭರವಸೆಯೇ ಹೊರಟು ಹೋಗಿದೆ. ಯಾರಾದರೊಬ್ಬರು ಮಗಳನ್ನು ಕೊಡುತ್ತೇವೆಂದರೂ ಅವನು ಅವರ ಮಾತಿನಲ್ಲಿ ನಂಬಿಕೆಯಿಲ್ಲದೇ ಹೊಸ ಹೊಸ ಕಡೆ ಹೆಣ್ಣುಗಳನ್ನು ನೋಡುತ್ತಲೇ ಇರುತ್ತಾನೆ" ಎಂದು ಹೇಳಿದ.

ಈ ವಿಷಯ ವಸಂತಯ್ಯ ಹೇಳಿದುದಾಗಿ ಯಾರೊಂದಿಗೂ ಹೇಳಕೂಡದೆಂದು ವೆಂಕಟೇಶಯ್ಯನವರು ಅವನಿಗೆ ಪುನಃ ವಾಗ್ದಾನಮಾಡಿ ಅವನಿಂದ ಬೀಳ್ಕೊಂಡು ಮನೆಗೆ ಬಂದರು.

— — — —

ವೆಂಕಟೇಶಯ್ಯನವರು ಹೇಳಿದ ಕತೆಯೆಲ್ಲವನ್ನೂ ಕೇಳಿ ಊಟಕ್ಕೆ ಕುಳಿತಿದ್ದ ಗುಂಡೂರಾಯರು ತಮ್ಮ ಕೈ ಎಂಜಲಾಗಿದೆ ಎಂಬ ಪರಿವೆ ಸಹ ಇಲ್ಲದೇ ಮೂಗಿನ ಮೇಲೆ ಬೆರಳಿಟ್ಟುಕೊಂಡು ಹೇಳಿದರು.

''ಈ ಮುಂಡೇಮಗ ಇಂತಹ ಘಾತಕನೆಂಬುದು ನನಗೆ ಗೊತ್ತಿರಲಿಲ್ಲಯ್ಯ. ದೇವರು ನಿನಗೆ ಒಳ್ಳೆಯ ಬುದ್ಧಿಯನ್ನು ಕೊಟ್ಟು ಬರಮಾಡಿದ. ನೀನು ಬರದೇ ಇದ್ದಿದ್ದರೆ ಭಾಗ್ಯಳನ್ನು ಭಾವಿಗೆ ತಳ್ಳುತ್ತಿದ್ದುದಲ್ಲದೇ ನಾನೂ ಮುಳುಗಿ ಹೋಗುತ್ತಿದ್ದೆ''

"ಅದಕ್ಕೇನಪ್ಪಾ ಗುಂಡುಗೋವಿಗಳಿಗೆ ಹೆಣ್ಣು ಕೊಡಲು ಆತುರಪಡ ಬಾರದು. ಮದುವೆ ಎಂದರೆ ಹತ್ತು ಕಡೆ ವಿಚಾರಿಸಬೇಕು. ಹತ್ತು ಜನ ಹೇಳುವ ಮಾತನ್ನು ಸಾವಧಾನದಿಂದ ಕೇಳಬೇಕು"

"ಇನ್ನು ಬುದ್ಧಿ ಬಂದಿತಲ್ಲಪ್ಪ" ಎಂದು ಹೇಳಿ ಊಟವನ್ನು ಮುಗಿಸಿದ ಗುಂಡೂರಾಯರು ಉತ್ತರಾಪೋಶನ ತೆಗೆದುಕೊಂಡು ಮೇಲೆದ್ದರು.

ಯಥಾಪ್ರಕಾರ ವೃದ್ಧರಿಬ್ಬರೂ ಹಜಾರದಲ್ಲಿ ತಾಂಬೂಲ ಚರ್ವಣ ಮಾಡುತ್ತಾ ಕುಳಿತುಕೊಂಡರು.

ಆಗ ಗುಂಡೂರಾಯರು "ಈ ಶ್ರಾವಣದಲ್ಲಿ ಇರುವುದು ಇನ್ನೊಂದೇ ಲಗ್ನ. ಅದೂ ಇನ್ನೂ ಹತ್ತು ದಿನಗಳಿವೆ. ಈಗೇನು ಮಾಡುವುದು ಹೇಳು" ಎಂದರು.

ಕೂಡಲೇ ಹೇಳುವುದೇ ಬೇಡವೇ ಎಂದು ವೆಂಕಟೇಶಯ್ಯನವರು ಯೋಚನೆ ಮಾಡಿ ಹೇಳುವುದೆಂದೇ ತೀರ್ಮಾನ ಮಾಡಿದರು.

"ನೋಡು, ಗುಂಡಣ್ಣ. ನಾನು ಬಂದುದರಿಂದ ಲಗ್ನಕಾರ್ಯಕ್ಕೆ ಅಡಚಣೆಯಾಯಿತಲ್ಲಾ. ಈ ಮದುವೆಯನ್ನು ನಾನು ಒಡೆದೆನೆಂದುಕೊಳ್ಳಬೇಡ. ಈ ಆನಂದರಾಯ ಪ್ರಯೋಜನವಿಲ್ಲವೆಂದು ತೀರ್ಮಾನಿಸಿದಾಗಲೇ ನಮ್ಮ ಭಾಗ್ಯಳಿಗೆ ಬೇರೊಬ್ಬ ವರನನ್ನು ಗೊತ್ತು ಮಾಡಿದ್ದೇನೆ— —"

ಹಸನ್ಮುಖರಾಗಿದ್ದ ವೆಂಕಟೇಶಯ್ಯನವರು ಏನು ಹೇಳುತ್ತಾರೆಯೋ ಎಂದು ಆತುರದಿಂದ ನೋಡಿದರು ಗುಂಡೂರಾಯರು.

"ಇನ್ನು ಹತ್ತು ದಿನಕ್ಕೇ ಲಗ್ನಮಾಡುವ ಏರ್ಪಾಟುಗಳನ್ನು ಮಾಡು ... ಹೊತ್ತೇ ಲಗ್ನಮಾಡಿ ಮುಗಿಸಿ ಬಿಡೋಣ. ಭಾಗ್ಯ ... ನಿಗೆ ಕೊಟ್ಟುಬಿಡು"

... ರುವ ಮಾತು ಸ್ವಪ್ನದಲ್ಲಿಯೋ ಜಾಗ್ರತಾವಸ್ಥೆಯಲ್ಲಿ ... ಊರಾಯರು ಯೋಚಿಸುತ್ತಿರುವಂತೆಯೇ ವೆಂಕಟೇಶಯ್ಯ ... ು ತಮ್ಮ ಮಾತನ್ನು ಮುಂದುವರಿಸಿದರು.

"ರಂಗಣ್ಣನ ತಾಯಿತಂದೆಗಳು ಮಗನಿಗೆ ಲಗ್ನಮಾಡಲು ಆತುರರಾಗಿದ್ದಾರೆ. ಅವನ ತಂದೆ ಪಟ್ಟಾಭಿರಾಮಯ್ಯನವರ ಅಭಿಪ್ರಾಯವನ್ನು ನಾನು ಚೆನ್ನಾಗಿ ಬಲ್ಲೆ. ಇನ್ನು ಹತ್ತು ದಿನಗಳಿಗೆ ಎನ್ನುವುದು ಹಾಗಿರಲಿ,

ನಾಳೇ ಬೆಳಗಾಗ ಲಗ್ನ ಎಂದರೂ ಅವರು ಒಪ್ಪಿಕೊಳ್ಳುತ್ತಾರೆ. ಲಗ್ನಕ್ಕೆ ತಕರಾರು ಮಾಡುತ್ತಿದ್ದವನು ರಾಜಣ್ಣ. ಕಷ್ಟಪಟ್ಟು ಇವನನ್ನು ಲಗ್ನಕ್ಕೆ ಒಪ್ಪಿಸಿದ್ದೇನೆ. ನೀನೇನು ಹೇಳುತ್ತೀಯೆ?''

"ನಾನು ಹೇಳುವುದೇನು? ದಮ್ಮಯ್ಯ ಎಂದು ಒಪ್ಪಿಕೊಳ್ಳುತ್ತೇನೆ. ನೀನು ನಿಂತು ಈ ಲಗ್ನಕ್ಕೇ ಭಾಗ್ಯಳ ಕೊರಳಿಗೆ ತಾಳೀ ಕಟ್ಟಿಸಿ ಬಿಡಯ್ಯಾ"

"ನೀನೊಬ್ಬ ಹೇಳಿದರೆ ಆಯಿತೇನಯ್ಯಾ. ಹೆಣ್ಣು ಹೆತ್ತವರು ಒಪ್ಪಿಕೊಳ್ಳಬೇಕೋ ಬೇಡವೋ? ಇಷ್ಟು ಹೊತ್ತೂ ಇಲ್ಲಿ ನಿಂತಿದ್ದಾಕೆ ಒಳಗೆ ಹೋಗಿದ್ದಾರು'' ಎಂದು ಹೇಳಿ ನಗುತ್ತಾ ವೆಂಕಟೇಶಯ್ಯನವರು "ವಿಶಾಲಾಕ್ಷಮ್ಮ" ಎಂದು ಕರೆದರು.

ಇಷ್ಟುಹೊತ್ತೂ ನಡುಮನೆಯ ಬಾಗಿಲಿನಲ್ಲಿಯೇ ನಿಂತು ಮಾತು ಕೇಳುತ್ತಿದ್ದ ವಿಶಾಲಾಕ್ಷಮ್ಮ, ವೆಂಕಟೇಶಯ್ಯನವರು ಕರೆದ ಸಮಯದಲ್ಲಿ ಪತಿ ತಿಮ್ಮಪ್ಪನಿಗೆ ಕೈ ಮುಗಿಯುತ್ತಿದ್ದರು.

—o—